ಶ್ರೀರಸ್ತು.

ಶ್ರೀ ಗುರು ಸಾಂಬಸದಾಶಿವಾಯ ನಮಃ.

ಸ್ಕಾಂದ ಪುರಾಣೋಕ್ತ ಶಿವರಹಸ್ಯ ನಿಬಿಡವಾದ

# ಬ್ರಹ್ಮೋತ್ತರ ಖಂಡವು.



ಬ್ರ॥ ಶ್ರೀ॥ ಕವಿನಾಗಶರ್ಮರಿಂದ ಪರಿಷ್ಕರಿಸಲ್ಪಟ್ಟುದು.



ಟಿ. ಕೆ. ಕೃಷ್ಣಸ್ವಾಮಿಶೆಟ್ಟಿ,

ಕಲಾನಿಧಿ ಬುಕ್ ಡಿಪೋ,

ಚಿಕ್ಕಪೇಟೆ, ಬೆಂಗಳೂರು ಸಿಟಿ.

ಇವರ ಸ್ವಕೀಯ

ಕಳಾನಿಧಿ ಮುದ್ರಾಲಯದಲ್ಲಿ ಮುದ್ರಿಸಲ್ಪಟ್ಟಿತು.

ದ್ವಿತೀಯ ಮುದ್ರಣ ೧೦೦೦ ಪ್ರತಿಗಳು

ಬೆಂಗಳೂರು ಸಿಟಿ.

ಕ್ರಯ ೦—೧೨—೦.] 1939 [ಅಂಚೆ ವೆಚ್ಚ ಬೇರೆ.

# ಉತ್ತರಖಂಡದ ವಿಷಯಾನುಕ್ರಮಣಿಕೆ.







ಶ್ರೀ ಸಾಂಬಸದಾಶಿವಾಯ ನಮಃ.

# ಬ್ರಹ್ಮೋತ್ತರ ಖಂಡ.



ಶ್ಲೋ ॥ ಮೌಳವಮೌಕ್ತಿಕಸನ್ನಿಭಾಃ ಪಟುಜಟಾವಲ್ಲೀಷುಮಲ್ಲೀನಿಭಾಃ ।
ಕಂಠೇಹಾರವಿಹಾರಿಣೋಂಜಲಿಪುಟೆ ಫುಲ್ಲಪ್ರಸೂನಪಭಾಃ ॥
ಭೂಮೌಪಾತಿತಪುಷ್ಪವೃಷ್ಟಿ ಸದೃಶಸ್ತಾರಾನಿಭಾಶ್ಚಾಂಬರೇ ।
ಶಂಭೋರ್ವಶ್ಯುಭದಾಭವಂತು ನಟನೇ ಗಂಗಾಪಯೋಬಿಂದವಃ ॥

ವಚನ॥ ಈ ಪ್ರಕಾರವಾಗಿ ಲೀಲಾತಾಂಡವಮೂರ್ತಿಯಾಗಿ ನಾಟ್ಯವನ್ನು ಆಡುತ್ತಾ ಇದ್ದಂಥಾ ಪರಮೇಶ್ವರನ ಜಟಾಮುಕುಟದಲ್ಲಿರ್ದ ಗಂಗಾದೇವಿಯ ಶೀತಳವಾದ ಉದಕ ಬಿಂದುಗಳು ಯಾವ ಪ್ರಕಾರದಲ್ಲಿ ಇರುತ್ತಿದ್ದವೆಂದರೆ—ಶಿರಸ್ಸಿನಲ್ಲಿ ಮುತ್ತಿನ ಮಣಿಗಳಿಗೆ ಸಮಾನವಾಗಿಯೂ, ಜಡೆಗಳಲ್ಲಿ ಮಲ್ಲಿಗೆಯ ಪುಷ್ಪಗಳಿಗೆ ಸಮಾನವಾಗಿಯೂ, ಕೊರಳಿನಲ್ಲಿ ಕಂಠಮಾಲೆಯೋಪಾದಿಯಲ್ಲಿಯೂ, ಕೈಬೊಗಸೆಯಲ್ಲಿ ತುಂಬಲ್ಪಟ್ಟ ಪುಷ್ಪಗಳೋಪಾದಿಯಲ್ಲಿಯೂ, ಭೂಮಿಯಲ್ಲಿ

---

ಪುಷ್ಪವೃಷ್ಟಿಗೆ ಸಮಾನವಾಗಿಯೂ, ಆಕಾಶದಲ್ಲಿ ನಕ್ಷತ್ರಗಳೋಪಾದಿಯಲ್ಲಿ, ಭೂಷಣಗಳಾಗಿಯೂ ಇರುತ್ತಿರುವ ಗಂಗಾದೇವಿಯ ಉದಕಬಿಂದುಗಳು ನಮ ಗಾಯುರಾರೋಗ್ಯ ಐಶ್ವರ್ಯಂಗಳಂ ಕೊಟ್ಟು ರಕ್ಷಿಸಲೀಯೆಂಬುದೆ ಈ ಗ್ರಂಥದ ಮಂಗಳಾಚರಣೆಯು. ಸಚ್ಚಿದಾನಂದ ತೇಜೋಜ್ಞಾನ ಸುಖಸ್ವರೂಪನಾಗಿ ಬಿಡಲ್ಪಟ್ಟ ಸತ್ವರಜಸ್ತಮೋಗುಣಂಗಳ ವ್ಯಾಪಾರಂಗಳುಳ್ಳಂಥಾ ಮಂಗಳಸ್ವರೂ ಪನಾದ ಪರಮೇಶ್ವರನ ತತ್ವಜ್ಞಾನವನ್ನರಿಯಲಿಚ್ಛೆಯುಳ್ಳಂಥಾ ನೈಮಿಶಾರಣ್ಯ ವಾಸಿಗಳಾದ ಶಿವಭಕ್ತಿಸಂಪನ್ನರಾದ ಶೌನಕಾದಿಮುನಿಗಳು ಸೂತಪುರಾಣೀಕನಂ ಕುರಿತು, ಎಲೈ ಸೂತಪುರಾಣೀಕನೇ ! ನಿನ್ನಿಂದ ಬ್ರಹ್ಮಕ್ಷೇತ್ರವಾದ ಪ್ರಯಾಗೆ ಯಲ್ಲಿ ಪೂರ್ವಖಂಡದೊಳು ಶುಭಪ್ರದವಾದ ಪಾಪಹರವಾದ ಮಹಾವಿಷ್ಣುವಿನ ಮಹಾತ್ಮೆಯು ಹೇಳಲ್ಪಟ್ಟಿತು. ಈಗ ಪರಮೇಶ್ವರನ ಮಹಿಮೆಯುನ್ನು ಕೇಳಬೇ ಕೆಂದು ಇಚ್ಛೈಸುತ್ತಾ ಇದ್ದೇವೆ, ಶಿವನ ಮಹಿಮೆಯನ್ನು ಶಿವಭಕ್ತಿಯ ಮಹಿಮೆ ಯನ್ನು ಶಿವಮಂತ್ರಂಗಳ ಮಹಿಮೆಯನ್ನು ಶಿವತಂತ್ರಂಗಳ ಮಹಿಮೆಯನ್ನು ಶಿವ ಪೂಜಾ ಮಹಿಮೆಯನ್ನು ಸವಿಸ್ತಾರವಾಗಿ ನಿರೂಪಿಸಬೇಕೆಂದ ಕೇಳಲಾಗಿ, ಸೂತ ಪುರಾಣೀಕನು ಆ ಮುನಿಗಳನ್ನು ಕೊಂಡಾಡಿ, ಎಲೈ ಮುನಿಗಳಿರಾ ! ಲೋಕದಲ್ಲಿ ಮನುಷ್ಯರಿಗೆ ಶಿವನಲ್ಲಿ ನಿಷ್ಕಾಮ ಭಕ್ತಿ ಹುಟ್ಟುವುದೇ ಮಹಾ ದುರ್ಲಭವು, ಅದು ಕಾರಣವಾಗಿ ಶಿವಭಕ್ತಿಮಹಿಮೆಯನ್ನು ವಿಸ್ತಾರವಾಗಿ ಹೇಳಬೇಕೆಂದರೆ, ಒಂದು ಕಲ್ಪಕ್ಕೂ ಶಕ್ಯವಲ್ಲವಾದ್ದರಿಂದ ಶಿವಭಕ್ತಿಮಹಿಮೆಯನ್ನು ಸ್ವಲ್ಪಮಾತ್ರ ಹೇಳು ವೆನು, ಸಾವಧಾನವಾಗಿ ಕೇಳಿ. ಸಮಸ್ತಪುಣ್ಯಗಳಿಗೂ ಸಮಸ್ತ ಯಜ್ಞಂಗಳಿಗೂ ಜಪಯಜ್ಞಂಗಳು ಉತ್ತಮವೆಂದು ಹೇಳಲ್ಪಟ್ಟವು. ಆ ಜಪಯಜ್ಞಗಳಲ್ಲಿಯೂ "ಓಂನಮಃಶಿವಾಯ" ಎಂಬ ಷಡಕ್ಷರ ಮಂತ್ರರಾಜವು ಸಕಲ ಮಂತ್ರಗಳಿಗೂ ಅಧಿಕವಾದದ್ದೆಂದು ದೂರ್ವಾಸಾದಿ ಮಹಾಮುನಿಗಳು ಹೇಳಿದ್ದಾರೆ ಹೇಗೆಂದರೆ:-

ಸಮಸ್ತ ದೇವತೆಗಳಲ್ಲಿ ಶಿವನು ಹೇಗೋ ಹಾಗೆಯೇ ಸಕಲ ಮಂತ್ರಗಳ ಲ್ಲಿಯು ಶಿವಷಡಕ್ಷರಿಯೂ ಉತ್ತಮವಾದದ್ದು. ಈ ಪಂಚಾಕ್ಷರಿಯನ್ನು ಜಪಿಸಿ ದರೆ ಸರ್ವಸಿದ್ಧಿಗಳನ್ನು ಮೋಕ್ಷವನ್ನು ಕೊಡುವುದು. ಈ ಪಂಚಾಕ್ಷರ ಮಂತ್ರ ದಲ್ಲಿ ಒಂದು ಅಕ್ಷರದ ಮಹಿಮೆಯನ್ನು ಹೇಳುವುದಕ್ಕೆ ಚತುರ್ಮುಖ ಬ್ರಹ್ಮನೂ ಸಮರ್ಥನಲ್ಲ. ನಿರ್ಮಲವಾದ ವೇದಂಗಳು ಓಂಕಾರ ಮಹಿಮೆಯನ್ನು ಹೇಳುತ್ತಿ ರುವುವು. ಯಾವ ಪಂಚಾಕ್ಷರಿಯಲ್ಲಿ ಶಿವನು ಇರುತ್ತಿದ್ದಾನೋ ಮಂತ್ರ ರಾಜವಾದ ಆ ಪಂಚಾಕ್ಷರಿಯ ಜಪದಿಂದಲೇ ಸಮಸ್ತ ಮುನಿಗಳು ಮುಕ್ತಿಯಂ ಪಡೆದರು. ನಮಃಶಬ್ದದಿಂದ ಜೀವನು ಹೇಳಲ್ಪಟ್ಟನು. ಶಿವಶಬ್ದದಿಂದ ಪರ ಮಾತ್ಮನು ಹೇಳಲ್ಪಟ್ಟನು. ಆಯ ಎಂಬ ಚತುರ್ಥ್ಯಂತದಿಂದ ಜೀವಾತ್ಮ ಪರ ಮಾತ್ಮರ ಐಕ್ಯವು ಹೇಳಲ್ಪಟ್ಟಿತು. ಅದರಿಂದೀಪಂಚಾಕ್ಷರಿಯು ಪರಬ್ರಹ್ಮ

ಸರೂಪವಾದದ್ದು. ಈ ಸಂಸಾರವೆಂಬ ಹಗ್ಗದಿಂದ ಕಟ್ಟಲ್ಪಟ್ಟಂಥಾ ಮನು ಷ್ಯರಿಗೆ ಶಿವನು ತಾನೇ ಈ ಪಂಚಾಕ್ಷರಿಯ ಮಂತ್ರವನ್ನು ನಿರೂಪಿಸಿದನು. ಯಾವ ನೊಬ್ಬನ ಹೃದಯದಲ್ಲಿ ಈ ಪಂಚಾಕ್ಷರೀ ಮಂತ್ರವು ಇರುತ್ತಿದ್ದೀತೋ, ಅವನಿಗೆ ತೀರ್ಥ ಸ್ನಾನಂಗಳಿಂದಲೂ ಜಪಗಳಿಂದಲೂ ಯಜ್ಞಗಳಿಂದಲೂ ಏನು ಪ್ರಯೋಜನ ? ದುಃಖದೊಡನೆ ಕೂಡಿದ ಈ ಸಂಸಾರದಲ್ಲಿ ಮನುಷ್ಯನು ಯಾವ ಪರ್ಯಂತರ ಈ ಮಂತ್ರವಂ ಜಪಿಸದೆ ಇರ್ದಾನೋ ಆ ಪರ್ಯಂತರವೂ ತೊಳಲು ವನು. ಮಂತ್ರರಾಜವು ವೇದಾಂತಗಳಿಗೆ ಸಾರಭೂತವಾದದ್ದು ಜ್ಞಾನಕ್ಕೆ ಸಾಧನ ವಾದದ್ದು ಮೋಕ್ಷಮಾರ್ಗಕ್ಕೆ ದೀಪವಾದದು. ಆ ಜ್ಞಾನವೆಂಬ ಸಮುದ್ರಕ್ಕೆ ಬಡಬಾಗ್ನಿಯಾದದ್ದು. ಮಹಾ ಪಾತಕವೆಂಬ ವನಕ್ಕೆ ಕಾಡುಕಿಚ್ಚಾದದ್ದು. ಅದರಿಂದ ಮುಕ್ತಿಯಂ ಬಯಸುವ ಸ್ತ್ರೀ ಶೂದ್ರರು ಓಂಕಾರ ಹೊರತಾಗಿ ನಮಶ್ಶಿವಾಯ ಎಂಬ ಪಂಚಾಕ್ಷರಿಯನ್ನೇ ಜಪಿಸಬೇಕು. ಸದಾಕಾಲದಲ್ಲಿಯೂ ಶುಚಿಯಾಗಿರ್ದು ಈ ಪಂಚಾಕ್ಷರಿಯನ್ನು ಜಪಿಸುವುದಕ್ಕೆ ದೀಕ್ಷೆಹೋಮ ತರ್ಪಣ ಸಂಸ್ಕಾರ ಕಾಲನಿಯಮ ಗುರೂಗದೇಶಂಗಳಂ ಬಯಸತಕ್ಕದ್ದಲ್ಲ. ಮಹಾ ಪಾತಕಂಗಳಂ ಪರಿಹರಿಸುವದಕ್ಕೆ ಶಿವಾ ಎಂಬ ಅಕ್ಷರದ್ವಯವೇ ಸಾಕು. ಚತುರ್ಥ್ಯಂತವಾದ ಶಿವಶಬ್ದವು ನಮಶ್ಶಬ್ದದೊಡನೆ ಕೂಡಿದರೆ ಮುಕ್ತಿಯನ್ನು ಕೊಡುವದು. ಈ ಮಂತ್ರವು ಪುಣ್ಯಕ್ಷೇತ್ರಂಗಳಲ್ಲಿ ಗುರುಮುಖವ ಉಪದೇಶ ಪಡೆದು ಜಪಿಸಿದರೆ ಆಕ್ಷಣದಲ್ಲಿಯೇ ಇಷ್ಟಾರ್ಥಂಗಳನ್ನು ಕೊಡುವದೆಂಬು ದರಲ್ಲಿ ಏನು ಆಶ್ಚರ್ಯ ? ಗುರುಗಳ ಲಕ್ಷಣವೇನೆಂದರೆ ನಮ್ಮವರು ಎಂಬ ಮಮ ಕಾರವನ್ನು ಬಿಟ್ಟು ಶಾಂತರಾಗಿ, ಮಿತಭಾಷಿಗಳಾಗಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಂಗಳೆಂಬ ಅರಿಷಡ್ವರ್ಗವಂ ತೊರೆದು, ಇಂದ್ರಿಯಂ ಗಳಂ ನಿಗ್ರಹಿಸಿಕೊಂಡು ಸದಾಚಾರ ಸಂಪನ್ನರಾದವರೆ ಗುರುಗಳು ಇಂಥಾ ಗುರುಗಳ ದಯದಿಂದ ಉಪದೇಶವಂ ಪಡೆದರೆ ಆ ಮಂತ್ರವು ಶೀಘ್ರ ವಾಗಿಯೇ ಸಿದ್ಧಿಸುವದು. ಮಂತ್ರಜಪಕ್ಕೆ ಯೋಗ್ಯವಾದ ಸ್ಥಳಂಗಳಾವು ವೆಂದರೆ,—ಪ್ರಯಾಗೆ, ಪುಷ್ಕರ, ಕೇದಾರ, ರಾಮೇಶ್ವರ, ಗೋಕರ್ಣ, ನೈಮಿಶಾ ರಣ್ಯಗಳೇ ಉಪದೇಶಕ್ಕೆ ಯೋಗ್ಯಸ್ಥಳಂಗಳು. ಆ ಅರ್ಥದಲ್ಲಿ ಒಂದು ಬಾರಿ ಕೇಳಿದರೂ ಮಂಗಳವಂ ಕೊಡುವಂಥಾ ಪುರಾತನವಾದ ಒಂದಾನೊಂದು ಇತಿ ಹಾಸವಂ ಪೇಳುವೆನು, ಕೇಳಿ

ಅದೆಂತೆಂದರೆ.—ಮಧುರಾ ಪಟ್ಟಣದಲ್ಲಿ ಯದುವಂಶೋತ್ಪನ್ನನಾದ ದಾಶಾರ್ಹನೆಂಬೊಬ್ಬ ರಾಯನಿದ್ದನು ಆತನು ಕೀರ್ತಿ ಉತ್ಸಾಹ ಬಲ ಪರಾ ಕ್ರಮ ಐಶ್ವರ್ಯ ಗಾಂಭೀರ್ಯಧೈರ್ಯ ನಯವಿನಯಂಗಳುಳ್ಳವನಾಗಿಯೂ, ದಾನಿಯಾಗಿ ಕ್ಷಾತ್ರವಂತನಾಗಿ ಶಾಸ್ತ್ರಜ್ಞನಾಗಿಯು, ಅಸ್ತ್ರಶಸ್ತ್ರಂಗಳ ಪ್ರಯೋಗದಲ್ಲಿಯೂ

ಉಪಸಂಹಾರದಲ್ಲಿಯೂ ಸಮರ್ಥನಾಗಿಯೂ ಯುದ್ಧದಲ್ಲಿ ತನ್ನನ್ನೂ ಸಾರಥಿಯನ್ನೂ ಕುದುರೆಗಳನ್ನೂ ರಕ್ಷಿಸುವ ಶಕ್ತಿಯುಳ್ಳವನಾಗಿಯೂ, ರೂಪು ಯೌವನ ನಯವಿನಯಯುಕ್ತನಾಗಿಯೂ ಸರ್ವಲಕ್ಷಣ ಸಂಪನ್ನನಾಗಿ ಇರುತ್ತಿರ್ದನು. ಆ ದಾಶಾರ್ಹರಾಯನು ಸೌಂದರ್ಯ ಸದಾಚಾರ ಸದ್ಗುಣಂಗಳುಳ್ಳ ಕಳಾವತಿಯೆಂಬ ಹೆಸರುಳ್ಳ ಕಾಶೀರಾಯನ ಕುಮಾರಿಯನ್ನು ವಿವಾಹವಾಗಿ ತನ್ನ ಮನೆಗೆ ಕರೆತಂದು, ಆ ರಾತ್ರಿಯಲ್ಲಿ ಕೇಳೀಗೃಹದೊಳು ಹಂಸತೂಲಿಕಾ ತಲ್ಪವನ್ನೈದಿದವನಾಗಿ ಆ ಕಳಾವತಿಯಂ ಭೋಗಕ್ಕೆ ಕರೆಯಲು, ಆ ಸ್ತ್ರೀಯು ತನ್ನ ಪತಿಯಿಂದ ಬಹಳವಾಗಿ ಕರೆಯಲ್ಪಟ್ಟವಳಾದರೂ ಆತನಲ್ಲಿ ಮನಸ್ಸನ್ನಿರಿಸದೆ ಸಮೀಪಕ್ಕೂ ಬಾರದೇ ಇರಲಾಗಿ, ಆತನು ಬಲಾತ್ಕಾರದಿಂದಾಕೆಯಂ ಭೋಗಿಸಲೂಹಿಸಿ, ಹಂಸತೂಲಿಕಾ ತಲ್ಪದಿಂದ ಎದ್ದು ಬರಲಾಗಿ, ಆತನಂ ಕುರಿತು ಕಳಾವತಿಯು ಒಂದಾನೊಂದು ಮಾತನ್ನು ಹೇಳಿದಳು.

ಎಲೈ ಮಹಾರಾಯನೇ ? ಒಂದಾನೊಂದು ಕಾರಣದಿಂದ ವ್ರತಸ್ಥೆಯಾಗಿದ್ದಂಥಾ ನನ್ನನ್ನು ಮುಟ್ಟಬೇಡ, ನೀನು ಧರ್ಮಾಧರ್ಮಂಗಳಂ ಬಲ್ಲೆ. ನನ್ನಲ್ಲಿ ಸಾಹಸವಂ ಮಾಡಬೇಡ. ಲೋಕದಲ್ಲಿ ಪ್ರೀತಿಯಿದ್ದ ಕಡೆಯಲ್ಲಿ ಭೋಜನವು ರುಚಿಸುವಹಾಗೆ ಪ್ರೀತಿಯಿಲ್ಲದ ಕಡೆಯಲ್ಲಿ ಹೇಗೆ ರುಚಿಸದೋ ಹಾಗೆ ಸ್ತ್ರೀ ಪುರುಷರಿಗೆ ಪ್ರೀತಿಯಿಲ್ಲದಿರ್ದೊಡೆ ಸಂಭೋಗವು ರುಚಿಸದು ಆದಕಾರಣ ನಾನು ಪ್ರಿತಿಯುಂಟಾಗಿ ನಿನ್ನೆಡೆಗೆ ಯಾವಾಗ ಬರುವೆನೋ ಆಗ ನನ್ನೊಡನೆ ಕ್ರೀಡಿಸು ಈಗ ಕ್ರೀಡಿಸದೆ ಬಿಡು ಬಲಾತ್ಕಾರದಿಂದ ನನ್ನಂಥ ಸ್ತ್ರೀಯರ ಸಂಭೋಗಿಸುವರ್ಗೆ ಆವ ಪ್ರೀತಿ ಏನು ಸುಖ. ಆದ್ದರಿಂದ ರತಿಸುಖ ಬಲ್ಲವರು ಪ್ರೀತಿ ಇಲ್ಲದವಳನ್ನು, ರೋಗಪೀಡಿತೆಯನ್ನು. ಬಸುರಾದವಳನ್ನು ಮೈನೆರೆಯದೇ ಇದ್ದ ಕನ್ನಿಕೆಯನ್ನೂ ವ್ರತವ ಕೈಗೊಂಡವಳನ್ನು ಸೂತಕವುಳ್ಳವಳನ್ನು, ನವೆದವಳನ್ನೂ ಕ್ರೀಡಿಸಲಾಗದೆಂದು ಹೇಳುವರು ಪುಷ್ಪದಲ್ಲಿಯು ಸ್ತ್ರೀಯರಲ್ಲಿಯು ಸುಖವನ್ನು ಬಯಸುವನು ದಯೆ, ಪ್ರೀತಿ, ಲಾಲನೆ, ಮೃದುತ್ವಂಗಳುಳ್ಳವನಾಗಬೇಕು. ಇಂತೆಂದು ಪತಿವ್ರತೆಯಾದ ತನ್ನ ಪತ್ನಿಯಿಂದ ಹೇಳಲ್ಪಟ್ಟವನಾದರೂ ಆ ರಾಯನು ಕಾಮದಿಂದ ಮುಂಗೆಟ್ಟವನಾಗಿ, ಬಲಾತ್ಕಾರದಿಂದ ಆಲಿಂಗಿಸಿಕೊಂಡಮಾತ್ರದಿಂದಲೇ ಕಾದ ಕಬ್ಬಿಣ ಸೋಂಕಿದೋಪಾದಿಯಲ್ಲಿ ಸುಡುವ ಅವಯಂಗಳುಳ್ಳವನಾಗಿ ಭಯಪಟ್ಟು, ಚಿಕ್ಕಸಂಬಟು, ಎಳದಳಿರೋಪಾದಿಯಲ್ಲಿ ಮೃದುವಾದ ನನ್ನ ಶರೀರವು ಆವಕಾರಣದಿಂದ ಅಗ್ನಿಯ ಮರ್ಯಾದೆಯಲ್ಲಿ ಸುಡುತ್ತಲಿದೆ ಇದೇನಾಶ್ಚರ್ಯವೆಂದು ನುಡಿಯಲಾಗಿ, ಆ ಕಳಾವತಿಯು ಮುಗುಳು ನಗೆಯಂ ನಕ್ಕು ವಿನಯದಿಂದ ಪರಿಹಾಸಕವನ್ನಾಡಿ ತನ್ನ ಪ್ರಿಯಂಗೆ ಇಂತೆಂದಳು.

ಎಲೈ ಅರಸೇ ! ಕೇಳು ನಾನು ಪೂರ್ವದಲ್ಲಿ ಚಿಕ್ಕವಳಾಗಿದ್ದಾಗ ನನಗೆ ದೂರ್ವಾಸಮುನಿಯು ಶಿವಪಂಚಾಕ್ಷರಿಯನ್ನು ಕೃಪೆಯಿಂದ ಉಪದೇಶವಂ ಮಾಡಿದನು. ಆ ಮಂತ್ರಪ್ರಭಾವದಿಂದ ಎನ್ನ ಶರೀರವು ಪಾಪದಿಂದ ಬಿಡಲ್ಪಟ್ಟಿತು. ಅದುಕಾರಣವಾಗಿ ಮಂತ್ರೋಪದೇಶವಿಲ್ಲದ ಪುರುಷರಿಂದ ಮುಟ್ಟುವದಕ್ಕೆ ಶಕ್ಯವಲ್ಲ. ರಜೋಗುಣಯುಕ್ತನಾದ ನಿನ್ನಿಂದ ಮದ್ಯಪಾನ ನಿರತರಾದ ಸ್ತ್ರೀಯರು, ಜಾರೆಯರು, ವೇಶ್ಯೆಯರು, ಅನುಭವಿಸಲ್ಪಡುತ್ತಿದ್ದಾರೆ. ನೀನು ಒಂದು ಬಾರಿಯು ಸ್ನಾನವಂ ಮಾಡಿ ಶುಚಿಯಾಗಿ ಪಂಚಾಕ್ಷರಿಯಂ ಜಪಿಸಿ, ಶಿವಪೂಜೆಯಂ ಮಾಡಿದವನಲ್ಲ. ಇಂಥಾ ನೀನು ನನ್ನನ್ನು ಮುಟ್ಟುವದಕ್ಕೆ ಹೇಗೆ ಸಮರ್ಥನಾಗುವೆ ? ಆದಕಾರಣ ಎನ್ನೊಡನೆ ಸಂಭೋಗವಂ ಬಯಸಿದಂಥಾವನಾದೊಡೆ ಸದ್ಗುರುವಿನಿಂದ ಶಿವ ಪಂಚಾಕ್ಷರೀ ಉಪದೇಶವಂ ಪಡೆ ಎನಲು ಇಂತೆಂದ ಕಳಾವತಿಗೆ ದಾಶಾರ್ಹನಿಂತೆಂದನು.

ಎಲೈ ಶೋಭನಾಂಗಿಯಾದ ಪ್ರಾಣಕಾಂತೆಯೇ! ಆ ಪಂಚಾಕ್ಷರೀ ಮಂತ್ರವನ್ನು ನೀನೇ ನನಗೆ ಉಪದೇಶ ಮಾಡು, ಆ ಪಂಚಾಕ್ಷರ ಮಂತ್ರ ಪ್ರಭಾವದಿಂದ ಪಾಪರಹಿತನಾಗಿ ನಿನ್ನೊಡನೆ ರಮಿಸುವೆನೆನಲು, ಆ ಕಳಾವತಿಯು ಎಲೈ ಅರಸೇ ! ಸ್ತ್ರೀಯರಿಗೆ ಪತಿಯೇ ಗುರುವು. ಆದ್ದರಿಂದ ನಾನು ನಿನಗೆ ಉಪದೇಶ ಮಾಡಲಾಗದು. ಮಂತ್ರಜ್ಞರೊಳಗೆ ಶ್ರೇಷ್ಠನಾದ ಗರ್ಗಮಹಾಮುನಿಯ ಸನ್ನಿಧಾನಕ್ಕೆ ಹೋಗಿ ಆತನಿಂದ ಉಪದೇಶವಂ ಪಡೆ, ಎಂದು ನುಡಿಯಲು; ಆ ಕಳಾವತಿಯ ಮಾತಂ ಕೇಳಿ, ಆ ರಾಯನು ಆಕೆಯಂ ಕರೆದುಕೊಂಡು ಗರ್ಗಮಹಾಮುನಿಯ ಸಾನ್ನಿಧ್ಯಕ್ಕೆ ಹೋಗಿ ಸಾಷ್ಟಾಂಗವೆರಗಿ, ಅನಂತರದಲ್ಲಿ ಸಂತುಷ್ಟನಾದ ಗುರುವಂ ಮತ್ತೆಮತ್ತೆ ಪೂಜಿಸಿ ನಮ್ರನಾಗಿ ಏಕಾಂತದಲ್ಲಿ ತನ್ನ ಬಯಕೆಯಂ ಬಿನ್ನಹ ಮಾಡಿದನು.

ಅದೆಂತೆನೆ:—ಎಲೈ ಗುರುವೇ ! ಧೊರೆಗಳಿಗೆ ಜ್ಞಾನದಿಂದಲೂ ಅಜ್ಞಾನದಿಂದಲೂ ನಾನಾವಿಧಗಳಾದ ಪಾಪಂಗಳು ಸಂಭವಿಸುವವು ಅಲ್ಲದೆ ತಾನೋ ವೇಶ್ಯಾಸಕ್ತನಾಗಿ ನಿತ್ಯಕರ್ಮಂಗಳೆಲ್ಲವನ್ನು ವಿಸರ್ಜಿಸಿ, ಬಹಳವಾದ ಪಾಪಂಗಳಂ ಮಾಡಿದೆನು. ಈ ಪಾಪಂಗಳೆಲ್ಲವೂ ಪರಹರವಾಗುವಹಾಗೆ ಶಿವಪಂಚಾಕ್ಷರಿ ಮಂತ್ರವನ್ನು ಉಪದೇಶ ಮಾಡಿ ನನ್ನನ್ನು ಕೃತಾರ್ಥನನ್ನಾಗಿ ಮಾಡು. ಎಂದು ಬೇಡಿಕೊಳ್ಳಲಾಗಿ, ಬ್ರಾಹ್ಮಣೋತ್ತಮನಾದ ಆಗರ್ಗಮಹಾಮುನಿಯು ಆರಾಯನ ಬಿನ್ನಹವಂ ಕೇಳಿ, ಆ ಸ್ತ್ರೀಪುರುಷರು ಈರ್ವರಂ ಕರೆದುಕೊಂಡು ಪುಣ್ಯತೀರ್ಥವಾದ ಯಮುನಾನದಿಯ ತೀರಸನ್ನಿಧಿ ಅಲ್ಲಿ ಪುಣ್ಯವೃಕ್ಷವಾದೊಂದು ಅಶ್ವತ್ಥವೃಕ್ಷದ ಕೆಳಗೆ ಕುಳಿತುಕೊಂಡು ಆ ಯಮುನಾನದಿಯ ತೀರ್ಥದಲ್ಲಿ ಸ್ನಾನವಂ ಮಾಡಿ ಪರಿಶುದ್ಧನಾಗಿ ಬಂದಂಥ ರಾಯನಂ ತನ್ನ ಸಮೀಪದಲ್ಲಿ

ಮೂಡಲು ಮುಖವಾಗಿ ಕುಳ್ಳಿರಿಸಿ, ಶಿವನ ಪಾದಕಮಲ ಧ್ಯಾನವಂ ಮಾಡಿ, ಆ ರಾಯನ ಮಸ್ತಕದಲ್ಲಿ ಹಸ್ತವನ್ನಿರಿಸಿ ದಕ್ಷಿಣ ಕರ್ಣದಲ್ಲಿ ಶಿವಸ್ವರೂಪವಾದ ಪಂಚಾಕ್ಷರಿ ಮಂತ್ರವನ್ನು ಉಪದೇಶ ಮಾಡಿದನು. ಅನಂತರದಲ್ಲಿ ಪಂಚಾಕ್ಷರಿಯ ಮಂತ್ರೋಪದೇಶದ ಮಹಿಮೆಯಿಂದಲೂ ಗುರುವಿನ ಹಸ್ತಸಂಯೋಗದಿಂದಲೂ ಆ ರಾಯನ ಶರೀರದಿಂದ ನೂರುಕೋಟಿ ಕಾಗೆಗಳು ಹೊರಟು ಸುಡಲ್ಪಟ್ಟ ಗರಿಗಳುಳ್ಳವಾಗಿ ಕೂಗುತ್ತ ಭೂಮಿಯಲ್ಲಿ ಬಿದ್ದು ಭಸ್ಮವಾದವು. ಈ ಪ್ರಕಾರ ಸುಡಲ್ಪಟ್ಟ ಕಾಗೆಗಳ ಸಮೂಹವನ್ನು ನೋಡಿ ಆಶ್ಚರ್ಯಪಟ್ಟಂಥಾವರಾಗಿ, ಆ ರಾಯನೂ ಪತ್ನಿಯೂ ಗುರುವಂ ಕೇಳಿದರು, ಎಲೈ ಷಡ್ಗುಣೈಶ್ವರ್ಯ ಸಂಪನ್ನನಾದ ಮಹಾಮುನಿಯೇ ! ಈ ಶರೀರದಿಂದ ಕಾಗೆಗಳ ಸಮೂಹ ಹೇಗೆ ಹುಟ್ಟಿತು ? ಏನುಕಾರಣ ಭಸ್ಮವಾಯಿತು ? ಇದು ಮಹಾ ಆಶ್ಚರ್ಯ. ಈ ಅಭಿಪ್ರಾಯವನ್ನು ಹೇಳೆಂದು ಕೇಳಲಾಗಿ, ಆ ಮಾತನ್ನು ಕೇಳಿ ಗರ್ಗಮಹಾಮುನಿಯು ದಾಶಾರ್ಹರಾಯನಿಗೆ ಇಂತೆಂದನು.

ಕೇಳೈ ರಾಯನೇ ! ಅನೇಕ ಜನ್ಮಂಗಳಲ್ಲಿ ತೊಳಲಿ ತೊಳಲಿ ಬರುತ್ತಾ ಇದ್ದಂಥಾ ನಿನ್ನಿಂದ ಅನೇಕ ಪುಣ್ಯಮಾಡಿದರೂ ಪಾಪಂಗಳು ಅಧಿಕವಾಗಿದ್ದಾಗ ಪಾಪ ಯೋನಿಗಳಲ್ಲಿ ಹುಟ್ಟಿದೆ. ಈಗ ಪುಣ್ಯ ಪಾಪಂಗಳು ಸರಿಯಾಗಿ ಇದ್ದದ್ದರಿಂದ ಮನುಷ್ಯಯೋನಿಯಲ್ಲಿ ಹುಟ್ಟಿದೆ. ಯಾವಾಗ ಶೈವಪಂಚಾಕ್ಷರೀ ವಿದ್ಯೆ ನಿನ್ನ ಹೃದಯದಲ್ಲಿ ಪ್ರವೇಶಿಸಿತೋ ಆಗಲೇ ನಿನ್ನಲ್ಲಿದ್ದ ಅನೇಕ ಪಾಪಂಗಳು ಕಾಗೆಗಳ ಸ್ವರೂಪಗಳಾಗಿ ಶರೀರದಿಂದ ಹೊರಟವು. ಈ ಶೈವಪಂಚಾಕ್ಷರಿಯು ಹೃದಯದಲ್ಲಿ ಧರಿಸಲ್ಪಟ್ಟರೆ ಅನೇಕ ಕೋಟಿಬ್ರಹ್ಮಹತ್ಯೆಗಳು ಸುರಾಪಾನ ಸ್ವರ್ಣಸ್ತೇಯ ಗುರುತಲ್ಪಗಮನ ಶಿಶುಹತ್ಯಾದಿ ಮಹಾ ಪಾತಕಂಗಳೆಲ್ಲವು ಕ್ಷಣಮಾತ್ರದಲ್ಲಿ ಭಸ್ಮವಾಗುತ್ತವೆ. ಅನುಮಾನಿಸಬೇಡ ನಿನ್ನ ಪಾಪಂಗಳೆಲ್ಲವು ಭಸ್ಮವಾದವು. ಎಲೈ ರಾಯನೇ ! ಇನ್ನುಮೇಲೆ ಪರಿಶುದ್ಧನಾದ ಮನಸ್ಸುಳ್ಳವನಾಗಿ ಕ್ರೀಡಿಸೆಂದು ಹೇಳಿ ಗರ್ಗಮಹಾಮುನಿಯು ದಾಶಾರ್ಹನಿಗೆ ಮಂತ್ರೋಪದೇಶವಂ ಮಾಡಿ, ಆ ರಾಜದಂಪತಿಗಳಂ ಕರೆದುಕೊಂಡು ತನ್ನ ಮನೆಗೆ ಬಂದನು.

ಅನಂತರದಲ್ಲಿ ಮಹಾಕಾಂತಿಯಿಂದ ಕೂಡಿದ ಆ ಸ್ತ್ರೀಪುರುಷರು ಗುರುವಿನ ಅಪ್ಪಣೆಪಡೆದು ಸಂತಸ್ಟರಾಗಿ ತಮ್ಮ ಮನೆಯನ್ನೈದಿ ಸುಖದಿಂದ ಸಂಯೋಗವಂ ಮಾಡಿಕೊಂಡು ಸುಖವನ್ನನುಭವಿಸುತ್ತಿದ್ದರು. ಹೀಗೆ ಆ ದಾಶಾರ್ಹನು ನಕ್ಷತ್ರಗಳಂ ಕಂಡು ಚಂದ್ರನು ಹೇಗೆ ಸಂತೋಷಿಸುವನೋ ಹಾಗೆ ಶ್ರೀಗಂಧದೋಪಾದಿಯಲ್ಲಿ ತಂಪಾದ ಅವಯವಂಗಳುಳ್ಳ ತನ್ನ ಸ್ತ್ರೀಯನ್ನು ಶಂಕೆಯಿಲ್ಲದೆ ಆಲಿಂಗಿಸಿ ಸಂತೋಷವಂ ಪಡೆದನು.

ಎಲೈ ಮುನಿಗಳಿರಾ ! ಸಮಸ್ತ ವೇದಂಗಳಿಗೂ ಉಪನಿಷತ್ತುಗಳಿಗೂ ಪುರಾಣಂಗಳಿಗೂ ಶಿರೋಭೂಷಣವಾಗಿ ಸಕಲ ಪಾಪಂಗಳಂ ತ್ಯಜಿಸುವಲ್ಲಿ ಸಮರ್ಥವಾಗಿ ಅಗಸ್ತ್ಯ ಭೃಗು ದಧೀಚಿ ಗೌತಮ ಮೊದಲಾದ ಬ್ರಹ್ಮರ್ಷಿಗಳಿಂದಲೂ ರಾಮಚಂದ್ರ ಹರಿಶ್ಚಂದ್ರ ನಳಚಕ್ರವರ್ತಿ ಮೊದಲಾದ ರಾಯರುಗಳಿಂದಲೂ ಜಪಿಸಲ್ಪಟ್ಟಿಂಥಾದ್ದಾಗಿ, ಪರಶಿವತತ್ವ ಪ್ರತಿ ಪಾದಕವಾದ ಕಾರಣ ನಮಃಶಿವಾಯ ಎಂಬ ಪಂಚಾಕ್ಷರಿ ಮಂತ್ರವಂ ನೀವು ಯಾವಾಗಲೂ ಜಪಿಸಿರೆಂದು ಸೂತಪುರಾಣೀಕನು ಶೌನಕಾದಿ ಮುನಿಗಳಿಗೆ ನಿಯಮಿಸಿದನು.

ಇದು ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ
ವೀರನರಪತಿ ಬಿರುದೆಂತೆಂಬರಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ
ಸಾಳ್ವ ಗಂಡಭೇರುಂಡ ಧರಣೀ ವರಾಹ ಹನುಮದ್ಗರುಡ ಅಂಕುಶ
ಕುಠಾರ ಸಿಂಹಮೊದಲಾದ ನಾನಾ ಬಿರುದಾಂಕಿತ ಯಾದವ
ಕುಲತಿಲಕ ಆತ್ರೇಯಸ ಗೋತ್ರ ಅಶ್ವಲಾಯನ
ಸೂತ್ರ ಋಕ್ಶಾಖಾಧ್ಯಾಯಿಗಳಾದ
ಮಹಿಶೂರ ರಾಜಒಡೆಯರ ಪೌತ್ರರಾದ
ನರಸ ಭೂಪಾಲಕರ ಪುತ್ರರಾದ ಚಾಮರಾಜ ಒಡೆಯರವರು
ಕರ್ಣಾಟಕ ಭಾಷೆಯಿಂದ ವಿರಚಿಸಿದ ಸ್ಕಾಂದಪುರಾಣೋಕ್ತ
ಮಾದ ಬ್ರಹ್ಮೋತ್ತರಖಂಡದಲ್ಲಿ ಶಿವಪಂಚಾಕ್ಷರೀ
ಮಹಿಮೆ ಎಂಬ,
ಪ್ರಥಮಾಧ್ಯಾಯಂ ಸಮಾಪ್ತಂ. ಶ್ರೀ. ಶ್ರೀ.



## ಗೋಕರ್ಣಕ್ಷೇತ್ರ ಮಹಿಮೆ.

ಅನಂತರದಲ್ಲಿ ಸೂತಪುರಾಣೀಕನು ಶೌನಕಾದಿ ಮುನಿಗಳಿಗೆ ಇಂತೆಂದು ನಿರೂಪಿಸುತ್ತಿದ್ದನು.

ಎಲೈ ಮುನಿಗಳಿರಾ! ಪರಮೇಶ್ವರನ ಮಹಾತ್ಮೆಯನ್ನು ಹೇಳುವೆನು ಕೇಳಿ, ಅದಂ ಕೇಳಿದ ಮಾತ್ರದಿಂದಲೇ ಸಮಸ್ತ ಸಂಶಯಂಗಳು ಬಿಟ್ಟುಹೋಗುವವು. ಅದೆಂತೆಂದರೆ—ಮತ್ತೊಂದರಲ್ಲಿ ಮನಸ್ಸನ್ನು ಇರಿಸದೆ ಭಕ್ತಿಯಿಂದ ಶಿವಪೂಜೆಯನ್ನು ಮಾಡಿದವರಿಗೆ ಮಹಾಪಾತಕಂಗಳು ನಾಶವಕ್ಕುಂ. ಶಾಸ್ತ್ರಂಗಳಲ್ಲಿ ಹೇಳಲ್ಪಟ್ಟ ಪ್ರಾಯಶ್ಚಿತ್ತಂಗಳಿಂದ ಪರಿಹಾರವಾಗದಂಥಾ ಪಾಪಂಗಳಿಗೂ ನಿವಾರಕವಾಗುವುದು. ಇದೀಗ ಸಕಲ ಶಾಸ್ತ್ರಂಗಳಲ್ಲಿಯೂ ಉತ್ಕೃಷ್ಟವಾದ ಶ್ರೇಯಸ್ಸೆಂದು ನಿಶ್ಚೈಸಲ್ಪಟ್ಟಿದೆ ಜ್ಞಾನದಿಂದಲಾದರೂ ಅಜ್ಞಾನದಿಂದಲಾದರೂ

ಯಾವ ಕಾರಣದಿಂದಲಾದಲೂ ಶಿವನನ್ನು ಕುರಿತು ಮಾಡಿದಂಥಾ ಪೂಜೆಯು ಮುಕ್ತಿಯನ್ನೀಯುವುದು. ಶಿವರಾತ್ರಿಯೆನಿಸಿಕೊಂಬ ಮಾಘಮಾಸ ಕೃಷ್ಣ ಪಕ್ಷದ ಚತುರ್ದಶಿಯಲ್ಲಿ ಮನುಷ್ಯರಿಗೆ ಉಪವಾಸವು ಸುಲಭ. ಆ ಉಪವಾಸದಲ್ಲಿಯೂ ರಾತ್ರಿಯಲ್ಲಿ ಜಾಗರಣೆಯೂ ಮತ್ತೂ ಸುಲಭ ಅದರಲ್ಲಿಯೂ ಶಿವಲಿಂಗ ದರ್ಶನವು ಅತ್ಯಂತ ದುರ್ಲಭ ಶಿವರಾತ್ರಿಯಲ್ಲಿ ಉಪವಾಸವನ್ನು ಮಾಡಿ ಆ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿ, ಶಿವಲಿಂಗವನ್ನು ಬಿಲ್ವಪತ್ರೆಗಳಿಂದ ಪೂಜೆಯಂ ಮಾಡುವದು ಬಹು ಜನ್ಮದಲ್ಲಿ ಮಾಡಿದ ಪುಣ್ಯರಾಶಿಗಳಿಂದ ದೊರಕುವದೋ ದೊರಕದೋ ಎಂಬ ಸಂದೇಹವಿಡದೆ ಹತ್ತುಸಾವಿರವರುಷಗಳು ಗಂಗೆಯಲ್ಲಿ ಸ್ನಾನವಂ ಮಾಡಿದವರಿಗೆ ಯಾವ ಫಲವುಂಟೋ ಆ ಫಲವೇ ಒಂದು ಬಾರಿ ಬಿಲ್ವಪತ್ರೆಯಿಂದ ಈಶ್ವರಾರ್ಚನೆಯಂ ಮಾಡಿದವರಿಗೆ ಉಂಟು. ಈ ಲೋಕದಲ್ಲಿ ಯುಗಾಂತರಗಳಿಂದ ಆನಾವ ಪುಣ್ಯದಿವಸಗಳುಂಟೋ ಅವೆಲ್ಲವು ಮಾಘಮಾಸ ಕೃಷ್ಣಪಕ್ಷದ ಚತುರ್ದಶಿಯಂ ಆಶ್ರಯಿಸಿಕೊಂಡಿಹವೆಂದು ಬ್ರಹ್ಮಾದಿ ದೇವತೆಗಳು ವಸಿಷ್ಠಾದಿ ಮುನಿಗಳು ಈ ಶಿವರಾತ್ರಿಯನ್ನೆ ಕೊಂಡಾಡುವರು. ಈ ಶಿವರಾತ್ರಿಯಲ್ಲಿ ಉಪವಾಸವಂ ಮಾಡಿದಾತನು ನೂರುಯಜ್ಞಂಗಳಂ ಮಾಡಿದ ಫಲವಂ ಪಡೆವನು. ರಾತ್ರಿಯಲ್ಲಿ ಜಾಗರಣೆಯಂ ಮಾಡಿದಾತನು ಕೋಟಿ ವರುಷಗಳಲ್ಲಿ ಶಿವಲಿಂಗ ದರ್ಶನವಂ ಮಾಡಿದಾತನು ಕೋಟಿ ಬಾರಿ ಮಾಡಿದ ಮಹಾದಾನಂಗಳ ಫಲವಂ ಹೊಂದುವನು. ಬಿಲ್ವಪತ್ರೆಯಿಂದ ಶಿವಲಿಂಗ ಪೂಜೆಯಂ ಮಾಡಿದಾತನ ಪುಣ್ಯಕ್ಕೆ ಮೂರು ಲೋಕದಲ್ಲಿಯೂ ಸರಿ ಇಲ್ಲ. ಈ ಅರ್ಥಕ್ಕೆ ಗೌತಮಮುನಿಯಿಂದ ಪ್ರಕಾಶಿಕವಾದ ಅತ್ಯಂತ ಶೋಭನವಾದ ಪುಣ್ಯಪ್ರದಮಾದಂಥಾ ಒಂದಾನೊಂದು ಕಥೆಯುಂಟು, ಆ ಕಥೆಯನು ಶಿವದ್ರೋಹಿಗಳಿಗೆ ಹೇಳಲಾಗದು.

ಅದೆಂತೆಂದರೆ:—ಇಕ್ಷ್ವಾಕು ವಂಶದಲ್ಲಿ ಹುಟ್ಟಿ ಐಶ್ವರ್ಯಸಂಪನ್ನನಾಗಿ, ಧರ್ಮಿಷ್ಠನಾಗಿ ಧನುರ್ವಿದ್ಯೆಯಲ್ಲಿ ಸಮರ್ಥನಾಗಿ ಇದ್ದಂಥಾ ಮಿತ್ರಸಹನೆಂಬ ರಾಯನಿದ್ದನು. ಆತನು ಬಹು ಪರಾಕ್ರಮವಂತನು, ಮಹಾ ಬಲವುಳ್ಳವನು, ಶಾಸ್ತ್ರಂಗಳಲ್ಲಿ ನಿಪುಣನು. ಉತ್ಸಾಹವಂತನು, ದಯೆಯುಳ್ಳವನು, ಅವನೊಬ್ಬ ಮಿತ್ರಸಹನೆಂಬ ರಾಯನ ಶರೀರವು ಪುಣ್ಯಂಗಳ ಸಮೂಹವೋ, ತೇಜಸ್ಸುಗಳ ಕೂಟವೋ, ಐಶ್ವರ್ಯಂಗಳ ತವರ್ಮನೆಯೋ, ಎಂಬ ಹಾಗೆ ಒಪ್ಪುತ್ತಾ ಶೋಭಾಲಕ್ಷ್ಮಿಯಿಂದ ಕೂಡಿಕೊಂಡಿದ್ದಿತು. ಆವನಾನೊಬ್ಬನ ಪಾದಂಗಳು ಶತ್ರುರಾಯರ ಕಿರೀಟಂಗಳಲ್ಲಿ ಕೆತ್ತಿದ ಮಣಿಗಳ ಕಾಂತಿಯಿಂದ ಅಲಂಕರಿಸಲ್ಪಟ್ಟವೋ ಎಂಬುವ ಹಾಗೆ ತೇಜಸ್ಸಿನಿಂದ ಒಪ್ಪುತ್ತಿರುವ ಆ ಮಹಾರಾಯನು ಒಂದಾನೊಂದು ವೇಳೆಯಲ್ಲಿ ಬೇಟೆಯನ್ನಾಡುವ ಮನಸ್ಸುಳ್ಳವನಾಗಿ

ಚತುರಂಗ ಬಲದೊಡನೆ ಹೊರಟು ಭಯಂಕರವಾದ ವನವಂ ಪ್ರವೇಶಿಸಿ, ಆ ವನದಲ್ಲಿ ನಿಶಿತವಾದ ಬಾಣಂಗಳಿಂದ ಹುಲಿ ಹುಲ್ಲೆ ಎರಳೆ ಕಾಡುಕೋಣ ಕಾಡುಹಂದಿ ಸಿಂಹ ಮೊದಲಾದ ಮೃಗಂಗಳಂ ಹೊಡೆದು ಕೆಡುಹುತ್ತಿರಲು, ಆ ಸಮಯದಲ್ಲಿ ಒಬ್ಬಾನೊಬ್ಬ ರಾಕ್ಷಸನು ಕೋಪದಿಂದ ಆರಾಯನಂಕೊಲ್ವೆನೆಂದು ಆರ್ಭಟಿಸುತ್ತಾ ಎದುರಾಗಿ ಬರುತ್ತಿರುವಾಗ ಆತನು ಅಗ್ನಿಯೋಪಾದಿಯಲ್ಲಿ ಜ್ವಲಿಸುತ್ತಿರುವ ಆಕಾರವುಳ್ಳಂಥಾ ಆ ರಾಕ್ಷಸನನ್ನು ಒಂದೇಬಾಣದಿಂದ ಸಂಹರಿಸಿದನು, ಅವನ ತಮ್ಮನಾದ ಮತ್ತೊಬ್ಬ ರಾಕ್ಷಸನು ಆ ರಾಯನಿಂದ ಕೊಲ್ಲಲ್ಪಟ್ಟಂಥಾ ಅಣ್ಣನಂ ಕಂಡು ದುಃಖಿತನಾಗಿ ಭಯದಿಂದ ಕಾಣಿಸಿಕೊಳ್ಳದೆ ಪೊಳೆಯ ಮರೆಯಲ್ಲಿ ಕುಳಿತು ತನ್ನಲ್ಲಿ ತಾನು ಶಿವಶಿವಾ ಅವನು ಅತ್ಯಂತ ಪರಾಕ್ರಮ ಸಂಪನ್ನನಾದ ನನ್ನ ಅಣ್ಣನಂ ಕೊಂದನಲ್ಲಾ, ಇವನಿಗೆ ದೇವತೆಗಳು ರಾಕ್ಷಸರುಗಳು ಗಣನೆಯಿಲ್ಲ. ಇವನಂ ಶಕ್ತಿಯಿಂದ ಕೊಂದೇನೆಂದರೆ ಶಕ್ಯವಿಲ್ಲ ಆದುದರಿಂದ ಒಳಹೊಕ್ಕು ಇವನಂ ಜಯಿಸಬೇಕೆಂದು ಯೋಚನೆಯಂ ಮಾಡಿ ಮನುಷ್ಯಾಕಾರಮಂ ಧರಿಸಿ ಮೂರ್ತಿಮತ್ತಾದ ಉತ್ಪಾತದ ಮರ್‍ಯಾದೆಯಲ್ಲಿ ಆ ರಾಯನ ಸಮೀಪಕ್ಕೆ ಬಂದು, ಎಲೈ ರಾಯನೇ ! ನಾನು ಬಹಳವಾದ ಊಳಿಗಗಳಂ ಮಾಡಬಲ್ಲೆನು. ನನಗೆ ಒಂದು ಊಳಿಗವಂ ಕೊಡು ಎಂದು ವಿನಯದಿಂದ ನುಡಿಯಲು, ಆ ರಾಯನು ಆ ಮಾಯೆಯಂ ಕಂಡು ಅವನ ಮಾಯೆಗೆ ಒಳಗಾಗಿ ಅವನಿಗೆ ಅಡಿಗೆಯಮನೆಯ ಆಧಿಪತ್ಯವಂ ಕೊಟ್ಟು ಆ ಅರಣ್ಯದಲ್ಲಿ ಕೆಲವುಕಾಲ ಬೇಟೆಯಾಡುತ್ತಿದ್ದು ಅವನಂ ಕರೆದುಕೊಂಡು ಮರಳಿ ತನ್ನ ಪಟ್ಟಣಕ್ಕೆ ಬಂದು ದಮಯಂತಿಯೊಡನೆ ನಳಚಕ್ರವರ್ತಿಯೋಪಾದಿಯಲ್ಲಿ ದಮಯಂತಿ ಎಂಬ ತನ್ನ ಸ್ತ್ರೀಯೊಡನೆ ಕ್ರೀಡಿಸುತ್ತಿದ್ದನು.

ಅನಂತರದಲ್ಲಿ ಆ ರಾಯನು ತನ್ನ ತಂದೆಯ ತಿಥಿ ಬಂದಲ್ಲಿ ತನ್ನ ಕುಲಗುರುವಾದ ವಸಿಷ್ಠಮಹಾಮುನಿಯುಂ ಬ್ರಾಹ್ಮಣಾರ್ಥಕ್ಕೆ ಹೇಳಿ ಮನೆಗೆ ಕರೆತರಲು, ಆ ಬಾಣಸಿಗನಾದ ಆ ರಾಕ್ಷಸನಿಂದ ಮನುಷ್ಯಮಾಂಸವು ತಾಳವ ಮಾಡಿ ಎಡೆಗೆ ಬಡಿಸಲ್ಪಟ್ಟಿತು. ವಸಿಷ್ಠಮಹಾಮುನಿಯು ಅದಂಕಂಡು ಜ್ಞಾನದೃಷ್ಟಿಯಿಂದ ಮನುಷ್ಯಮಾಸವೆಂದು ತಿಳಿದು, ಕೋಪದಿಂ ಇಂತೆಂದನು,— ಎಲೈ ರಾಯನೇ ! ಈ ನಿನ್ನ ಜನ್ಮವೇತಕ್ಕೆ ಸುಡು ಸುಡು ! ಯಾವ ಕಾರಣದಿಂದ ದುರ್ಜನನಾಗಿ ಕಪಟನಂಮಾಡಿ, ನನಗೆ ಮನುಷ್ಯ ಮಾಂಸವನ್ನು ಬಡಿಸಿದೆಯೋ ಆದಕಾರಣದಿಂದ ನೀನು ರಾಕ್ಷಸನಾಗಿ ಹುಟ್ಟಿ ಮನುಷ್ಯಮಾಂಸವಂ ಭಕ್ಷಿಸುತ್ತಿರು ಎಂದು ಶಾಪವಂ ಕೊಟ್ಟು, ಅನಂತರದಲ್ಲಿ ಜ್ಞಾನ ದೃಷ್ಟಿಯಿಂ ಚೆನ್ನಾಗಿ ವಿಚಾರಿಸಿ, ಇದು ರಾಕ್ಷಸನು ಮಾಡಿದ ಕಪಟವಲ್ಲದೆ ಅರಸನ ಕೃತ್ಯವಲ್ಲನೆಂದು ತಿಳಿದು, ಕರುಣದಿಂದ ಆ ರಾಯನಿಗೆ ಹನ್ನೆರಡುವರುಷ ರಾಕ್ಷಸ

ನಾಗಿದ್ದು ಪುನಃ ನಿನ್ನ ನಿಜರೂಪಮಂ ಪಡೆಯೆಂದು ವಿಶಾಪಮಂ ಕೊಡಲು, ಆ ರಾಯನು ಕುಪಿತನೇ ! ಎಲೈ ವಸಿಷ್ಠನೇ ! ನಾನು ಆ ಕಾರ್ಯವನ್ನು ತಿಳಿದವ ನಲ್ಲ. ವ್ಯರ್ಥವಾಗಿ ನನಗೆ ಶಾಪಮಂಕೊಟ್ಟೆ, ನಿನಗೂ ಬದಲಾಗಿ ಶಾಪವಂ ಕೊಡುವೆನೆಂದು ಕೈಯಲ್ಲಿ ಉದಕವಂ ತೆಗೆದುಕೊಂಡು ಆ ವಸಿಷ್ಠನಂ ಶಪಿಸಲು, ದಮಯಂತಿಯೆಂಬ ಆ ರಾಯನ ಹೆಂಡತಿ ಆತನ ಕಾಲಿಗೆ ಬಿದ್ದು ಗುರುವಿಗೆ ಶಾಪಮಂ ಕೊಡುವದು ಯುಕ್ತವಲ್ಲವೆಂದು ಕೇಳಿಕೊಂಡಳು. ಅನಂತರದಲ್ಲಿ ಆ ರಾಯನು ತನ್ನ ಸ್ತ್ರೀಯು ವಾಕ್ಯವನ್ನು ಕೇಳಿ ಯುಕ್ತವೆಂದು ತಿಳಿದು ಕೋಪಮಂ ಬಿಟ್ಟು ಗುರುವಿಗೆ ಶಾಪಮಂ ಕೊಡುವುದಕ್ಕೆ ತೆಗೆದುಕೊಂಡ ಉದಕಮಂ ತನ್ನ ಪಾದಂಗಳ ಮೇಲೆ ಬಿಡಲಾಗಿ ಆತನ ಪಾದಗಳು ಸುಟ್ಟು ಕಪ್ಪಾದವು ಅಂದು ಮೊದಲಾಗಿ ಆ ರಾಯನು ಕಲ್ಮಷಪಾದ ರಾಯನೆಂದು ಪ್ರಸಿದ್ಧನಾದನು. ಬಳಿಕಾ ರಾಯನು ಗುರು ಶಾಪದಿಂದ ರಾಕ್ಷಸನಾಗಿ ಪ್ರಳಯಕಾಲದ ಯಮನೋಪಾದಿಯಲ್ಲಿ ಭಯಂಕರವಾದ ರೂಪಮಂ ಧರಿಸಿ ವನಕ್ಕೆ ಹೋಗಿ, ಮನುಷ್ಯ, ಪಶು, ಪಕ್ಷಿಗಳು ಮೊದಲಾದ ನಾನಾವಿಧ ಪ್ರಾಣಿಗಳಂ ಭಕ್ಷಿಸುತಿರ್ದು ಒಂದಾನೊಂದು ಒಳ್ಳೆ ವನಪ್ರದೇಶದಲ್ಲಿ ಹೊಸ ದಾಗಿ ಮದುವೆಯಾದಂಥಾ ಪ್ರಾಯಸ್ಥರಾದ ಮುನಿದಂಪತಿಗಳು ಕ್ರೀಡಿಸು ತ್ತಿರಲು ಶಾಪದಿಂದ ಮುಂಗೆಟ್ಟು ಆ ಮುನಿಕುಮಾರನನ್ನು ಭಕ್ಷಿಸುವದಕ್ಕೋ ಸ್ಕರ ಹುಲಿಯು ಹುಲ್ಲೆಯ ಮರಿಯನ್ನು ಹೇಗೆ ಹಿಡಿದುಕೊಳ್ಳುವುದೋ ಹಾಗೆ ಹಿಡಿದುಕೊಳ್ಳಲು ಆ ರಾಕ್ಷಸನಿಂದ ಹಿಡಿದುಕೊಳ್ಳಲ್ಪಟ್ಟಂಥಾ ಪತಿಯಂ ಕಂಡು ಭಯಪಟ್ಟು ಆ ಮುನಿಪತ್ನಿಯು ನಡುಗುತ್ತಾ ಅಳುತ್ತಿದ್ದು ಧೈರ್ಯದಿಂದ ಆ ರಾಕ್ಷಸನಂ ಕುರಿತು ಇಂತೆಂದಳು.

ಎಲೈ ಮಹಾತ್ಮನೇ ! ನೀನು ಸೂರ್ಯವಂಶದಲ್ಲಿ ಹುಟ್ಟಿದ ಮಹಾರಾಯನು ದಮಯಂತಿಗೆ ಪತಿಯಾದಂಥಾವನು ದುಃಖಿತರಾದವರಿಗೂ ಮರೆಹೊಕ್ಕವ ರಿಗೂ ರಕ್ಷಕನಾದಂಥಾವನು ನಿಜವಾಗಿ ರಾಕ್ಷಸನಲ್ಲ. ಆದರಿಂದ ಈ ಪಾಪ ಬುದ್ಧಿಯಂ ಬಿಡು, ಪ್ರಾಣಗಳಿಗಿಂತಲೂ ಅತ್ಯಂತ ಪ್ರಿಯನಾದ ನನ್ನ ಪತಿ ಯನ್ನು ಭಕ್ಷಿಸಬೇಡ, ನನಗೆ ಪತಿ ಹೊರತಾಗಿ ಅತ್ಯಂತ ದುಃಖಿತವಾದ ಪ್ರಾಣ ಗಳಿಂದಲೂ ಅತ್ಯಂತಾಭಾವವಾದ ಈ ಶರೀರದಿಂದಲೂ ಪ್ರಯೋಜನವೇನು ? ತನ್ನ ಪತಿಯು ಶಾಂತನಾಗಿ ತಪಸ್ವಿಯಾಗಿ ಬಹು ಶಾಸ್ತ್ರಾಭ್ಯಾಸಮಾಡಿದವನು ಪ್ರಾಯವಂತನು ಆದಕಾರಣ ಈತಂಗೆ ಪ್ರಾಣದಾನವಂ ಮಾಡಿದರೆ ಸಕಲ ಜಗ ತ್ತನ್ನು ರಕ್ಷಿಸಿದ ಫಲವಹುದು. ಎಲೈ ಮಹಾರಾಯನೇ ! ಬಾಲೆಯಾಗಿ ಬ್ರಾಹ್ಮಣ ಸ್ತ್ರೀಯಾದಂಥಾ ನನ್ನಲ್ಲಿ ದಯೆಮಾಡು. ಲೋಕದಲ್ಲಿ ಸಜ್ಜನರು ದೀನರಲ್ಲಿಯೂ ಅನಾಥರಲ್ಲಿಯೂ ಕೃಪೆಮಾಡುವರು. ಇತೆಂದು ಆ ಬ್ರಾಹ್ಮಣ

ಸ್ತ್ರೀಯಿಂದ ಬೇಡಿಕೊಳ್ಳಲ್ಪಟ್ಟವನಾದರೂ ದಯೆ ಇಲ್ಲದೇ ಆ ರಾಕ್ಷಸನು ದುಷ್ಟಬುದ್ಧಿಯುಳ್ಳವನಾಗಿ ಆ ಮುನಿಕುಮಾರನನ್ನು ಭಕ್ಷಿಸಿದನು. ಅನಂತರ ಆ ಮುನಿಪತ್ನಿಯು ಬಹಳವಾಗಿ ದುಃಖಿಸಿ, ಪತಿಯ ಅಸ್ಥಿಗಳನ್ನು ಒಟ್ಟುಗೂಡಿಸಿ ಹೆಚ್ಚುತಗ್ಗು ಇಲ್ಲದ ಹಾಗೆ ಚಿತಿಯನ್ನು ಅಮರಿಸಿ, ಅದರಮೇಲೆ ಪುಳ್ಳಿಗಳನ್ನಿರಿಸಿ ಅಗ್ನಿಯಿಂದ ಉರಿಸಿ ಸಹಗಮನವಂ ಮಾಡುವಳಾಗಿ, ಆ ರಾಕ್ಷಸಾಕಾರಮಂ ತಾಳಿದ ಆ ರಾಯನಿಗೆ ಶಾಪವಂ ಕೊಟ್ಟಳು ಅದೆಂತೆಂದೊಡೆ,—

ಎಲೈ ಪಾಪಿಷ್ಠನಾದ ರಾಯನೇ! ನಿನ್ನಿಂದ ನನ್ನ ಪತಿಯು ನಿಷ್ಕಾರಣವಾಗಿ ಕೊಲ್ಲಲ್ಪಟ್ಟನಲ್ಲಾ. ಆದಕಾರಣ ನೀನು ಇಂದು ಮೊದಲಾಗಿ ನಿನ್ನ ಸ್ತ್ರೀಯೊಡನೆ ನೀನು ಯಾವಾಗ ಕೂಡುತ್ತಾ ಇದ್ದೀಯೋ, ಆಗ ನಿನಗೆ ಮರಣವಾಗಲಿ, ಪತಿವ್ರತೆಯಾದ ನನ್ನ ಶಾಪವು ನಿನಗೆ ತಪ್ಪದು, ಎಂದು ಶಾಪವಂಕೊಟ್ಟು ಅಗ್ನಿಪ್ರವೇಶ ಮಾಡಿದಳು. ಅನಂತರದಲ್ಲಿ ರಾಯನು ೧೨ ವರ್ಷಕಾಲ ರಾಕ್ಷಸತ್ವದಲ್ಲಿ ಗುರುಶಾಪದಿಂದ ರಾಕ್ಷಸನಾಗಿದ್ದು ನಿಶ್ಶಾಪವಂ ತಾಳ್ದು ಸಂತೋಷಯುಕ್ತನಾಗಿ ಪೂರ್ವಶರೀರದಿಂದ ತನ್ನ ಮನೆಯನ್ನು ಹೊಕ್ಕು ಸಂಭೋಗಾರ್ಥವಾಗಿ ಹೆಂಡತಿಯಾದ ದಮಯಂತಿಯಂ ಕರೆಯಲು, ಮುನಿಪತ್ನಿಯಿಂದ ವನದಲ್ಲಿ ತನ್ನ ಗಂಡನಿಗೆ ಬಂದ ಶಾಪವಂ ತಿಳಿದು, ತನಗೆ ವೈಧವ್ಯ ಬಂದೀತೆಂಬ ಭಯದಿಂದ ಗಂಡನನ್ನು ತಡೆದಳು. ಅನಂತರಲ್ಲಿ ಆ ರಾಯನು ತನಗೆ ಸ್ತ್ರೀಸಂಭೋಗವಿಲ್ಲದಕಾರಣ ಸಂತಾನಾಭಾವದಿಂದ ದುಃಖಿತನಾಗಿ ಸಕಲೈಶ್ವರ್ಯ ಸಹಿತವಾದ ರಾಜ್ಯವಂ ಬಿಟ್ಟು ವ್ರತವನ್ನೈದಿದನು. ಬಳಿಕ ಕುಲಗುರುವಾದ ವಸಿಷ್ಠನು ಆ ಕಲ್ಮಷಪಾದನೆಂಬ ರಾಯನಿಗೆ ಮಕ್ಕಳಿಲ್ಲದುದನ್ನು ನೋಡಿ, ಆತನ ಪತ್ನಿಯಾದ ದಮಯಂತಿಯಲ್ಲಿ ತನ್ನ ವಂಶಾಭಿವೃದ್ಧಿಗೋಸ್ಕರ ಒಬ್ಬ ಕುಮಾರನನ್ನು ಹುಟ್ಟಿಸಿದನು. ಅತ್ತಲೂ ಆ ರಾಯನು ತಾನು ಪೂರ್ವದಲ್ಲಿ ಗುರುಶಾಪದಿಂದ ರಾಕ್ಷಸನಾಗಿ ಅರಣ್ಯದಲ್ಲಿ ಸಂಚರಿಸುತ್ತ ಮುನಿಕುಮಾರನಂ ಕೊಂದವನಾದಕಾರಣ ಆ ಬ್ರಹ್ಮಹತ್ಯೆಯು ಭಯಂಕರವಾದ ಪಿಶಾಚರೂಪಮಂ ಧರಿಸಿ ತನ್ನ ಹಿಂದುಗಡೆಯಲ್ಲಿ ಬರುತ್ತಿರಲು, ತಾನು ಭಯಪಟ್ಟು ಅಲ್ಲಿದ್ದ ಋಷಿಗಳನ್ನು ಕುರಿತು ಇದೇನೆಂದು ಕೇಳಲು, ಆ ಋಷಿಗಳು ಜ್ಞಾನದೃಷ್ಟಿಯಿಂದ ವಿಚಾರಿಸಿ ನೋಡಿ, ಇನು ನೀನು ಪೂರ್ವದಲ್ಲಿ ಮಾಡಿದ ಬ್ರಹ್ಮಹತ್ಯೆ ಎಂದು ಹೇಳಲಾಗಿ, ಆ ರಾಯನು ಬ್ರಹ್ಮಹತ್ಯೆಯ ಬಿಡುಗಡೆಯಂ ಬಯಸಿ ನಾನಾವಿಧವಾದ ಪುಣ್ಯಕ್ಷೇತ್ರಂಗಳಿಗೆ ಹೋಗಿ, ಪುಣ್ಯತೀರ್ಥಂಗಳಲ್ಲಿ ಸ್ನಾನ ಮಾಡಿದರೂ ಆ ಬ್ರಹ್ಮಹತ್ಯೆಯು ಹೋಗದೆ ಮಾರ್ಗವಶದಿಂದ ಮಿಥಿಲಾ ಪಟ್ಟಣಕ್ಕೆ ಬಂದು ಅದರ ಪೊರವಳಯದೊಳಿದ್ದ ಒಂದು ವನದಲ್ಲಿ ದುಃಖದಿಂದ್ಯ ಚಿಂತಿಸುತಿರ್ದು ದೈವಯೋಗದಿಂದ ಬರುತ್ತಿರುವ ನಿರ್ಮಲವಾದ ಮನಸುಳ

ಗೌತಮ ಮಹಾಮುನಿಯಂ ಕಂಡು ಅಗ್ನಿಯೋಪಾದಿಯಲ್ಲಿ ಅನೇಕ ತಪಸ್ವಿಗಳಿಂದ ಸೇವಿಸಲ್ಪಡುವಂಥಾ ಸೂರ್ಯನ ಮರ್ಯಾದೆಯಲ್ಲಿ ಅಜ್ಞಾನವೆಂಬ ಕತ್ತಲೆಯನ್ನು ತೊಲಗಿಸುವಂಥಾ ಚಂದ್ರನಂತೆ ಶಾಂತಗುಣ ಯುಕ್ತನಾದಂಥ ಶಿವನೋಪಾದಿಯಲ್ಲಿ ದ್ವಿಜರಾಜ ಕಳೆಯನ್ನು ಧರಿಸಿಕೊಂಡಿರುವಂಥಾ ಕಾಮ ಕ್ರೋಧಾದಿಗಳಂ ಬಿಟ್ಟಂಥಾ ಅನೇಕ ಶಿಷ್ಯರ ಸಮೇತನಾದಂಥಾ ತಪಸ್ಸುಗಳಿಗೆಲ್ಲಕ್ಕು ತಾನೊಬ್ಬನೇ ನೆಲೆಯಾದಂಥಾ ಪ್ರಸನ್ನ ಮನಸ್ಕನಾದ ಆ ಗೌತಮ ಮಹಾಮುನಿಯನ್ನೂ ಕಂಡು ಹೆಜ್ಜೆಹೆಜ್ಜೆಗೆ ನಮಸ್ಕರಿಸಿ ಕೈಮುಗಿದು ನಿಂತಿರಲು ಆ ಮುನಿಶ್ರೇಷ್ಠನಾದ ಗೌತಮನು ಸೂರ್ಯವಂಶದಲ್ಲಿ ಹುಟ್ಟಿದ ಆ ಕಲ್ಮಷಪಾದ ರಾಜನನ್ನು ಕಂಡು ಸಂತೋಷಯುಕ್ತನಾಗಿ, ಮುಗುಳ್ನಗೆಯನ್ನು ನಕ್ಕು ದಯೆದೋರಿ ಆಶೀರ್ವದಿಸಿ ಪ್ರೀತಿಯುಕ್ತನಾಗಿ ಈ ವಾಕ್ಯವನ್ನು ನುಡಿದನು.

ಎಲೈ ಮಹಾರಾಯನೇ ! ನೀನು ಕ್ಷೇಮವೇ ನಿನ್ನ ರಾಜ್ಯವು ಚೆನ್ನಾಗಿದೆಯೋ ನಿನ್ನ ಪಟ್ಟಣದಲ್ಲಿ ಪ್ರಜೆಗಳು ಕುಶಲರಾಗಿ ಇದ್ದಾರೆಯೋ ಅಂತಃಪುರ ಸ್ತ್ರೀಯರು ಕ್ಷೇಮವೇ, ಏನುಕಾರಣದಿಂದ ರಾಜ್ಯವನ್ನು ಬಿಟ್ಟು ಇಲ್ಲಿಗೆ ಬಂದು ಹೀಗೆ ನಿಟ್ಟುಸುರು ಬಿಡುತ್ತಾ ಚಿಂತಿಸುತ್ತಿದ್ದೀಯೋ ಹೇಳೆಂದು ಕೇಳಲಾಗಿ, ಆ ರಾಯನು ಎಲೈ ಗೌತಮಮಹಾಮುನಿಯೇ ! ನಿಮ್ಮ ದಯೆಯಿಂದ ನಾವೆಲ್ಲರೂ ಕುಶಲರಾಗಿ ಇದ್ದೇವೆ. ಉತ್ತಮ ಕುಲದಲ್ಲಿ ಹುಟ್ಟಿದ ರಾಯನಿಗೆ ಬ್ರಾಹ್ಮಣಾಶೀರ್ವಾದವಿದ್ದರೆ ಕ್ಷೇಮವಿಲ್ಲದಿಹುದೇ ! ಮತ್ತೇನೆಂದರೆ.

ನಾನು ಶಾಪಗ್ರಸ್ತನಾಗಿ ಪೂರ್ವದಲ್ಲಿ ಮಾಡಿದ ಬ್ರಹ್ಮಹತ್ಯೆಯು ಭಯಂಕರವಾದ ಪಿಶಾಚರೂಪವಂ ಧರಿಸಿ ಪರರ ಕಣ್ಣಿಗೆ ಕಾಣಿಸಿಕೊಳ್ಳದೆ ಹೆಜ್ಜೆಹೆಜ್ಜೆಗೂ ನನ್ನನ್ನು ಬೆದರಿಸುತ್ತ ಕ್ಲೇಶಪಡಿಸುತ್ತಿದೆ. ಅದಕ್ಕೆ ಯಾವ ಬಗೆಯಾದ ಪ್ರಾಯಶ್ಚಿತ್ತಗಳಿಂದಲೂ ಬಿಡುಗಡೆ ಇಲ್ಲ. ಬೊಕ್ಕಸ ಭಂಡಾರವಂ ಬ್ರಾಹ್ಮಣರಿಗೆ ದಕ್ಷಿಣೆಯಾಗಿ ಕೊಟ್ಟು ಯಜ್ಞಯಾಗಗಳಂ ಮಾಡಿಸಿದೆನು. ಪವಿತ್ರವಾದ ಸಕಲ ತೀರ್ಥಂಗಳಲ್ಲಿಯೂ ಸ್ನಾನ ಮಾಡಿದೆನು. ಸಮಸ್ತವಾದ ಪುಣ್ಯ ಕ್ಷೇತ್ರಂಗಳಲ್ಲಿಯು ಸಂಚಾರ ಮಾಡಿದೆನು. ಹಾಗಾದರೂ ಈ ಬ್ರಹ್ಮಹತ್ಯೆ ನನ್ನನ್ನು ಸುಖದಲ್ಲಿರಿಸದು. ಈಗ ನಿಮ್ಮ ದರ್ಶನಮಾತ್ರದಿಂದಲೇ ನನ್ನ ಮನಸ್ಸಿಗೆ ಸಂತೋಷವಾದುದು. ಇದರಿಂದ ನನ್ನ ಪಾಪವು ಪರಿಹೃತವಾದೀತೆಂದು ಕಾಣಲ್ಪಡುತ್ತಿದೆ. ಮನುಷ್ಯನು ಒಂದು ಕಾಲದಲ್ಲಿ ಬಯಸಿದ ಬಯಕೆಯು ಆಗದಿರ್ದೊಡೆ ಮತ್ತೊಂದು ವೇಳೆಯಲ್ಲಿಯಾದರೂ ಪಡೆಯುವನೆಂಬ ಲೋಕದ ನುಡಿ ನನ್ನಲ್ಲಿ ಸತ್ಯವಾಯಿತು. ಸಂಸಾರದಲ್ಲಿ ಭಯಪಟ್ಟವರಿಗೆ ಸಂರಕ್ಷಕನಾದ ನಿಮ್ಮನ್ನು ಕಂಡೆನಾದಕಾರಣ ನಾನು ಪೂರ್ವ ಜನ್ಮದಲ್ಲಿ ಮಾಡಿದ ಪುಣ್ಯಂಗಳೆಲ್ಲವೂ ಫಲಿಸಿದವೆಂದು ನಿಶ್ಚಯಿಸುತ್ತಿದ್ದೇನೆ. ಈಗ

ನೀವು ಆವದೇಶದಿಂದ ಇಲ್ಲಿಗೆ ಬಂದಿರಿ. ನಿಮ್ಮನ್ನು ಕಂಡರೆ ದೂರದಿಂದ ಬಂದವರಂತೆ ಕಾಣಿಸುತ್ತಿದೆ. ನಿಮ್ಮ ಮುಖಕಾಂತಿಯಂ ನೋಡಲು, ಒಂದಾನೊಂದು ಆಶ್ಚರ್ಯವುಂ ಕಂಡು ಸಂತೋಷಪಡುತ್ತಾ ಇರುವಂತಿದೆ. ಪ್ರೀತಿಪೂರ್ವಕವಾದ ವಾಕ್ಯಂಗಳಿಂದ ನನಗೆ ಸಂತೋಷವನ್ನುಂಟುಮಾಡಿದಿರಿ. ನಾನು ನಿಮ್ಮ ಪಾದಕಮಲವೇ ಗತಿಯೆಂತು ನಂಬಿಯಿದ್ದೇನೆ. ನನಗೆ ಯಾವ ಪ್ರಕಾರದಲ್ಲಿ ಸುಖವಹುದೋ ಆ ಪ್ರಕಾರ ದಯಮಾಡಿರೆಂದು ಆ ರಾಯನು ಬಿನ್ನವಿಸಲು, ಆ ಗೌತಮ ಮಹಾಮುನಿಯು ಕರುಣದಿಂದ ಭಯಂಕರವಾದ ಪಾಪಂಗಳಂ ಪರಿಹರಿಸುವದಕ್ಕೆ ಸಮರ್ಥವಾದಂಥಾ ಉಪಾಯಮಂ ಹೇಳುತ್ತಿದ್ದನು.

ಎಲೈ ರಾಜಶ್ರೇಷ್ಠನೇ ! ಇನ್ನು ನೀನು ಧನ್ಯನಾದೆ ಪಾಪಂಗಳ ದೆಶೆಯಿಂದ ಭಯಮಂ ಬಿಡು, ದೀನರಿಗೆ ರಕ್ಷಕನಾದ ಪರಮೇಶ್ವರನು ರಕ್ಷಿಸುತ್ತಿರಲಾಗಿ, ಅತನ ಮೊರೆಹೊಕ್ಕವರಿಗೆ ಭಯವೇನು. ಭೂಮಿಯಲ್ಲಿ ಮಹಾಪಾತಕಂಗಳಂ ತೊಲಗಿಸುವಂಥಾ ಮನೋಹರವಾದ ಗೋಕರ್ಣವೆಂಬ ಸುಪ್ರಸಿದ್ಧ ಕ್ಷೇತ್ರ ಉಂಟು ನೆನೆವಮಾತ್ರದಿಂದಲೇ ಸಕಲ ಪಾಪಂಗಳಂ ಪರಿಹರಿಸುವ ಶಿವನು ಅಲ್ಲಿ ಇರುತ್ತಲಿದ್ದಾನೆ ಅದರಿಂದ ಉತ್ಕೃಷ್ಟವಾದ ಪಾಪಂಗಳಂ ಹೋಗಲಾಡಿಸುವನು. ಆ ಕ್ಷೇತ್ರವು ಕೈಲಾಸಮಲಯ ಪರ್ವತಗಳೋಪಾದಿಯಲ್ಲಿ ಶಿವನಿಗೆ ಪ್ರೀತಿಕರವಾದದ್ದು. ಅಗ್ನಿಯಿಂದಲೂ, ಚಂದ್ರನಿಂದಲೂ, ನಕ್ಷತ್ರಗಳಿಂದಲೂ ಮಿಕ್ಕಾದ ಗ್ರಹಗಳಿಂದಲೂ, ಪರಿಹರಿಸುವದಕ್ಕೆ ಶಕ್ಯವಿಲ್ಲದಂಥ ಕತ್ತಲೆಯೂ ಸೂರ್ಯೋದಯನಾದರೆ ಹೇಗೆ ಹೋಗುವುದೋ ಹಾಗೆ ಮಿಕ್ಕಾದ ತೀರ್ಥಂಗಳಿಂದಲು ಮಿಕ್ಕಾದ ಪುಣ್ಯ ಸ್ಥಳಂಗಳಿಂದಲು ತೊಲಗಿಸಲು ಶಕ್ಯವಲ್ಲದ ಪಾಪಂಗಳು ಗೋಕರ್ಣದರ್ಶನದಿಂದ ಆಕ್ಷಣವೇ ತೊಲಗುವವು. ಮನುಷ್ಯನು ಬ್ರಹ್ಮಹತ್ಯೆ ಮೊದಲಾದ ಅನೇಕ ಪಾಪಂಗಳಂ ಮಾಡಿದ್ದರೂ ಒಂದುಬಾರಿ ಗೋಕರ್ಣಕ್ಷೇತ್ರಮಂ ಪ್ರವೇಶಿಸಲು ಅವನಿಗೆ ಯಮನ ಭಯವಿಲ್ಲಾ. ಬ್ರಹ್ಮ, ವಿಷ್ಣು, ದೇವೇಂದ್ರ ಮೊದಲಾದವರೆಲ್ಲರೂ ಆ ಕ್ಷೇತ್ರದಲ್ಲಿ ತಪವಂ ಮಾಡಿ ಕಾರ್ಯಸಿದ್ಧಿಯಂ ಪಡೆದರು. ಅಲ್ಲಿ ಒಂದು ದಿನ ಮಾಡಿದ ತಪಸ್ಸಿಗೆ ಮತ್ತೊಂದು ಕ್ಷೇತ್ರದಲ್ಲಿ ಲಕ್ಷವರ್ಷ ಮಾಡಿದ ತಪಸ್ಸು ಸರಿಬಾರದು. ರಾವಣನು ತಪಸ್ಸಿನಿಂದ ಪಡೆದಂಥಾ ಶಿವನ ಪ್ರಾಣಲಿಂಗವೇ ಆ ಕ್ಷೇತ್ರದಲ್ಲಿ ವಿಘ್ನೇಶ್ವರನಿಂದ ಪ್ರತಿಷ್ಠೆ ಮಾಡಲ್ಪಟ್ಟದ್ದಾಗಿ, ಬ್ರಹ್ಮಾದಿದೇವತೆಗಳ ಮೇಲಿನ ಕೃಪೆಯಿಂದ ಮಹಾ ಬಲೀಶ್ವರಲಿಂಗವೆಂಬ ಪೆಸರಂ ತಾಳ್ದು ಇರುತ್ತಿದೆ.

ಆ ಮಹಾಬಲೇಶ್ವರನ ಗುಡಿಯ ಮೂಡಣ ಬಾಗಿಲಲ್ಲಿ ಬ್ರಹ್ಮೇಂದ್ರ ವಿಷ್ಣು ವಿಶ್ವೇ ದೇವತೆಗಳು, ದ್ವಾದಶಾದಿತ್ಯರು, ಏಕಾದಶರುದ್ರರು, ಅಷ್ಟವಸು

ಗಳು ನವಗ್ರಹಗಳು, ನಕ್ಷತ್ರಂಗಳು ಇಹರು. ತೆಂಕಣ ಬಾಗಿಲಲ್ಲಿ ಮೃತ್ಯುವು, ಯಮ, ಚಿತ್ರಗುಪ್ತ, ಅಗ್ನಿ, ಪಿತೃದೇವತೆಗಳು, ರುದ್ರಗಣಂಗಳು ಇಹರು, ಪಡುವಣ ಬಾಗಿಲಲ್ಲಿ ವರುಣನು, ಸಮುದ್ರಂಗಳು, ಗಂಗೆ, ಗೋದಾವರಿ, ತುಂಗ, ಕೃಷ್ಣವೇಣಿ, ನರ್ಮದೆ, ಚಂದ್ರಭಾಗೇ, ಸರಸ್ವತಿ, ಭೀಮರಥಿ, ಕಾವೇರಿ ಮೊದಲಾದ ನದಿಗಳಿಹವು. ಬಡಗಣ ಬಾಗಿಲಲ್ಲಿ ವಾಯು, ಕುಬೇರ, ಭದ್ರ ಕಾಳಿ, ಚಂಡಿಕೆ, ಚಾಮುಂಡಿ, ವಾರಾಹಿ, ವೈಷ್ಣವಿ ಮೊದಲಾದ ಹರಿಹರರು. ವಿಶ್ವಾವಸು, ಚಿತ್ರರಥನು, ಚಿತ್ರಸೇನನು ಮೊದಲಾದ ಗಂಧರ್ವರು ಗಾನವಂ ಮಾಡುತ್ತಿಹರು. ರಂಭೆಯು, ಪುಂಜಕಸ್ಥಲಿಯು, ಮೇನಕೆಯು, ಊರ್ವಶಿಯು, ತಿಲೋತ್ತಮೆಯು, ಹರಿಣಿಯು, ಮಂಜುಘೋಷೆಯು, ಮೊದಲಾದ ಅಪ್ಸರ ಸ್ತ್ರೀಯರು ಮುಂದುಗಡೆಯಲ್ಲಿ ನಾಟ್ಯವಾಡುತ್ತಿಹರು ವಶಿಷ್ಠ, ಕಶ್ಯಪ, ಕಣ್ವ, ವಿಶ್ವಾಮಿತ್ರ, ಭರದ್ವಾಜ, ಜಾಬಾಲಿ, ಮಾರೀಚ, ನಾರದ, ಅತ್ರಿ, ಕ್ರತು, ದಕ್ಷ ಮೊದಲಾದವರು. ಸಿದ್ಧ, ಚಾರಣ, ವಿದ್ಯಾಧರ, ಕಿನ್ನರ, ಕಿಂಪುರುಷ, ಗುಹ್ಯ, ಪಿಶಾಚ, ರಾಕ್ಷಸ, ಸರ್ಪ, ಗರುಡ, ಇವರೆಲ್ಲರೂ ದಿವ್ಯದೇಹಂಗಳಂ ತಾಳ್ದು ದಿವ್ಯಾಭರಣಂಗಳಂ ತೊಟ್ಟು ದಿವ್ಯಕುಸುಮಂಗಳಂ ಮುಡಿದು ಸೂರ್ಯ ಚಂದ್ರಾಗ್ನಿಗಳಿಗೂ, ಮಿಂಚುಗಳಿಗೂ, ಸಮಾನವಾದ ಕಾಂತಿಯುಳ್ಳವರಾಗಿ ತಾವು ಹತ್ತಿ ಬಂದ ವಿಮಾನಂಗಳನ್ನಿಳಿದು ಆ ಸ್ಥಳದಲ್ಲಿ ನಿಂತು ಸ್ತೋತ್ರ ಗಾನ ರುದ್ರಾಧ್ಯಾಯ ಪಾರಾಯಣಪ್ರದಕ್ಷಿಣೆ ನಮಸ್ಕಾರ ನಾಟ್ಯ ಮೊದಲಾದ ಉಪಚಾರಂಗಳಂ ಮಾಡುತ್ತಾ ಉಭಯ ಪಾರ್ಶ್ವಂಗಳಲ್ಲಿಯೂ ಸ್ತುತಿಸು ತ್ತಿಹರು. ಮತ್ತು ಆ ಗೋಕರ್ಣದಲ್ಲಿ ಸನತ್ಕುಮಾರನಿಂದಲೂ, ಅಗಸ್ತ್ಯ ನಿಂದಲೂ ಪ್ರಿಯವ್ರತ ಮೊದಲಾದ ರಾಯರುಗಳಿಂದಲೂ, ಅಗ್ನಿಯಿಂದಲೂ, ವಾಯುವಿನಿಂದಲೂ ಮನ್ಮಥನಿಂದಲೂ, ಭದ್ರಕಾಳಿಯಿಂದಲೂ, ಶಿಂಶುಮಾರ ನಿಂದಲೂ, ಸೂರ್ಯನೇ ಮೊದಲಾದಗ್ರಹಗಳಿಂದಲೂ, ದುರ್ಮುಖ ಮಣಿನಾಗ ಏಲಾಪುತ್ರ ಮೊದಲಾದ ಸರ್ಪಂಗಳಿಂದಲೂ, ಗರುಡನಿಂದಲೂ, ರಾವಣ ಕುಂಭಕರ್ಣ ವಿಭೀಷಣ ಮೊದಲಾದ ರಾಕ್ಷಸರಿಂದಲೂ ತಪಸ್ಸು ಮಾಡಲ್ಪ ಟ್ಟಿತು. ಇವರು ಮತ್ತು ಇನ್ನೂ ಕೆಲವರು ದೇವತೆಗಳು ಮನುಷ್ಯರು ಗೋಕರ್ಣ ಕ್ಷೇತ್ರದಲ್ಲಿ ಭಕ್ತಿಯಿಂದ ದೇವ ದೇವನಾದ ಮಹಾ ಬಲೇಶ್ವರನಂ ಪೂಜಿಸಿ, ತಮ್ಮ ತಮ್ಮ ಮನೋರಥಂಗಳಂ ಪಡೆದು ತಮ್ಮ ಹೆಸರಿನಲ್ಲಿ ಲಿಂಗ ಪ್ರತಿಷ್ಠೆಯಂ ಮಾಡಿ ತಮ್ಮ ಹೆಸರಿನ ತೀರ್ಥಂಗಳಂ ನಿರ್ಮಿಸಿಹರು. ಆ ಗೋಕ ರ್ಣದಲ್ಲಿ ಬ್ರಹ್ಮ, ವಿಷ್ಣು, ಷಣ್ಮುಖ, ವೀರಭದ್ರ, ವಿಘ್ನೇಶ್ವರ, ಯಮ, ಕ್ಷೇತ್ರಪಾಲ, ದುರ್ಗಿ ಮೊದಲಾದ ದೇವತೆಗಳಿಗೆ ಶಿವನ ಸೇವೆಯಂ ಮಾಡು ವದಕ್ಕೋಸ್ಕರ ಪ್ರತ್ಯೇಕವಾದ ಮನೆಗಳಿವೆ, ಅಲ್ಲದೆ ಅಲ್ಲಿ ಅನೇಕ ಕೋಟಿ

ಶಿವಲಿಂಗಗಳು ಅನೇಕ ಕೋಟಿ ತೀರ್ಥಂಗಳು ಇರುತ್ತಿವೆ. ಎಲೈ ರಾಯನೇ! ಬಹಳವಾಗಿ ಹೇಳಿ, ಪ್ರಯೋಜನವೇನು ಗೋಕರ್ಣದಲ್ಲಿರ್ದ ಪಾಷಾಣಂಗಳೆಲ್ಲವು ಶಿವಲಿಂಗಂಗಳು. ಅಲ್ಲಿರ್ದ ಉದಕಗಳೇ ತೀರ್ಥಗಳು. ಅಲ್ಲಿರ್ದ ಶಿವಲಿಂಗಗಳು ಪರಬ್ರಹ್ಮವೆಂದು ಋಷಿಗಳಿಂದ ಪುರಾಣಂಗಳಲ್ಲಿ ಹೇಳಲ್ಪಟ್ಟಿಹವು.

ಅಲ್ಲಿರ್ದ ಸಮಸ್ತ ಲಿಂಗಗಳಿಗೂ ಮಹಾ ಬಲೇಶ್ವರನ ಲಿಂಗವೇ ಮುಖ್ಯವಾದುದು. ಅಲ್ಲಿರ್ದ ಸಕಲ ತೀರ್ಥಂಗಳಿಗೂ ಕೋಟಿ ತೀರ್ಥವೇ ಶ್ರೇಷ್ಠ. ಆ ಮಹಾ ಬಲೇಶ್ವರನು ಕೃತಯುಗದಲ್ಲಿ ಶ್ವೇತವರ್ಣನಾಗಿಯೂ, ತ್ರೇತಾಯುಗದಲ್ಲಿ ರಕ್ತವರ್ಣನಾಗಿಯೂ, ದ್ವಾಪರಯುಗದಲ್ಲಿ ಪೀತವರ್ಣನಾಗಿಯೂ, ಕಲಿಯುಗದಲ್ಲಿ ಶ್ಯಾಮಲ ವರ್ಣನಾಗಿಯೂ ಇಹನು. ಆ ಮಹಾ ಬಲೇಶ್ವರಲಿಂಗವು ಸಪ್ತಪಾತಾಳಂಗಳಂ ಅತಿಕ್ರಮಿಸಿ ಇದ್ದರೂ ಕಲಿಯುಗದಲ್ಲಿ ಕೊಂಚವಾಗಿ ಕಾಣಿಸುವದು. ಈ ಕ್ಷೇತ್ರವು ಪಶ್ಚಿಮ ಸಮುದ್ರತೀರದಲ್ಲಿದೆ. ಇಂಥಾ ಮಹಿಮೆಯುಳ್ಳ ಗೋಕರ್ಣಕ್ಷೇತ್ರವು ಬ್ರಹ್ಮಹತ್ಯಾದಿ ಪಾತಕಂಗಳಂ ಪರಿಹರಿಸುವುದರಲ್ಲೇನಾಶ್ಚರ್ಯ. ಪಿತೃ ಮಾತೃಹತ್ಯೆಗಳಂ ಮಾಡಿದವರು ಪ್ರಾಣಿಹಿಂಸೆಯಂ ಮಾಡಿದವರು ಹಿತಶತ್ರುಗಳು ಗುಣರಹಿತರಾದವರು ಪರಸ್ತ್ರೀ ಗಮನ ಮಾಡಿದವರು ದುಷ್ಟರು ದುರಾಚಾರಿಗಳು ಕೃಪಣರು ಲೋಭಿಗಳು ದೀನರು ಚಾಡಿಕಾರರು ಅಜ್ಞಾನಿಗಳು ಕಳ್ಳರು ಅಧಿಕ ಊಟಮಾಡುವವರು ಅತಿಕಾಮಿಗಳು ಇವರೆಲ್ಲರು ಗೋಕರ್ಣಕ್ಕೆ ಬಂದು ಅಲ್ಲಿನ ತೀರ್ಥಂಗಳಲ್ಲಿ ಸ್ನಾನಮಾಡಿ, ಮಹಾಬಲೇಶ್ವರನ ದರ್ಶನವಂ ಮಾಡಿ ಕೈಲಾಸವನ್ನೈದುವರು. ಗೋಕರ್ಣದಲ್ಲಿ ಯಾರು ಪುಣ್ಯತೀರ್ಥಂಗಳಲ್ಲಿ ಪುಣ್ಯಕ್ಷೇತ್ರಂಗಳೊಡನೆ ಕೂಡಿದ ಪುಣ್ಯದಿವಸಂಗಳಲ್ಲಿ ಸ್ನಾನಮಾಡಿ ಮಹಾಬಲೇಶ್ವರನನ್ನು ಪೂಜಿಸುತ್ತಿದ್ದಾರೋ ಅವರು ರುದ್ರರಾಗುವರು. ಇವರಲ್ಲಿ ಸಂದೇಹವಿಲ್ಲ ಅಲ್ಲಿ ಅನ್ಯಜಾತಿಯವನಾದರು ಏಕಕಾಲದಲ್ಲಿಯಾದರು ಶಿವಪೂಜೆಯಂ ಮಾಡಲು ಮುಕ್ತಿಯುಂ ಪಡೆವನು. ಆ ಕ್ಷೇತ್ರದಲ್ಲಿ ಆದಿತ್ಯವಾರ, ಸೋಮವಾರ, ಮಂಗಳವಾರಂಗಳೊಡಗೂಡಿದ ಅಮಾವಾಸ್ಯಯುಲ್ಲಿ ಸಮುದ್ರಸ್ನಾನ, ದಾನ, ಪಿತೃತರ್ಪಣ, ಶಿವಪೂಜೆ, ಜಪ, ಹೋಮ, ಬ್ರಾಹ್ಮಣ ಸತ್ಕಾರಂಗಳಂ ಕೊಂಚವಾಗಿ ಮಾಡಿದರೂ ಕಡೆ ಇಲ್ಲದ ಫಲವಹುದು. ವ್ಯತೀಪಾತಾದಿ ಯೋಗಂಗಳಲ್ಲಿಯು ಸೂರ್ಯ ಚಂದ್ರಗ್ರಹಣಂಗಳಲ್ಲಿಯು ಸಾಂಕ್ರಮಣಂಗಳಲ್ಲಿಯು ಪ್ರದೋಷಕಾಲದಲ್ಲಿಯು ಶಿವಪೂಜೆಯಂ ಮಾಡುವವರಿಗೆ ಮುಕ್ತಿಯಹುದು.

ಎಲೈ ರಾಯನೇ! ಮುಕ್ತಿಪ್ರದಮಾದ ಒಂದಾನೊಂದು ದಿವಸಮಂ ಹೇಳುವೆನು ಕೇಳು. ಆ ದಿವಸ ಒಬ್ಬಾನೊಬ್ಬ ಬೇಡನು ಬೇಟೆಯಾಡುವೆನೆಂದು

ಅರಣ್ಯಕ್ಕೆ ಹೋಗಿ, ಸಾಯಂಕಾಲ ಪರ್ಯಂತರವೂ ತಿರಿಗಿದರೂ ಒಂದು ಮೃಗವೂ ದೊರೆಯದಿರಲು, ಉಪವಾಸದಿಂದಲೇ ಆ ರಾತ್ರಿ ಅರಣ್ಯದಲ್ಲಿಯೇ ಒಂದು ಕೊಳದ ತಡಿಯಲ್ಲಿ ಬಿಲ್ವವೃಕ್ಷಗಳ ಪೊದೆಯಲ್ಲಿ ಮರೆಯಾಗಿ ಕೂತು ಕೊಂಡು ಆ ಕೊಳದ ಬಳಿಗೆ ನೀರಿಗೆ ಬಂದ ಮೃಗಗಳಂ ಬಾಧಿಸುವೆನೆಂದು ಉದ್ಯೋಗಿಸಿ, ಕಣ್ಣಿಗೆ ಮರೆಯಾದ ಆ ಬಿಲ್ವವೃಕ್ಷದ ಕೊನೇ ರೆಂಬೆಗಳಂ ಮುರಿ ಮುರಿದು ಹಾಕಲು, ಅದೆಲ್ಲವು ಅಲ್ಲಿರ್ದ ಪುರಾತನವಾದ ಶಿವಲಿಂಗದ ಮಸ್ತಕದ ಮೇಲೆ ಬಿದ್ದಿತು. ದೈವಯೋಗದಿಂದ ಉಪವಾಸ ಜಾಗರಣೆ ಬಿಲ್ವಪತ್ರೆಯಿಂದ ಮಾಡಿದ ಶಿವಪೂಜೆಯೂ ದೊರಕಿದಕಾರಣ ಆ ಬೇಡನು ಮುಕ್ತಿಯಂ ಪಡೆದನು. ಆ ದಿವಸವಾವುದೆನಲು, ಮಾಘಮಾಸದ ಕೃಷ್ಣಪಕ್ಷ ಚತುರ್ದಶಿಯೆ ಅದು ಪುಣ್ಯ ತಿಥಿಗಳಿಗೆಲ್ಲಕ್ಕಿಂತಲೂ ಶ್ರೇಷ್ಠವಾದುದು. ಪುಣ್ಯಾತ್ಮರಿಗಲ್ಲದೆ ಇತರರಿಗೆ ಗೋಕರ್ಣ ಕ್ಷೇತ್ರವೂ ಶಿವರಾತ್ರಿಯೂ ಶಿವಲಿಂಗವೂ ಬಿಲ್ವಪತ್ರೆಯೂ ಈ ನಾಲ್ಕು ದೊರಕಲಾರವು. ಶಿವಶಿವಾ! ಜನರ ಅಜ್ಞಾನವನ್ನೇನು ಹೇಳಲಿ? ಮೂಗರು ವೇದಂಗಳಂ ಉಪೇಕ್ಷಿಸಿದ ಹಾಗೆ ಶಿವರಾತ್ರಿಯಂ ಉಪೇಕ್ಷೆ ಮಾಡುತ್ತಾರೆ. ಉಪವಾಸ ಜಾಗರಣೆ ಶಿವಲಿಂಗಸನ್ನಿಧಿ ಗೋಕರ್ಣಕ್ಷೇತ್ರವಾಸ ಇವೆಲ್ಲವು ಶಿವರಾತ್ರಿಯಲ್ಲಿ ದೊರಕಿದರೆ ಅದು ಮನುಷ್ಯರಿಗೆ ಕೈಲಾಸಕ್ಕೆ ಹೋಗುವದಕ್ಕೆ ಸೋಪಾನಂಗಳಾಗಿಹವು.

ಎಲೈ ರಾಯನೇ! ನಾನು ಗೋಕರ್ಣಕ್ಕೆ ಹೋಗಿ ಅಲ್ಲಿ ಶಿವರಾತ್ರಿ ವ್ರತ ವನ್ನು ಮಾಡಿ ಮಹಾಬಲೇಶ್ವರನ ಮಹೋತ್ಸವಂಗಳಂ ನೋಡಿ ಬಂದೆನು. ಅಲ್ಲಿಗೆ ಶಿವರಾತ್ರಿ ಮಹೋತ್ಸವವನ್ನು ನೋಡುವುದಕ್ಕೆ ಸಮಸ್ತ ದೇಶಂಗಳಿಂ ದಲೂ ಬ್ರಾಹ್ಮಣರು ಕ್ಷತ್ರಿಯರು ವೈಶ್ಯರು ಶೂದ್ರರೆಂಬ ನಾಲ್ಕು ವರ್ಣದವರೂ, ಬ್ರಹ್ಮಚಾರಿಗಳು ಗೃಹಸ್ಥರು ವಾನಪ್ರಸ್ಥರು ಸನ್ಯಾಸಿಗಳೆಂಬ ನಾಲ್ಕು ಆಶ್ರ ಮದವರೂ, ಸ್ತ್ರೀಯರು ಬಾಲಕರು ವೃದ್ಧರುಗಳೂ ಸನಕ, ಸನಂದನ, ಸನ ತ್ಕುಮಾರ, ಸನತ್ಸುಜಾತ, ನಾರದಾದಿ ದೇವಋಷಿಗಳು ಬಹುಮಂದಿ ರಾಜ ಋಷಿಗಳು ಬಂದು ಸಮಸ್ತ ತೀರ್ಥಗಳಲ್ಲಿಯು ಸ್ನಾನಮಾಡಿ ಮಹಾಬಲೇ ಶ್ವರನ ದರ್ಶನದಿಂದ ಜನ್ಮಸಾಫಲ್ಯವಂ ಪಡೆದು ತಮ್ಮ ತಮ್ಮ ದೇಶಗಳಿಗೆ ಹೋದರು. ಈಗ ಯಜ್ಞವಂ ಮಾಡಲಿಚ್ಛೆಯುಳ್ಳ ಜನಕರಾಯನಿಂದ ನಾನು ಕರೆಯಲ್ಪಟ್ಟವನಾಗಿ ಪರಮೇಶ್ವರನ ನಿವಾಸಸ್ಥಾನವಾದ ಗೋಕರ್ಣಕ್ಷೇತ್ರ ದಿಂದ ಮಿಥಿಲಾಪಟ್ಟಣಕ್ಕೆ ಬರುತ್ತಾ ಇರಲಾಗಿ ದಾರಿಯಲ್ಲಿ ಒಂದಾನೊಂದು ಆಶ್ಚರ್ಯಮಂ ಕಂಡು ಕೃತಾರ್ಥನಾದೆನೆಂದು ಗೌತಮ ಮಹಾಮುನಿಯು

ಕಲ್ಮಷಪಾದರಾಯನಿಗೆ ನಿರೂಪಿಸಿದ ವೃತ್ತಾಂತವನ್ನು ಸೂತಪುರಾಣಿಕನು ಶೌನಕಾದಿ ಮಹಾಮುನಿಗಳಿಗೆ ನಿರೂಪಿಸಿದನು.

ಇದು ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರ ನರಪತಿ ಬಿರುದೆಂತೆಂಬರಗಂಡ ಶಂಖಚಕ್ರ ಮಕರ ಮತ್ಸ್ಯ ಶರಭಸಾಳ್ವ ಗಂಡಭೇರುಂಡಾದಿ ನಾನಾ ಬಿರುದಾಂಕಿತ ಯಾದವಕುಲತಿಲಕ ಆತ್ರೇಯಸ ಗೋತ್ರ ಅಶ್ವಲಾಯನಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರ ರಾಜಒಡೆಯರ ಪೌತ್ರರಾದ ನರಸ ಭೂಪಾಲಕರ ಪುತ್ರರಾದ ಚಾಮರಾಜ ಒಡೆಯರವರು ಕರ್ಣಾಟಕ ಭಾಷೆಯಲ್ಲಿ ವಿರಚಿಸಿದ ಸ್ಕಂದಪುರಾಣೋಕ್ತವಾದ ಬ್ರಹ್ಮೋತ್ತರಖಂಡದಲ್ಲಿ ಶಿವರಾತ್ರಿ ಮಹಿಮೆ ಎಂಬ ಗೋಕರ್ಣ ಕ್ಷೇತ್ರ ಮಹಿಮೆಯನ್ನೇ ಪೇಳುವ ೨ನೆ ಅಧ್ಯಾಯಕ್ಕೆ ಮಂಗಳಮಸ್ತು.



ಮೂರನೆಯ ಅಧ್ಯಾಯ ಪ್ರಾರಂಭ.

## ಗೋಕರ್ಣಕ್ಷೇತ್ರ ಮಹಿಮೆ.

ಅನಂತರದಲ್ಲಿ ಕಲ್ಮಷಪಾದರಾಯನು ಗೌತಮ ಮಹಾಮುನಿಯನ್ನು ಈ ಪ್ರಕಾರವಾಗಿ ಪ್ರಶ್ನೆಮಾಡಿ ಕೇಳುತ್ತಿದ್ದನು. ಅದೆಂತೆಂದರೆ,—

ಎಲೈ ಗೌತಮ ಮಹಾಮುನಿಯೇ ! ನೀವು ಬರುವ ದಾರಿಯಲ್ಲಿ ಯಾವ ಆಶ್ಚರ್ಯವನ್ನು ಕಂಡಿರೋ ಅದನ್ನು ಕೇಳಿ ನಾನು ಕೃತಾರ್ಥನಾಗಬೇಕೆಂದು ಬೇಡಿಕೊಳ್ಳಲು, ಆ ಗೌತಮ ಮುಹಾಮುನಿಯು ಕಲ್ಮಷಪಾದರಾಯನನ್ನು ಕುರಿತು ಇಂತೆಂದನು.

ಎಲೈ ರಾಯನೇ ! ನಾನು ಗೋಕರ್ಣದಿಂದ ಇಲ್ಲಿಗೆ ಬರುತ್ತಾ ಒಂದಾನೊಂದು ಪ್ರದೇಶದಲ್ಲಿ ಮಧ್ಯಾಹ್ನದ ಬಿಸಿಲಿನಿಂದ ಬಳಲಿ ನಿರ್ಮಲವಾದ ಒಂದು ಕೊಳವನ್ನು ಕಂಡು, ಆ ಕೊಳದ ಉದಕವನ್ನು ಪಾನಮಾಡಿ ಆಯಾಸ ಪರಿಹಾರಾರ್ಥವಾಗಿ ಆ ಕೊಳದ ತೀರದಲ್ಲಿಪ್ಪ ತಣ್ಣನೆ ನೆರಳುಳ್ಳ ಆಲದ ಮರದ ಕೆಳಗೆ ನಿಂತೆನು. ಆಗ ವೃದ್ಧೆಯಾದವಳಾಗಿ, ಹುಟ್ಟು ಕುರುಡಿಯಾಗಿ, ಒಣಗುತ್ತಿದ್ದ ಬಾಯುಳ್ಳವಳಾಗಿ, ನಾನಾಪ್ರಕಾರವಾದ ವ್ಯಾಧಿಗಳಿಂದಲೂ, ಆಹಾರವಿಲ್ಲದ್ದರಿಂದಲೂ, ಕೃಶಳಾಗಿ ಕುಷ್ಠವ್ರಣಗಳಿಂದಲೂ, ಹುಳುಗಳಿಂದಲೂ, ತುಂಬಲ್ಪಟ್ಟವಳಾಗಿ, ಕೀವು ರಕ್ತಗಳಿಂದ ನೆನೆದವಳಾಗಿ, ಹೆಜ್ಜೆ ಹೆಜ್ಜೆಗೆ ಎಡವುತ್ತ ಬಿಸಿಲಿನಿಂದ ಕಾದ ಧೂಳಿನಿಂದ ಸುಡಲ್ಪಟ್ಟ ಅಂಗಾಲುಗಳುಳ್ಳವಳಾಗಿ, ಮಲ್ಲ

ಮೂತ್ರಂಗಳ ದುರ್ಗಂಧದಿಂದ ಸಮೀಪಕ್ಕೆ ಸೇರ ಕೂಡದವಳಾಗಿ, ಕೆಮ್ಮು ಉಬ್ಬಸಗಳಿಂದ ಸಂಕಟಪಡುತ್ತ ಉದರಿಹೋದ ಮುಂಪೆಯು ಕೂದಲುಗಳುಳ್ಳವಳಾಗಿ; ಉಡುವದಕ್ಕೆ ಸಾಲದ ಜೀರ್ಣದ ವಸ್ತ್ರವುಳ್ಳವಳಾಗಿ, ಮರಣಾವಸ್ಥೆಯಲ್ಲಿದ್ದ ಒಬ್ಬ ಚಂಡಾಲ ಸ್ತ್ರೀಯನ್ನು ಕಂಡು ಅವಳು ಮರಣವನ್ನೈದುವ ಬಗೆಯನ್ನು ನೋಡುತ್ತಿದ್ದೆನು, ಆ ಸಮಯದಲ್ಲಿ ತನ್ನ ಕಾಂತಿಗಳಿಂದ ಆಕಾಶ ಮಾರ್ಗವನ್ನು ಬೆಳಗುತ್ತಿದೆಯೋ ಎನ್ನುವಂತಿದ್ದ ಒಂದು ದಿವ್ಯವಿಮಾನವು ಬಂದಿತು ಸೂರ್ಯಾಗ್ನಿಗಳ ತೇಜಸ್ಸುಗಳಿಗೆಲ್ಲ ಪಂಜರದೋಪಾದಿಯಲ್ಲಿದ್ದ ಆ ವಿಮಾನದಲ್ಲಿ ತ್ರಿಶೂಲ ಖಟ್ವಾಂಗಗಳನ್ನು ಧರಿಸಿ ಮಸ್ತಕವಲ್ಲಿ ಚಂದ್ರಕಳೆಯುಳ್ಳಂಥಾ ಮಲ್ಲಿಗೆಯ ಪುಷ್ಪದೋಪಾದಿಯಲ್ಲಿಯೂ ಸ್ಫಟಿಕದೋಪಾದಿಯಲ್ಲಿಯೂ ಶುಭ್ರವರ್ಣದ ಶರೀರವುಳ್ಳಂಥಾ ತ್ರಿನೇತ್ರನಾಗಿ ಕಿರೀಟಕುಂಡಲ ಕಟಕಕೇಯೂರ ಹಾರಾದಿ ಭೂಷಣಂಗಳಿಂದ ಭೂಷಿತನಾಗಿ ಶುಭಲಕ್ಷಣಗಳುಳ್ಳಂಥ ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳಂಥ ನಾಲ್ಕುಜನ ಶಿವದೂತರನ್ನು ಕಂಡೆನು. ಅನಂತರ ಆ ಶಿವದೂತರು ವಿಮಾನದೊಡನೆ ಸಮೀಪಕ್ಕೆ ಬರಲು, ನಾನು ಆಶ್ಚರ್ಯಪಟ್ಟು ಸಮೀಪಕ್ಕೆ ಹೋಗಿ ಆಕಾಶವಿಮಾನದಲ್ಲಿರುವ ಆ ಶಿವದೂತರನ್ನು ಕುರಿತು ಇಂತೆಂದನು.

ಎಲೈ ಶಿವಕಿಂಕರರಿರ! ದೇವತೆಗಳಲ್ಲಿ ಶ್ರೇಷ್ಠರಾದಂಥಾ ತ್ರಿಶೂಲಖಡ್ಗ ಖಟ್ವಾಂಗ ಗದಾಧಾರಿಗಳಾದಂಥಾ ಪರಮೇಶ್ವರನಿಗೆ ಭೃತ್ಯರಾದಂಥಾ ಮೂರು ಲೋಕಗಳನ್ನು ಪರಿಪಾಲಿಸುವುದರಲ್ಲಿ ಸಮರ್ಥರಾದ ನಿಮಗೆ ನಮಸ್ಕಾರ. ನಿಮ್ಮ ಆಕಾರವಂ ಕಂಡು ಶಿವದೂತರೆಂದು ತಿಳಿದೆನು. ಇಲ್ಲಿಗೆ ನೀವು ಬಂದದ್ದು ಲೋಕ ಸಂರಕ್ಷಣಾರ್ಥವೋ ಅಥವ ವಿನೋದಾಥವೋ ದಯವಿಟ್ಟು ನಿರೂಪಿಸಿ ಎಂದು ಕೇಳಲಾಗಿ, ಆ ಶಿವದೂತರು ಇಂತೆಂದರು.

ಕೇಳೈ ಗೌತಮ ಮಹಾಮುನಿಯೇ! ಮುಂದುಗಡೆಯಲ್ಲಿ ಮರಣವನ್ನೈದುತ್ತಿರುವ ಚಂಡಾಲ ಸ್ತ್ರೀಯನ್ನು ಕರೆದುಕೊಂಡು ಬರಹೇಳಿ ನಮ್ಮ ಒಡೆಯನಾದ ಪರಮೇಶ್ವರನು ಆಜ್ಞಾಪಿಸಿದಕಾರಣ ನಾವು ಇಲ್ಲಿಗೆ ಬಂದೆವು ಎಂದು ಆ ಶಿವದೂತರು ಹೇಳಿದರು, ನಾನು ಆಶ್ಚರ್ಯಪಟ್ಟು ಕೈಮುಗಿದು ಅವರಿಗೆ ಮತ್ತೆ ಇಂತೆಂದನು.

ಶಿವಶಿವಾ! ಶುನಕಗಳು ಯಾಗಶಾಲೆಯನ್ನು ಹೋಗುವದಕ್ಕೆ ಹೇಗೆ ಯೋಗ್ಯವಲ್ಲವೋ ಹಾಗೆ ಪಾಪಿಷ್ಠಿಯಾದ ಆ ಚಂಡಾಲ ಸ್ತ್ರೀಯು ವಿಮಾನವನ್ನು ಏರುವದಕ್ಕೆ ಯೋಗ್ಯಳಲ್ಲ, ಇವಳು ಹುಟ್ಟಿದ್ದು ಮೊದಲಾಗಿ ಪಾಪಿಯಾಗಿ ಆಚಾರ ಹೀನಳಾಗಿ, ಪಾಪಿಗಳೊಡನೆ ಸಂಗವನ್ನು ಮಾಡಿಕೊಂಡಿದ್ದ

ವಳು ಇವಳನ್ನು ಹೇಗೆ ಶಿವಲೋಕಕ್ಕೆ ಕರೆಯುತ್ತೀರಿ, ಇವಳಿಗೆ ಶಿವಜ್ಞಾನವಿಲ್ಲ ತಪಸ್ಸಿಲ್ಲ, ಸತ್ಯವಿಲ್ಲ, ದಯೆಯಿಲ್ಲ ಗೋಮಾಂಸವನ್ನು ತಿಂದು ಮದ್ಯಪಾನ ಮಾಡಿ ಬೆಳೆದಂಥಾವಳು ಜೀವಹಿಂಸೆಗೆ ಅಂಜದಳು ಶಿವಪಂಚಾಕ್ಷರೀ ಜಪ ಪೂಜೆಗಳನ್ನು ಮಾಡಿದವಳಲ್ಲ, ಕೆರೆ ಕಟ್ಟಿ ಭಾವಿಗಳನ್ನು ಕಟ್ಟಿಸಿದವಳಲ್ಲ, ಸ್ನಾನ ದಾನ ವ್ರತಗಳನ್ನು ಮಾಡಿದವಳಲ್ಲ, ಇವಳನ್ನು ಕಣ್ಣಿಂದ ನೋಡಲಿ ಬಾರದು, ಇವಳ ಸಂಗಡ ಮಾತನಾಡಕೂಡದು, ಇಂಥವಳನ್ನು ಹೇಗೆ ಶಿವಲೋಕಕ್ಕೆ ಕರೆಯುತ್ತೀರಿ, ಇವಳು ಜನ್ಮಾಂತರದಲ್ಲಿಯಾದರೂ ಪುಣ್ಯಗಳನ್ನು ಮಾಡಿದವಳಲ್ಲ. ಹಾಗಿದ್ದರೆ ಕುಷ್ಠವ್ರಣಂಗಳಿಂದ ಹೇಗೆ ಪೀಡಿತಳಾದಾಳು ಶಿವಶಿವಾ ! ಪರಮೇಶ್ವರನ ಮಹಿಮೆಯು ಮನುಷ್ಯರು ಅರಿಯಬಾರದುದು. ಇಂಥಾ ಪಾಪಿಗಳೂ ಸಪ ಮುಕ್ತಿಯನ್ನು ಪಡೆಯುತ್ತಿದ್ದಾರೆಂದ[illegible] ಕೇಳಿ[illegible] [illegible]ಗಣಂಗಳು ನನ್ನ ಸಂಶಯ ತೊಲಗುವಂತೆ ಹೇಗೆ ನಿರೂಪಿಸಿದ[illegible]..

ಎಲೈ ಗೌತಮಋಷಿಯೇ ! ಈ ಸ್ತ್ರೀಯು ಯಾವ ಮಹಿಮೆಯುಳ್ಳವಳೆಂದು ಶಿವಲೋಕವನ್ನೈದಿಸಿರೆಂದು ಕೇಳಿದೆಯಲ್ಲಾ, ಆಶ್ಚರ್ಯಕರವಾದ ಇವಳು ಮಾಡಿದ ಸುಕೃತವನ್ನು ಸಾವಧಾನದಿಂದ ಕೇಳು. ಇವಳು ಪೂರ್ವಜನ್ಮದಲ್ಲಿ ಸೌಮಿನಿಯೆಂಬ ಹೆಸರುಳ್ಳವಳಾಗಿ, ಪೂರ್ಣಚಂದ್ರನಿಗೆ ಸರಿಯಾದ ಮುಖವುಳ್ಳವಳಾಗಿ ಮಲ್ಲಿಗೆ ಪುಷ್ಪಗಳೋಪಾದಿಯಲ್ಲಿ ಮೃದುವಾದ ಅವಯವಗಳುಳ್ಳವಳಾಗಿ, ಕೇಕಯ ದೇಶದ ಬ್ರಾಹ್ಮಣನಿಗೆ ಮಗಳಾಗಿ ಹುಟ್ಟಿ, ಎರಡನೆಯ ರತೀದೇವಿಯಂತೆ ಸೌಂದರ್ಯವುಳ್ಳವಳಾಗಿ, ಶುಭಲಕ್ಷಣ ಸಂಪನ್ನೆಯಾಗಿ, ತಾಯಿಯ ಮನೆಯಲ್ಲಿ ಬೆಳೆಯುತ್ತಿದ್ದಳು, ಅವಳ ಚಲುವಿಕೆಯನ್ನು ಕಂಡು ಸಮಸ್ತ ಜನರು ಆಶ್ಚರ್ಯಪಡುತ್ತಿದ್ದರು. ಅನಂತರದಲ್ಲಿ ಆ ಸೌಮಿನಿ ಸಮಸ್ತವಾದ ಬಂಧುಗಳಿಂದ ಲಾಲಿಸಲ್ಪಟ್ಟವಳಾಗಿ ಬೆಳೆಯುತ್ತಿದ್ದು, ದಿನಕ್ರಮದಲ್ಲಿ ಮನ್ಮಥನಿಗೆ ಸಮಾನವಾದ ಯೌವನವನ್ನು ಪಡೆದಳು. ಅವಳ ತಂದೆಯಾದ ಬ್ರಾಹ್ಮಣನು ಬಂಧು ಜನಗಳ ಅನುಮತಿಯಿಂದ ಅವಳನ್ನು ವೇದಶಾಸ್ತ್ರ ಸಂಪನ್ನನಾದ ಒಬ್ಬಾನೊಬ್ಬ ಬ್ರಾಹ್ಮಣನಿಗೆ ಕೊಟ್ಟು ಮದುವೆಯನ್ನು ಮಾಡಿದನು. ಅನಂತರ ಯೌವನವತಿಯಾದ ಆ ಸೌಮಿನಿ ಬಂಧು ಜನಗಳು ಮೆಚ್ಚುವಹಾಗೆ ಯೋಗ್ಯವಾದ ನಡತೆಯುಳ್ಳವಳಾಗಿ ತನ್ನ ಪತಿಯೊಡನೆ ಕೆಲವುಕಾಲ ಕ್ರೀಡಿಸುತ್ತಿರಲು, ಅವಳ ಪತಿಯು ಪ್ರಾಯಸಮರ್ಥನಾದರೂ ದೈವಯೋಗದಿಂದ ರೋಗಪೀಡಿತನಾಗಿ ಮೃತನಾದನು.

ಬಳಿಕ ಆ ಸೌಮಿನಿಯು ಪತಿವಿಯೋಗದಿಂದ ದುಃಖವುಳ್ಳವಳಾಗಿದ್ದು ಮನ್ಮಥ ಪೀಡಿತಳಾದರೂ ಇಂದ್ರಿಯಂಗಳನ್ನು ನಿಗ್ರಹಿಸಿಕೊಂಡು ತನ್ನ ಸದಾ

ಚಾರವನ್ನು ಬಿಡದೆ ಕೆಲವು ಕಾಲ ಇರುತ್ತಿದ್ದಳು. ಮತ್ತೂ ದಿನದಿನಕ್ಕೆ ಮನ್ಮಥ ಬಾಧೆ ಹೆಚ್ಚಾಗಲು, ಆ ಮನೋಮಥನ ಮಾಡುವ ಮನ್ಮಥನ ಬಾಣಪ್ರಹಾರಗಳನ್ನು ಸಹಿಸಲಾರದೆ ತನ್ನನ್ನು ಕಾದಿರ್ದು ಶಿಕ್ಷಿಸುತ್ತಿದ್ದ ಬಂಧು ಜನಗಳಿಗೆ ತಿಳಿಯದಹಾಗೆ ಚಾತುರ್ಯವಂತೆಯಾದಕಾರಣ ತನ್ನ ದುರಾಚಾರವನ್ನು ಒಬ್ಬರಿಗೂ ತಿಳಿಸದೆ ಕೆಲವು ಕಾಲ ವ್ಯಭಿಚಾರ ಮಾಡುತ್ತಾಯಿದ್ದಳು. ಬಳಿಕ ಕೆಲವು ದಿನಂಗಳ ಮೇಲೆ ಗರ್ಭವನ್ನೂ ಧರಿಸಿದಳು, ಆ ಚಿಹ್ನೆಗಳನ್ನು ಬಂಧು ಜನಂಗಳು ಕಂಡು ಜಾರಿಣಿಯಾದಳೆಂದು ತಿಳಿದವರಾಗಿ, ಶಿವಶಿವಾ ! ಸ್ತ್ರೀಯರು ಪರಪುರುಷರ ಸಂಗದಿಂದ ಕೆಡುವರು, ಬ್ರಾಹ್ಮಣರು ನೀಚಸೇವೆಯಿಂದ ಕೆಡುವರು, ಅರಸುಗಳು ಬ್ರಾಹ್ಮಣ ದಂಡನೆಯಿಂದ ಕೆಡುವರು, ಯತಿಗಳು ಭೋಗದಿಂದ ಕೆಡುವರು ವಿಶಾಸಲಾಗಿ ಮಾಡಿದ ಅನ್ನವು ನಾಯಿ ಮುಟ್ಟಿದರೆ ಕೆಡುವದು, ಮದ್ಯದಿಂದ ಹಾಲು ಕೆಡುವದು, ಅದೇ ಪ್ರಕಾರ ಜಾರಸ್ತ್ರೀಯಿಂದ ಕುಲವು ಕೆಡುವುದು. ಎಂದು ತಿಳಿದು ಆವಳ ಅತ್ತೆ ಮಾವಂದಿರು ಬಾವಂದಿರು ಮೈದಂದಿರು ಮೊದಲಾದ ಬಂಧುಗಳೆಲ್ಲರೂ ಕೂಡಿ ಅವಳ ಮುಂದಲೆ ಹಿಡಿದು ದೂರಕ್ಕೆ ಕರೆದುಕೊಂಡು ಹೋಗಿ, ಕಣ್ಣುಕಟ್ಟಿ ನಮ್ಮ ಕುಲಕ್ಕೆ ಇವಳು ದೂರವಾದಳೆಂದು ಬೋಡಿಮ ಬಿಟ್ಟುಬಿಟ್ಟರು ನಾಯಿ ಮುಟ್ಟಿದ ಮಡಿಕೆಯಂತೆ ಬಂಧು ಸ್ಪರ್ಶವಿಲ್ಲದವಳಾಗಿ ಆ ಗ್ರಾಮದಲ್ಲಿ ತಿರುಗುಡುತ್ತಿರಲು ಧನವಂತನಾದ ಒಬ್ಬಾನೊಬ್ಬ ಶೂದ್ರನು ಗಾತ್ರವಾದ ಜನಘಗಳುಳ್ಳಂಥಾ ಉನ್ನತವಾದ ಸ್ತನಂಗಳುಳ್ಳಂಥಾ ಆ ಸೌಮಿನಿಯನ್ನು ಕಂಡು, ಒಡಂಬಡಿಕೆಯಿಂದ ತನ್ನ ಮನೆಗೆ ಕರೆದುಕೊಂಡು ಹೋಗಲು; ಆ ಸ್ತ್ರೀಯು ಅವನ ಹೆಂಡತಿಯಾಗಿ ಹಗಲು ಇರಳೂ ಆ ಶೂದ್ರನೊಡನೆ ಸಂಭೋಗವಂ ಮಾಡಿಕೊಂಡು ಅವನಮನೆಗೆ ತಾನೇ ಒಡತಿಯಾಗಿ ಇದ್ದು ಪ್ರತಿದಿನವೂ ಮದ್ಯ ಮಾಂಸವನ್ನೇ ಆಹಾರವಾಗಿ ಮಾಡಿಕೊಳ್ಳುತ್ತಾ ಅವನಿಂದ ಬಹುಮಂದಿ ಮಕ್ಕಳನ್ನು ಪಡೆದಳು.

ಹೀಗಿದ್ದ ಆ ಸೌಮಿನಿ ಒಂದಾನೊಂದು ಸಮಯದಲ್ಲಿ ತನ್ನ ಗಂಡನಾದ ಆ ಶೂದ್ರನು ಗ್ರಾಮಾಂತರಕ್ಕೆ ಹೋಗಿದ್ದಾಗ; ಮದ್ಯಪಾನ ಮಾಡಿ ಜ್ಞಾನಗೆಟ್ಟು ಮಾಂಸಾಹಾರವನ್ನು ಬಯಸಿ ಹೊರಗಡೆಯಲ್ಲಿ ಹಸುವಿನ ಕರುಗಳು ಕುರಿಗಳು ಇರಲಾಗಿ ಆಯುಧವಂ ತೆಗೆದುಕೊಂಡು ಕಾರಗತ್ತಲೆಯಲ್ಲಿ ಅಜ್ಞಾನಮದದಿಂದ ವಿಚಾರಿಸದೆ ಆಡುಯೆಂದೂಹಿಸಿ, ಹಸುವಿನ ಕರುವಂ ಕೊರಳು ಕೊಯಿದು ಅದಂ ಮನೆಗೆ ತಂದು ದೀಪಿಗೆಯ ಬೆಳಕಿನಲ್ಲಿ ನೋಡಿ, ಹಸುವಿನ ಕರುವೆಂದು ಅರಿತು ಭಯಪಟ್ಟು ಒಂದು ಕ್ಷಣ ಧ್ಯಾನಮಾಡಿ, ಪೂರ್ವಜನ್ಮದಲ್ಲಿ ಮಾಡಿದ ಪುಣ್ಯವಶದಿಂದ ಶಿವಶಿವಾ ! ಎಂದು ನುಡಿದು ಬಳಿಕ ಮಾಂಸಾಹಾರದ ಮೇಲೆ ಅಪೇಕ್ಷೆ ಹುಟ್ಟಿ ಅದನ್ನೆ ಕೊಯಿದು ಆಹಾರ ಮಾಡಿಕೊಂಡು

ಮಿಕ್ಕದ್ದನ್ನು ತಂದು ಬೀದಿಗೆ ಹಾಕಿ ಶಿವಶಿವಾ ! ಹುಲಿಯು ಬಂದು ದನ ದ ಕೊಟ್ಟಿಗೆಯನ್ನು ಹೊಕ್ಕು ಹಸುವಿನ ಕರುವನ್ನು ಕೊರಳು ಮುರಿದು ಭಕ್ಷಿಸಿ ತೆಂದು ಕೂಗಲಾಗಿ, ಅವಳ ಧ್ವನಿಯಂ ಕೇಳಿ ನೆರೆಯಲ್ಲಿದ್ದ ಶೂದ್ರರೆಲ್ಲರು ಬಂದು ಕರುವನ್ನು ನೋಡಿ, ಹುಲಿ ಕೊಂದದ್ದೆಂದು ನಿಶ್ಚಯಿಸಿ ದುಃಖ ಪಟ್ಟು ಕ್ಷಣಮಾತ್ರ ನೋಡುತ್ತಿದ್ದು ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು. ಬೆಳಗಾದಮೇಲೆ ಅವಳ ಗಂಡನು ಬಂದು ತನ್ನ ಮನೆಯಲ್ಲಿ ರಾತ್ರಿ ನಡೆದ ವೃತ್ತಾಂತವನ್ನು ಕೇಳಿ ನಿಜವೆಂದು ತಿಳಿದು ಚಿಂತೆಪಟ್ಟವನಾದನು. ಈ ಪ್ರಕಾರ ಆ ಸೌಮಿನಿ ಕೆಲವುಕಾಲ ಆ ಶೂದ್ರನೊಡನೆ ಸಂಸಾರ ಮಾಡು ತ್ತಿದ್ದು ತನ್ನ ಪತಿಯಿಂದ ಮೃತಳಾಗಲು, ಯಮಕಿಂಕರರು ಅವಳನ್ನು ಯಮ ಲೋಕಕ್ಕೆ ಕರೆದುಕೊಂಡು ಹೋಗಲಾಗಿ ಯಮನು ಅವಳ ದುರ್ಮಾರ್ಗವನ್ನು ತಿಳಿದು ಶಿವಸ್ಮರಣೆಯ ಮಹಿಮೆಯನ್ನು ವಿಚಾರಿಸಿದವನಾಗಿ ಇವಳು ಚಂಡಾಲ ಸ್ತ್ರೀಯಾಗಿ ಹುಟ್ಟಿ ಕೆಲವು ಕಾಲದಮೇಲೆ ಶಿವಲೋಕಕ್ಕೆ ಹೋಗುವಳು. ನರಕಕ್ಕೆ ಯೋಗ್ಯಳಲ್ಲವೆಂದು ನಿರ್ಧಾರಣೆಮಾಡಿ ಅವಳು ಚಂಡಾಲ ಜಾತಿಯಲ್ಲಿ ಹುಟ್ಟುವ ಹಾಗೆ ಕಟ್ಟುಮಾಡಿದನು.

ಬಳಿಕ ಅವಳು ಅದೇ ಪ್ರಕಾರ ಚಂಡಾಲ ಜಾತಿಯಲ್ಲಿ ಹುಟ್ಟುಕುರುಡಿ ಯಾಗಿ ವಸತಿಯ ಮಧ್ಯದಲ್ಲಿ ಕಪ್ಪಾದ ಶರೀರವುಳ್ಳವಳಾಗಿ ಜನಿಸಿದಳು. ಅವಳ ತಂದೆ ತಾಯಿಗಳು ಕುರೂಪಿಯಾದ ಅವಳನ್ನು ಹೊರಡಿಸಲಾರದೆ ತಾವು ತಿಂದು ಮಿಕ್ಕ ಅನ್ನ ನಾಯಿ ತಿಂದು ಮಿಕ್ಕಂಥಾ ಅನ್ನಗಳಿಂದಲೂ ಕುಡಿಯುವ ದಕ್ಕೆ ಯೋಗ್ಯವಲ್ಲದಂಥಾ ಉದಕದಿಂದಲೂ ಪೋಷಿಸುತ್ತಿದ್ದರು. ಹುಟ್ಟು ಕುರುಡಿಯಾಗಿ ಚಿಕ್ಕಂದಿನಲ್ಲಿಯೇ ಕುಷ್ಠವ್ಯಾಧಿಯಿಂದ ಪೀಡಿತೆಯಾದಂಥಾ ಅವ ಳನ್ನು ಆ ಚಂಡಾಲರಾದರೂ ಮದುವೆಯಾಗದೆ ಹೋದರು. ಅವಳ ತಂದೆ ತಾಯಿಗಳು ಕೆಲವು ಕಾಲದಮೇಲೆ ಮೃತರಾಗಲು, ನೆಂಟರು ಒಡಹುಟ್ಟಿದ ವರು ಆಕ್ಷಣದಲ್ಲಿ ಮನೆಯಲ್ಲಿರಿಸಬಾರದೆಂದು ಹೊರಡಿಸಲಾಗಿ ಅವಳು ಅನ್ನ ವಿಲ್ಲದೆ ಕಷ್ಟಪಡುತ್ತಾ ಕಣ್ಣುಕಾಣದೆ ಕೈಯಲ್ಲಿ ಒಂದು ಕೋಲನ್ನು ಹಿಡಿದು ಕೊಂಡು ತಿಪ್ಪೆಗೆ ಹಾಕಿದ್ದ ಒಂದು ಒಡಕು ಮಡಿಕೆಯನ್ನು ತೆಗೆದುಕೊಂಡು ದಿನ ದಿನದಲ್ಲಿಯು ಮನೆ ಮನೆಯ ಬಾಗಿಲಿಗೆ ಹೋಗಿ ಅವರು ಇಕ್ಕಿದ ಎಂಜಲಿನಿಂದ ಹೊಟ್ಟೆ ಹೊರೆದುಕೊಂಡು ಅತ್ಯಂತ ಕಷ್ಟದಿಂದ ಕಾಲಮಂ ಕಳೆದು ಮುಪ್ಪಿನಿಂದ ಕುಗ್ಗಿದವಳಾಗಿ ಮಿತಿಯಿಲ್ಲದ ದುಃಖವನ್ನೈದುತ್ತಿರ್ದಳು.

ಅನಂತರ ಒಂಬತ್ತನೊಂದು ದಿವಸ ಶಿವರಾತ್ರಿ ಜಾತ್ರೆಗೆ ಗೋಕರ್ಣಕ್ಷೇತ್ರ ವನ್ನು ಕುರಿತು ನಾನಾದೇಶಗಳಿಂದ ಅಗ್ನಿಹೋತ್ರಿಗಳಾದ ಬ್ರಾಹ್ಮಣರಿಂದಲೂ

ಅಂತಃಪುರದ ಸ್ತ್ರೀಯರಿಂದ ಅನೇಕ ರಥಂಗಳಿಂದಲೂ, ಆನೆಗಳಿಂದಲೂ, ಕುದುರೆಗಳಿಂದಲೂ, ಕಾಲ್ಬಲಗಳಿಂದಲೂ, ಊಳಿಗದವರಿಂದರೂ, ಆಂದೋಳಿಕ, ಪಲ್ಲಕ್ಕಿ, ಸುಪ್ಪತ್ತಿಗೆ, ಬೀಸಣಿಗೆ, ಸುರಟಿ, ಚಾಮರ ಮೊದಲಾದ ರಾಜಚಿಹ್ನೆಗಳಿಂದ ಮಂಡಿತರಾದ ರಾಯರುಗಳು, ಬೇಹಾರಿಗಳು, ವೈಶ್ಯರು, ಶೂದ್ರರು ಮೊದಲಾದ ಸಮಸ್ತ ಜಾತಿಯವರು ಹೋಗುತ್ತಾ, ಕೆಲವರು ಸಂತೋಷದಿಂದ ಓಡಾಡುತ್ತಿಹರು, ಅಲ್ಲಲ್ಲಿ ನಿಂತು ಭೋಜನವನ್ನು ಮಾಡುತ್ತಿಹರು, ಕೆಲವರು ಕೆರೆ ಕಟ್ಟೆ ಕಾಲ್ವೆಗಳಲ್ಲಿಯು ಅರವಟ್ಟಿಗೆಗಳಲ್ಲಿಯು ಉದಕವನ್ನು ಕುಡಿಯುತ್ತಿಹರು, ಕೆಲವರು ಅಟ್ಟಹಾಸವನ್ನು ಮಾಡುತ್ತಿಹರು, ಕೆಲವರು ಗಾನವನ್ನು ಮಾಡುತ್ತಿಹರು, ಕೆಲವರು ವಿಚಿತ್ರವಾದ ಲೋಕವಾರ್ತೆಯನ್ನು ಹೇಳುತ್ತಿಹರು. ಈ ಪ್ರಕಾರ ಜನಗಳು ಶಿವರಾತ್ರಿಗಾಗಿ ಗೋಕರ್ಣಕ್ಕೆ ಹೋಗುತ್ತಿರಲಾಗಿ, ಆಕಾಶದಲ್ಲಿ ಸಮಸ್ತ ದೇವತೆಗಳು ಸಂಭ್ರಮದಿಂದ ವಿಮಾನಾರೂಢರಾಗಿ ಗೋಕರ್ಣಕ್ಕೆ ಬರುತ್ತಿದ್ದರು. ಆಗ ಚಂಡಾಲ ಸ್ತ್ರೀಯು ಗೋಕರ್ಣಕ್ಷೇತ್ರಕ್ಕೆ ಹೋಗುತ್ತಿರುವ ಆ ಜನರನ್ನು ಕಂಡು ಏನಾದರು ಬೇಡಿಕೊಳ್ಳಬೇಕೆಂದು ಒಬ್ಬಳ ಕೈ ಹಿಡಿದುಕೊಂಡು ಪೂರ್ವಜನ್ಮದಲ್ಲಿ ಮಾಡಿದ ಶಿವಸ್ಮರಣೆ ಮಹಿಮೆಯಿಂದ ಗೋಕರ್ಣಕ್ಷೇತ್ರವನ್ನೈದಿದವಳಾಗಿ, ಮಾರ್ಗದಲ್ಲಿ ಕುಳಿತು ಕೈ ಬೊಗಸೆಯನ್ನು ನೀಡಿಕೊಂಡು ದಾರಿಕಾರರನ್ನು ಕೂಗಿ ಹೀಗೆಂದು ಬೇಡಿಕೊಂಡಳು ಎಲೈ ಪುಣ್ಯಾತ್ಮರುಗಳಿರಾ ! ಪೂರ್ವಜನ್ಮದಲ್ಲಿ ಮಾಡಿದ ಬಹಳವಾದ ಪಾಪಂಗಳಿಂದ ಅನ್ನವಸ್ತ್ರಂಗಳಿಲ್ಲದೆ ಕಷ್ಟಪಡುತ್ತಾ ಭೂಮಿಯಲ್ಲಿ ಬಿದ್ದು ಧೂಳಿನಿಂದ ವ್ಯಾಪ್ತವಾದ ದೇಹವುಳ್ಳಂಥಾ ನನ್ನಲ್ಲಿ ಕೃಪೆಮಾಡಿ, ಎಲೈ ಮಹಾತ್ಮರುಗಳಿರಾ ! ಬಹುದಿನಗಳಿಂದ ಆಹಾರವಿಲ್ಲದಕಾರಣ ಜ್ವಲಿಸುತ್ತಿರುವ ಜಠರಾಗ್ನಿಯಿಂದ ದಹಿಸಲ್ಪಟ್ಟ ಶರೀರವುಳ್ಳಂಥಾ ನನ್ನಲ್ಲಿ ಕೃಪೆ ಮಾಡಿ ಎಂದು ಬೇಡಿಕೊಳ್ಳುತ್ತಿರುವ ಈ ಚಂಡಾಲ ಸ್ತ್ರೀಯ ಕೈಬೊಗಸೆಯಲ್ಲಿ ಒಬ್ಬಾನೊಬ್ಬ ಮಾರ್ಗಸ್ಥನು ಒಂದು ಬಿಲ್ವಪತ್ರೆಯ ಗೊಂಚಲನ್ನು ಹಾಕಲು, ಅವಳು ಆ ಬಿಲ್ವಪತ್ರೆಯನ್ನು ತಡವರಿಸಿ ನೋಡಿ ಇದು ತಿನ್ನುವದಕ್ಕೆ ಯೋಗ್ಯವಾದ ವಸ್ತುವಲ್ಲವೆಂದು ದೂರದಲ್ಲಿ ಬೀಸಿ ಹಾಕಲು, ಆ ಬಿಲ್ವಪತ್ರೆಯು ದೈವಯೋಗದಿಂದ ಸಮೀಪದಲ್ಲಿದ್ದ ಒಂದು ಶಿವಲಿಂಗದ ಶಿರಸ್ಸಿನಮೇಲೆ ಬಿದ್ದಿತು, ಹೀಗೆ ಶಿವರಾತ್ರಿಯ ದಿನದಲ್ಲಿ ದಾರಿಕಾರರನ್ನು ಬೇಡಿಕೊಂಡರೂ ಅವಳಿಗೆ ಆಹಾರ ದೊರಕದೆ ಹೋದಕಾರಣ ಉಪವಾಸದಿಂದ ನಿದ್ರೆಯಿಲ್ಲದೆ ಭದ್ರಕಾಳೀ ದೇವಸ್ಥಾನದ ಹಿಂದುಗಡೆ ಸಮುದ್ರದ ಸಮೀಪದಲ್ಲಿ ಆ ರಾತ್ರಿಯನ್ನು ಕಳೆದು ಬೆಳಗಾದಮೇಲೆ ಆಶೆಯನ್ನು ತೊರೆದು ಬಹಳವಾದ ದುಃಖದಿಂದ ಪೂರ್ವದಲ್ಲಿ ತಾನಿದ್ದ ಪ್ರದೇಶಕ್ಕೆ ಬಂದವಳಾದಳು.

ಅನೇಕ ದಿವಸದಿಂದ ಅನ್ನಾಹಾರವಿಲ್ಲದಿದ್ದಕಾರಣ ತಲೆತಿರಿಗಿ ಹೆಜ್ಜೆ ಹೆಜ್ಜೆಗೆ ಬೀಳುತ್ತ ಬಹಳ ರೋಗಂಗಳಿಂದಲು ಬಿಸಿಲಿನಿಂದಲು ಕಂಗೆಟ್ಟವಳಾಗಿ, ಕೋಲನ್ನೂರಿಕೊಂಡು ಭದ್ರಕಾಳೀ ದೇವಸ್ಥಾನದ ಬಳಿಯಿಂದ ಇಲ್ಲಿಯವರೆಗೆ ಬಂದು ಇಲ್ಲಿ ಬಿದ್ದು ಮೃತಿಯನ್ನೈದಿದಳು. ಆಗ ಕೃಪಾಸಮುದ್ರನಾದ ಜಗತ್ತಿಗೆ ಒಡೆಯನಾದ ಪರಮೇಶ್ವರನು ಇವಳನ್ನು ತನ್ನ ಬಳಿಗೆ ಕರೆದುಕೊಂಡು ಬನ್ನೀ ಎಂದು ವಿಮಾನಸಹಿತರಾಗಿ ನಮ್ಮನ್ನು ಕಳುಹಿಸಲು, ನಾವು ಈ ಸ್ತ್ರೀಯನ್ನು ಕರೆದುಕೊಂಡು ಹೋಗಬೇಕೆಂದು ಬಂದೆವು ಇದೀಗ ಈ ಚಂಡಾಲ ಸ್ತ್ರೀಯ ವೃತ್ತಾಂತ ಎಂದು ಹೇಳಿದರು.

ಎಲೈ ಗೌತಮ ಮಹಾಮುನಿಯೇ! ಈ ಕಾರಣದಿಂದ ಪರಮೇಶ್ವರನು ದೀನರಲ್ಲಿ ದಯೆಯುಳ್ಳವನೆಂದು ತಿಳಿಯಬೇಕು. ಕರ್ಮಗತಿಯನ್ನು ನೋಡು, ಚಂಡಾಲ ಜಾತಿಯಲ್ಲಿ ಹುಟ್ಟಿದ ಸ್ತ್ರೀ ಮೊದಲಾದವರು ಎಂದಿಗೂ ಕೇಡಿಲ್ಲದೆ ಇರುವ ಶಿವಪದವಿಯನ್ನೈದುತ್ತಿದ್ದಾರೆ. ಇವಳು ಪೂರ್ವಜನ್ಮದಲ್ಲಿ ಒಬ್ಬರಿಗೂ ಅನ್ನೋದಕಂಗಳನ್ನು ಕೊಟ್ಟವಳಲ್ಲ. ಆದರಿಂದ ಈ ಜನ್ಮದಲ್ಲಿ ಅತ್ಯಂತವಾದ ಹಸಿವು ಬಾಯಾರಿಕೆಯಿಂದ ವ್ಯಥೆಪಟ್ಟಳು. ಇವಳು ಪೂರ್ವಜನ್ಮದಲ್ಲಿ ಮದ್ಯಪಾನಮಾಡಿ ಸ್ಮರಣೆಯಿಲ್ಲದೇ ಇದ್ದವಳು. ಇವಳು ಹಸುವಿನ ಕರುವನ್ನು ಕೊಂದಳಾದಕಾರಣ ಈ ಜನ್ಮದಲ್ಲಿ ಹುಟ್ಟು ಕುರುಡಿಯಾಗಿ ಜನಿಸಿದಳು. ಇವಳು ಪೂರ್ವಜನ್ಮದಲ್ಲಿ ಹಸುವನ್ನು ಕೊಂದು ಭಕ್ಷಿಸಿದುದರಿಂದ ಚಂಡಾಲ ಜಾತಿಯಲ್ಲಿ ಹುಟ್ಟಿದಳು. ಇವಳು ಪೂರ್ವಜನ್ಮದಲ್ಲಿ ವಂಶಶ್ರೇಷ್ಠರಲ್ಲಿ ಹುಟ್ಟಿ ಜಾತಿಮಾರ್ಗದಿಂದ ನಡೆಯದಿದ್ದಕಾರಣ ಈ ಜನ್ಮದಲ್ಲಿ ಲಕ್ಷಣ ಕೆಟ್ಟು ಕುರುಡಿಯೆಂದು ಯಾರೂ ಮದುವೆಯಾಗದೆ ಹೋದರು ಇವಳು ವಿಧವೆಯಾಗಿಯೂ ಕಾಮೋದ್ರೇಕದಿಂದ ವಿಟರನ್ನು ಆಲಿಂಗನಮಾಡಿಕೊಂಡವಳಾದ ಕಾರಣ ಕುಷ್ಠವ್ರಣಗಳುಳ್ಳ ಶರೀರ ಉಳ್ಳವಳಾದಳು. ಇವಳು ಪೂರ್ವಜನ್ಮದಲ್ಲಿ ಹಗಲಿರಳು ಮನ್ಮಥೋದ್ರೇಕದಿಂದ ಶೂದ್ರನೊಡನೆ ಕ್ರೀಡಿಸುತ್ತಿದ್ದಕಾರಣ ಕೀವು ರಕ್ತಮಯವಾದ ಹುಳುಗಳಿಂದ ಮುಸುಕಲ್ಪಟ್ಟವಳಾದಳು, ಇವಳು ಪೂರ್ವಜನ್ಮದಲ್ಲಿ ಅಜ್ಞಾನಿಯಾಗಿ ಮದ್ಯಪಾನವನ್ನು ಮಾಡಿದುದರಿಂದ ಈ ಜನ್ಮದಲ್ಲಿ ಕ್ಷಯವ್ಯಾಧಿ ಮೊದಲಾದ ರೋಗಂಗಳಿಂದ ದುಃಖಪಟ್ಟಳು. ಇವಳು ಪೂರ್ವಜನ್ಮದಲ್ಲಿ ವ್ರತಂಗಳು ಕೆರೆ ಕಟ್ಟೆ ಜಪ ಶಿವಾರ್ಚನೆ ಸ್ನಾನದಾನ ತೀರ್ಥಯಾತ್ರೆ ಬ್ರಾಹ್ಮಣ ನಮಸ್ಕಾರ ಮೊದಲಾದ ಧರ್ಮಗಳಲ್ಲಿ ಒಂದನ್ನೂ ಮಾಡಲಿಲ್ಲವಾದುದರಿಂದ, ಈ ಜನ್ಮದಲ್ಲಿ ಯಾವ ಸುಖವೂ ಇಲ್ಲದೆ ಕಷ್ಟಪಟ್ಟಳು.

ಕೇಳೈ ಗೌತಮ ಮಹಾಮುನಿಯೇ! ಜಗತ್ತಿನಲ್ಲಿ ಯಾರು ಪುಣ್ಯಾತ್ಮರು ಯಾರು ಪಾಪಾತ್ಮರು ಎಂದು ವಿಚಾರಿಸಿ ನೋಡಲಾಗಿ, ಅವರವರ ಚಿಹ್ನೆಗಳಿಂ

ದಲೇ ತಿಳಿಯಬರುವುದು. ಹೇಗೆಂದರೆ—ಯಾರು ಬಹಳವಾದ ಭೋಗ ಭಾಗ್ಯಂಗಳುಳ್ಳವರೋ ದೇವ ಬ್ರಾಹ್ಮಣರಲ್ಲಿ ಭಕ್ತಿಯನ್ನು ಮಾಡುವರೋ ದೀನರಲ್ಲಿಯೂ ಅನಾಥರಲ್ಲಿಯೂ ದಯಾವಂತರೋ ಅವರು ಪೂರ್ವಜನ್ಮದಲ್ಲಿ ಅತ್ಯಂತ ತಪಸ್ಸು ಮಾಡಿದವರು. ಯಾರು ನಾನಾವಿಧ ರೋಗಂಗಳಿಂದ ಪೀಡಿತರಾದವರೋ ಲಕ್ಷಣರಹಿತರೋ ಅಂಗಹೀನರೋ ಲಜ್ಜೆಯಿಲ್ಲದವರೋ ದ್ರವ್ಯವಿದ್ದರೂ ಅನ್ನಪಾನ ವಸ್ತ್ರಭೂಷಣಂಗಳನ್ನೂ ಅನುಭವಿಸದೆ ಇರುವರೋ, ಬ್ರಾಹ್ಮಣರಲ್ಲಿಯೂ ದೇವತೆಗಳಲ್ಲಿಯೂ ದ್ವೇಷಮಾಡುವರೋ, ತಮತಮಗೆ ಯೋಗ್ಯವಾದ ವಿದ್ಯೆಯಿಲ್ಲದವರೋ, ಆಶನಘಾತುಕರೋ, ನಿಂದಿತರೋ, ಚಾಕರಿಯನ್ನು ಮಾಡುವರೋ- ಇವರೆಲ್ಲರು ಪೂರ್ವಜನ್ಮದಲ್ಲಿ ದುಷ್ಕರ್ಮವನ್ನು ಮಾಡಿದವರು. ಇಂಥಾ ಪಾಪಾತ್ಮರು ಇರುವದನ್ನು ತಿಳಿದು ಬುದ್ಧಿವಂತನು ಪುಣ್ಯವನ್ನೇ ಮಾಡಬೇಕಲ್ಲದೆ, ಪಾಪಕರ್ಮವನ್ನು ಎಂದಿಗೂ ಮಾಡಬಾರದು. ಕಿಂಚಿತ್ತಾದರು ಪಾಪವನ್ನು ಮಾಡಿದವನಾದರೆ ಅವನೇ ಆತ್ಮಘಾತಕನು. ಪ್ರಾಣಿಗಳಿಗೆ ಮನುಷ್ಯದೇಹವೇ ಧರ್ಮಾರ್ಥಧರ್ಮಂಗಳೆರಡಕ್ಕೂ ಸಾಧನವಾದದ್ದು. ಆದುದರಿಂದ ಮನುಷ್ಯನಾದವನು ದುಃಖವನ್ನು ಬಯಸುವನಾದರೆ ಪಾಪವನ್ನೇ ಮಾಡಬೇಕು. ಸುಖವನ್ನು ಬಯಸುವಂಥಾವನಾದರೆ ಪುಣ್ಯವನ್ನು ಮಾಡಬೇಕು. ದುರ್ಲಭಮಾದ ಈ ಮನುಷ್ಯದೇಹವನ್ನೇ ಪಡೆದು ತನಗೆ ಹಿತವನ್ನೇಬಯಸಿ ಧರ್ಮವನ್ನು ಮಾಡುವೆನೆಂಬ ಪುರುಷನು ಯಾವನಾದರು ಒಂದು ದೇವತೆಯನ್ನು ಭಜಿಸಬೇಕು. ಆ ದೇವತೆಗಳಲ್ಲಿ ಶುಭಪ್ರದಮಾದ ಸಕಲ ಪಾಪಂಗಳಂ ಪರಿಹಾರವಂ ಮಾಡುವ ಪರಮೇಶ್ವರನನ್ನು ಭಜಿಸಬೇಕು. ಕೇಳೈ ಗೌತಮಮಹಾಮುನಿಯೇ! ಇವಳು ಪೂರ್ವಜನ್ಮದಲ್ಲಿ ಬ್ರಾಹ್ಮಣ ಕುಲದಲ್ಲಿ ಹುಟ್ಟಿ, ಶೂದ್ರನಿಗೆ ಹೆಂಡತಿಯಾಗಿ ಸಮಸ್ತ ಪಾಪಂಗಳನ್ನು ಮಾಡಿ ಯಮಲೋಕಕ್ಕೆ ಹೋದಾಗ, ಯಮನ ಸಭೆಯಲ್ಲಿದ್ದವರಿಗೆ ಮಹತ್ತಾದ ವಿವಾದ ಉಂಟಾಯಿತು. ಹೇಗೆಂದರೆ,—

ಇವಳು ಬ್ರಾಹ್ಮಣ ಸ್ತ್ರೀಯಾಗಿಯು ತನ್ನ ಕುಲಾಚಾರಮಂ ಬಿಟ್ಟು ವ್ಯಭಿಚಾರಿಯಾಗಿ ಇದ್ದವಳಾದಕಾರಣ ನಮ್ಮಿಂದ ಇಲ್ಲಿಗೆ ತರಲ್ಪಟ್ಟಳು. ಇವಳು ನರಕಕ್ಕೆ ಯೋಗ್ಯಳೋ ಅಲ್ಲವೋ ನಮಗೆ ತಿಳಿಯದು. ಇವಳು ಬಾಲ್ಯದಲ್ಲಿ ಲೇಶವಾದರೂ ಪುಣ್ಯವನ್ನುಮಾಡಿ ಇದ್ದಾಳೋ ಇಲ್ಲವೋ ವಿಚಾರಿಸದೆ ದಂಡನೆಯನ್ನು ಮಾಡಲಾಗದು. ಅನೇಕ ಜನ್ಮಂಗಳಲ್ಲಿ ಮಾಡಿದ ಪುಣ್ಯಪ್ರಭಾವದಿಂದಲ್ಲವೆ ಬ್ರಾಹ್ಮಣ ಜನ್ಮವು ಬರುವುದು. ಅಂಥಾ ಬ್ರಾಹ್ಮಣ ಕುಲದಲ್ಲಿ ಜನಿಸಿದವಳಾದಕಾರಣ ಪೂರ್ವಜನ್ಮದಲ್ಲಿ ಉತ್ಕೃಷ್ಟವಾದ ಪುಣ್ಯವನ್ನೇಮಾಡಿ ಇರಬೇಕು. ಈ ಜನ್ಮದಲ್ಲಿ ಪರಿಹರಿಸುವದಕ್ಕೆ ಶಕ್ಯವಲ್ಲದ ಪಾಪವನ್ನು ಮಾಡಿದವಳಾದ ಕಾರಣ ನರಕಕ್ಕೆ ಯೋಗ್ಯಳೆ ಹೌದು ಆದರೆ ಈ ಜನ್ಮದಲ್ಲಿ ಅಜ್ಞಾನದಿಂದ ಹಸು

ಏನ ಕರುವನ್ನು ಕೊಂದು ಅನಂತರದಲ್ಲಿ ವಿಚಾರಿಸಿ ನೋಡಿ ಭಯಪಟ್ಟವಳಾಗಿ ಜನ್ಮಾಂತರ ಸುಕೃತವಾಸನೆಯಿಂದ ಶಿವಶಿವಾ ! ಎಂದು ಶಿವಧ್ಯಾನಮಾಡಿದಳು. ಸಾಧಾರಣವಾದ ಸಕಲವಿದ್ಯೆಗಳಲ್ಲಿಯು ವೇದವೇ ದೊಡ್ಡದು ಅದರಲ್ಲಿ ರುದ್ರೈಕಾದಶಿಯೇ ಮುಖ್ಯವು. ಆ ರುದ್ರೈಕಾದಶಿಯಲ್ಲಿ ಶಿವಪಂಚಾಕ್ಷರಿಯೇ ಮುಖ್ಯವು, ಆ ಶಿವಪಂಚಾಕ್ಷರಿಯಲ್ಲಿಯು ಶಿವಯೆಂಬಕ್ಷರಗಳೇ ಸರ್ವೋತ್ಕೃಷ್ಟ. ಪಾಪಹಾರಕವಾಗಿ ಮಂಗಳಪ್ರದವಾಗಿ ಉತ್ತಮವಾದುದು. ಇಂಥಾ ಶಿವನಾಮವನ್ನು ಭಕ್ತಿಯಿಂದ ಒಂದು ವೇಳೆಯಾದರೂ ಆವನೊಬ್ಬನು ನುಡಿವನೋ ಅವನಿಗೆ ಕೈವಲ್ಯವಹುದು. ಅದರಿಂದ ನಾವು ಇವಳಿಗೆ ನರಕವಿಲ್ಲವೆಂದು ನರಕಯಾತನೆಗಳಲ್ಲಿ ವಿಚಾರಣೆ ಮಾಡಕೂಡದ್ದಾಗಿದೆ.

ಮತ್ತೇನೆಂದರೆ, ಈ ಜನ್ಮದಲ್ಲಿ ಅಧಿಕವಾದ ಪಾಪವನ್ನು ಮಾಡಿದವಳಾದ ಕಾರಣ ಅದರ ಫಲವನ್ನು ಚಂಡಾಲ ಜಾತಿಯಲ್ಲಿ ಹುಟ್ಟಿ ಅನುಭವಿಸಲಿ, ಇದಕ್ಕಿಂತಲು ನರಕವೇನಿದ್ದೀತು. ಈ ಲೋಕದಲ್ಲಿ ನಾನಾವಿಧಂಗಳಾದ ದುಃಖಗಳಿಂದ ಸಂಕಟಪಡುವದು, ನೀಚಕುಲದಲ್ಲಿ ಹುಟ್ಟುವದು, ದಾರಿದ್ರ್ಯ ಮಹಾವ್ಯಾದಿ ಮೂಢತೆಗಳು ಒಂದೊಂದೇ ಅನೇಕ ನರಕವೆನಿಸಿಕೊಂಬವು, ಇವೆಲ್ಲಾ ಒಂದೇ ಸ್ಥಳದಲ್ಲಿ ಇದ್ದರೆ ಹೇಳುವುದೇನು. ಇವಳು ಪರವಶಳಾಗಿದ್ದವಳಾದರೂ ಜನ್ಮಾಂತರದ ಪುಣ್ಯದಿಂದ ಶಿವಸ್ಮರಣೆಯಂ ಮಾಡಿದವಳಾದಕಾರಣ ಮುಂದೆ ಚಂಡಾಲ ಜನ್ಮದಲ್ಲಿಯು ಅತ್ಯಂತ ಉತ್ಕೃಷ್ಟವಾದ ಪುಣ್ಯವಂಮಾಡಿ, ಆ ಪುಣ್ಯಪ್ರಭಾವದಿಂದ ಸಕಲ ಕ್ಲೇಶಂಗಳನ್ನು ತೊರೆದು ಕೈಲಾಸವನ್ನೈದಲಿ, ಯಾವ ಪಾಪಿಗಳಾದರು ಶಿವಸ್ಮರಣೆಯನ್ನು ಮಾಡುತ್ತಾರೋ ಅಂಥವರನ್ನು ಶಿಕ್ಷಿಸುವದಕ್ಕೆ ಯಾರೂ ಸಮರ್ಥರಲ್ಲ. ಆ ಶಿವನು ತಾನೇ ವಿಚಾರಿಸಿ ಯುಕ್ತವಾದ ಫಲವನ್ನು ಕೊಟ್ಟಾನೆಂದು ಈ ಪ್ರಕಾರ ಯಮನ ಸಭೆಯಲ್ಲಿ ಯಮ ಚಿತ್ರಗುಪ್ತ ಮೊದಲಾದವರಿಂದ ನಿಯಮಿಸಲ್ಪಟ್ಟವಳಾಗಿ, ಭೂಲೋಕದೊಳಗೆ ಚಂಡಾಲ ಯೋನಿಯಲ್ಲಿ ಹುಟ್ಟಿದಳು. ಪೂರ್ವಜನ್ಮದಲ್ಲಿ ಪ್ರಮಾದದಿಂದಲಾದರು ಶಿವನಾಮೋಚ್ಚಾರಣೆಯನ್ನು ಮಾಡಿದಂಥವಳಾದಕಾರಣ ಆ ಪುಣ್ಯ ವಿಶೇಷದಿಂದ ಈ ಚಂಡಾಲ ಜಾತಿಯಲ್ಲಿಯು ಇವಳಿಗೆ ಗೋಕರ್ಣಕ್ಷೇತ್ರದಲ್ಲಿ ಶಿವರಾತ್ರಿಯದಿನ ಉಪವಾಸ ಜಾಗರಣೆ ಬಿಲ್ವಪತ್ರೆಯಿಂದ ಶಿವಪೂಜೆಯು ಲಭ್ಯವಾದವು, ನೋಡೈ ಗೌತಮ ಮಹಾಮುನಿಯೇ, ಇಚ್ಛೆಯಿಲ್ಲದೆ ಮಾಡಿದ ಪುಣ್ಯ ಫಲವನ್ನು ನೀನು ನೋಡುತ್ತಿರುವಾಗಲೇ ಈಗ ಅನುಭವಿಸುತ್ತಿದ್ದಾಳೆಂದು ಶಿವದೂತರು ಎನಗೆ ಹೇಳಿದವರಾಗಿ ಆ ಚಂಡಾಲಸ್ತ್ರೀಯ ಶರೀರದೆಶೆಯಿಂದ ಜೀವಕಳೆಯನ್ನು ಕಡೆಗೆತೆಗೆದು ದಿವ್ಯ ತೇಜಸ್ಸಿನೊಡನೆ ಕೂಡಿ ಇರುವಂಥ ದಿವ್ಯ ದೇಹದಲ್ಲಿ ಕೂಡಿದ ಅವಳನ್ನು ದಿವ್ಯ ವಿಮಾನದಲ್ಲಿ ಕುಳ್ಳಿರಿಸಿಕೊಂಡರು.

ಅನಂತರ ಆ ಸ್ತ್ರೀಯು ವಿಮಾನವನ್ನು ಏರಿ ಮನೋಹರವಾದ ಸೌಂದರ್ಯದಿಂದಲು, ಯೌವನದಿಂದಲು, ದಿವ್ಯಾಭರಣದಿಂದಲು, ದಿವ್ಯವಸ್ತ್ರಂಗಳಿಂದಲು, ದಿವ್ಯಗಂಧದಿಂದಲು, ದಿವ್ಯಮಾಲ್ಯಗಳಿಂದಲು ಒಪ್ಪುತ್ತಿರುವಳಾಗಿ ರತ್ನಮಯವಾದ ಛತ್ರಚಾಮರಗಳಿಂದಲು, ನೃತ್ಯಗೀತವಾದ್ಯಂಗಳಿಂದಲು ಕೂಡಿ ಶಿವದೂತರು ಬಹಳವಾಗಿ ಪರಿವಾರಿತರಾಗಿರಲು, ಇವೆಲ್ಲವನ್ನು ಕಂಡು ತನ್ನ ಪೂರ್ವಜನ್ಮಂಗಳನ್ನು ಸ್ಮರಿಸಿಕೊಂಡು ಭಯಪಟ್ಟು ಸ್ವಪ್ನವನ್ನು ಕಂಡು ಎಚ್ಚರಿಕೆಯಾದ ಮರ್ಯಾದೆಯಲ್ಲಿ ಆಶ್ಚರ್ಯಯುಕ್ತಳಾಗಿ ತನ್ನೊಳು ಶಿವಶಿವಾ ! ನಾನ್ಯಾರು ? ಇಲ್ಲಿರ್ದ ಪುರುಷರ್ಯಾರು ? ಕಾಣಲ್ಪಡುವ ಈ ಲೋಕವಾವುದು ? ಭಯಂಕರವಾದ ಚಂಡಾಲ ಸ್ತ್ರೀ ಶರೀರ ಎಲ್ಲಿಗೆ ಹೋಯಿತು, ಈ ಪರ್ಯಂತರ ನಾನು ಅನೇಕ ಕೋಟಿ ಜನ್ಮಗಳಲ್ಲಿ ತಿರಿಗಿದ್ದು ಎಲ್ಲಾ ಈಗ ಮಾಯಾವಿಲಾಸದಿಂದ ಬಂದಹಾಗೆ ಕಾಣಲ್ಪಡುತ್ತಿದೆ. ಪರಮೇಶ್ವರನ ಪೂಜಾಮಹಿಮೆಯನ್ನು ಏನೆಂದು ಹೇಳಲಿ ? ನಾನು ಒಂದು ಬಿಲ್ವಪತ್ರೆಯಂ ಪರಮೇಶ್ವರನ ಮಸ್ತಕದಲ್ಲಿ ಹಾಕಿದ ಮಾತ್ರದಿಂದಲೇ ನನಗೆ ಶಿವಲೋಕವುಂಟಾಯಿತೆಂದು ಬೆರಗಾಗಿ ಶಿವಚರಣಾರವಿಂದಗಳನ್ನು ಧ್ಯಾನಿಸುತ್ತಿರಲು, ಆ ಶಿವದೂತರು ವಿಮಾನದಲ್ಲಿ ಆ ಸ್ತ್ರೀಯಂ ಕುಳ್ಳಿರಿಸಿಕೊಂಡು ಹೋದರು.

ಎಲೈ ಕಲ್ಮಷಪಾದರಾಯನೇ ! ಇದೀಗ ದಾರಿಯಲ್ಲಿ ನೋಡುತಿರ್ದಂಥ ಆಶ್ಚರ್ಯ ! ಶಿವಪೂಜೆ ಸಮಸ್ತ ಪಾಪಂಗಳನ್ನು ಪರಿಹರಿಸಿ ಸದ್ಗತಿಯುಂಟುಮಾಡುವುದೆಂದು ಗೌತಮ ಮಹಾಮುನಿಯು ಕಲ್ಮಷಪಾದರಾಯನಿಗೆ ಹೇಳಲು, ಆ ರಾಯನು ಆ ಗೌತಮ ಮಹಾಮುನಿಯನ್ನು ಕುರಿತು ಮತ್ತಿಂತೆಂದು ಬೆಸಗೊಂಡನು. ಎಲೈ ಷಡ್ಗುಣೈಶ್ವರ್ಯ ಸಂಪನ್ನನಾದ ಗೌತಮ ಮಹಾಮುನಿಯೇ! ಆ ಸ್ತ್ರೀಯು ಶಿವಲೋಕಕ್ಕೆ ಹೋದಳೆಂದು ಹೇಳಿದವರಾದಿರಿ, ನನ್ನಲ್ಲಿ ನಿಮಗೆ ದಯೆ ಇರ್ದೊಡೆ ಆ ಶಿವಲೋಕ ಲಕ್ಷಣಮಂ ನನಗೆ ನಿರೂಪಿಸಿರೆಂದು ಕೇಳಲಾಗಿ ಆ ಗೌತಮ ಮಹಾಮುನಿಯು ಆತನಿಗೆ ಶಿವಲೋಕ ಲಕ್ಷಣವನ್ನು ಹೇಳುತ್ತಿದ್ದನು. ಕೇಳೈ ರಾಯನೇ ! ಬ್ರಹ್ಮಾದಿ ದೇವತೆಗಳ ಲೋಕಗಳಲ್ಲಿ ಹೊಂದಲ ಶಕ್ಯವಾದ ಆನಂದವು ಯಾವ ಲೋಕದಲ್ಲಿ ಉಂಟೋ ಯಾವ ಸ್ಥಳದಲ್ಲಿ ಅಜ್ಞಾನ ಲೇಶವಿಲ್ಲದೆ ತಿಳುವಳಿಕೆ ಉಂಟಾಗಿರುವುದೋ ಯೋಗಿಗಳು ಸತ್ವರಜಸ್ತಮೋ ಗುಣಗಳ ವ್ಯಾಪಾರವನ್ನು ತೊರೆದು ಯಾವ ಲೋಕಕ್ಕೆ ಹೋಗಿ ತಿರಿಗಿ ತಾಯಿಗರ್ಭದಲ್ಲಿ ಹುಟ್ಟದಿಹರೋ, ಯಾವ ಲೋಕಕ್ಕೆ ಕಾಮ ಕ್ರೋಧ, ಲೋಭ, ಮೋಹ, ಮದ ಮಾತ್ಸರ್ಯಗಳೆಂಬ ಅರಿಷಡ್ವರ್ಗವು ಜನನ ಮರಣಂಗಳು ಇಲ್ಲವೋ ಸಮಸ್ತ ವೇದಗಳು ಸರ್ವೋತ್ಕೃಷ್ಟವಾದದ್ದೆಂದು ಯಾವ ಲೋಕವನ್ನು ಹೇಳುವರೋ, ಯಾವ ಲೋಕಕ್ಕಿಂತಲು ಉತ್ತಮವಾದ

ಮತ್ತೊಂದು ಲೋಕವಿಲ್ಲವೋ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧಿಗಳಿಂದ ಯೋಗಿಗಳು ಯಾವ ಲೋಕವನ್ನೈದುವರೋ, ಯಾವ ಲೋಕದಲ್ಲಿ ಸತ್ಯಜ್ಞಾನಾನಂದ ಸ್ವರೂಪವನ್ನು ತಾಳ್ದವಳಾದ ದೇವಿಯೊಡನೆ ಶಿವನು ಕ್ರೀಡಿಸುತ್ತಿಹನೋ, ಅನೇಕ ಜನ್ಮ ಸಹಸ್ರಗಳಲ್ಲಿ ಮಾಡಿದ ಪುಣ್ಯ ಸಹಸ್ರಗಳಿಂದ ಯಾವ ಲೋಕಕ್ಕೆ ಹೋಗಿ ಸ್ತ್ರೀಪುರುಷರು ಸುಖವನ್ನು ಪಡೆಯುತ್ತಾರೆಯೋ, ತೇಜೋಮಯವಾದ ಯಾವ ಲೋಕದಲ್ಲಿ ಇದು ಇರುಳು ಇದು ಹಗಲು ಎಂಬ ಭೇದವಿಲ್ಲದೆ ಇರುವದೊ ಅದೇ ಶಿವಲೋಕ. ಅಂಥಾ ಶಿವಲೋಕವು ಮಿಕ್ಕಾದವರಿಂದ ಪಡೆಯಲು ಶಕ್ಯವಲ್ಲ. ಯಾರು ಪರಮೇಶ್ವರನಲ್ಲಿ ಭಕ್ತಿಯುಳ್ಳವರಾಗಿ ಆತನ ಕಥಾಶ್ರವಣಗಳನ್ನು ಮಾಡುತ್ತಾರೋ ಆತನ ಗುಣ ಕೀರ್ತನೆಯಿಂದ ಸಂತೋಷಪಡುತ್ತಿಹರೋ, ಭೂತದಯಾಪರರೋ ಯಾರು ಶಾಂತಿಸಂಪನ್ನರೋ ಅವರು ಸಂಸಾರಚಕ್ರವನ್ನು ದಾಂಟಿದವರಾಗಿ ಅಜ್ಞಾನ ವನ್ನು ತೊರೆದು ಆ ಶಿವಲೋಕವನ್ನೈದಿ ನಿತ್ಯಸುಖವನ್ನನುಭವಿಸುವರು.

ಆದಕಾರಣ ಎಲೈ ಕಲ್ಮಷಪಾದರಾಯನೇ! ನೀನು ಶಿವನಿಗೆ ಆವಾಸ ಮಾದ ಗೋಕರ್ಣಕ್ಷೇತ್ರಕ್ಕೆ ಹೋಗಿ ಅಲ್ಲಿ ಸಮಸ್ತ ತೀರ್ಥಗಳಲ್ಲಿ ಸ್ನಾನವನ್ನು ಮಾಡಿ ಶಿವರಾತ್ರಿಯಲ್ಲಿ ಉಪವಾಸವನ್ನು ಮಾಡಿ ಬಿಲ್ವಪತ್ರೆಯಿಂದ ಮಹಾ ಬಲೇಶ್ವರನನ್ನು ಪೂಜಿಸಿ, ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿ ಬ್ರಹ್ಮಹತ್ಯಾದಿ ಮಹಾಪಾಪಗಳಿಂದ ಬಿಡಲ್ಪಟ್ಟವನಾಗಿ ಕೃತಾರ್ಥನಾಗು. ಎಲೈ ರಾಯನೇ! ನಿನಗೆ ಮಂಗಳವಾಗಲಿ ನಾನು ಮಿಥಿಲಾಪಟ್ಟಣಕ್ಕೆ ಹೋಗುವೆನೆಂದು ಗೌತಮ ಮಹಾಮುನಿಯು ಕಲ್ಮಷಪಾದರಾಯಂಗೆ ಉಪದೇಶವನ್ನು ಮಾಡಿ ಮಿಥಿಲಾ ಪಟ್ಟಣವನ್ನೈದಿದನು. ಅನಂತರದಲ್ಲಿ ಆ ಕಲ್ಮಷಪಾದರಾಯನು ಅದೇಪ್ರಕಾರ ದಲ್ಲಿ ಆ ಗೋಕರ್ಣಕ್ಷೇತ್ರಕ್ಕೆ ಹೋಗಿ ಪುಣ್ಯ ತೀರ್ಥಗಳಲ್ಲಿ ಸ್ನಾನವನ್ನು ಮಾಡಿ, ಮಹಾಬಲೇಶ್ವರನನ್ನು ಪೂಜಿಸಿ ತನ್ನ ಸಮಸ್ತ ಪಾಪಗಳನ್ನು ಪರಿಹರಿಸಿ ಕೊಂಡು ಶಿವಲೋಕವನ್ನೈದಿದನು. ಯಾರು ಭಕ್ತಿಯಿಂದ ಈ ಪುಣ್ಯ ಕಥೆ ಯನ್ನು ಓದಿ ಹೇಳುವರೋ ಯಾರು ಕೇಳುವರೋ ಅವರೆಲ್ಲರೂ ತಮ್ಮತಮ್ಮ ಇಪ್ಪತ್ತೊಂದು ತಲೆಯವರೊಡನೆ ಶಿವಲೋಕಕ್ಕೆ ಹೋಗುವರು. ಇದು ಸತ್ಯ ವಾದುದರಿಂದ ಈ ಕಥೆಯು ಸಕಲ ಶ್ರೇಯಸ್ಸುಗಳಿಗೂ ಸಾಧಕವಾಗಿ, ಪಾಪ ಹರವಾಗಿ, ಮೋಹಾಂಧಕಾರವನ್ನು ಹೋಗಲಾಡಿಸುವದು. ಆದಕಾರಣ ಇಂತಪ್ಪ ಕಥೆಯು ದೇವತೆಗಳಿಂದಲೂ ಕೊಂಡಾಡತಕ್ಕದ್ದೆಂದು ಸೂತಪುರಾಣೀ ಕನು ಶೌನಕಾದಿ ಮಹಾಮುನಿಗಳಿಗೆ ನಿರೂಪಿಸಿದನೆಂಬಲ್ಲಿಗೆ,

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರನರಪತಿ ಬಿರುದೆಂತೆಂಬರಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂ

ಡಾದಿ ನಾನಾ ಬಿರುದಾಂಕಿತ ಯಾದವಕುಲತಿಲಕ ಆತ್ರೇಯಸಗೋತ್ರ ಆಶ್ವಲಾಯನಸೂತ್ರವರ್ತಿ ಋಗ್ಶಾಖಾಧ್ಯಾಯಿ ಆಳಿದ ಮಹಾಸ್ವಾಮಿ ಮಹಿಶೂರ ರಾಜಒಡೆಯರ ಪೌತ್ರರಾದ ನರಸರಾಜಒಡೆಯರ ಪುತ್ರರಾದ ಶ್ರೀಇಮ್ಮಡಿ ಚಾಮರಾಜ ಒಡೆಯರವರು ಕರ್ಣಾಟಕ ಭಾಷೆಯಲ್ಲಿ ವಿರಚಿತ ಸ್ಕಂದಪುರಾಣೋಕ್ತಮಾದ ಬ್ರಹ್ಮೋತ್ತರಖಂಡದ ಗೋಕರ್ಣಕ್ಷೇತ್ರ ಮಹಿಮೆಯಲ್ಲಿ ಕಲ್ಮಷಪಾದರಾಮುನಿಗೆ ಶಿವಸಾಯುಜ್ಯಪ್ರದವಾದ

೩ನೇಯ ಅಧ್ಯಾಯಕ್ಕೆ ಮಂಗಳಮಸ್ತು.



## ಶಿವಪೂಜಾ ಮಹಿಮೆ.

### ನಾಲ್ಕನೆಯ ಅಧ್ಯಾಯ.

ಅನಂತರದಲ್ಲಿ ಸೂತಪುರಾಣೀಕನು ಶೌನಕಾದಿ ಮಹಾಮುನಿಗಳನ್ನು ಕುರಿತು ಮತ್ತಿಂತೆಂದನು.

ಎಲೈ ಋಷಿಗಳಿರಾ ! ಕೇಳಿ ಹೇಳಿದವರಿಗೂ ಕೇಳಿದವರಿಗೂ ಜನನ ಮರಣರೂಪವಾದ ಸಂಸಾರಭಯಮಂ ಬಿಡಿಸುವಂಥಾ ಬಹು ಆಶ್ಚರ್ಯಕರವಾದ ಶಿವಪೂಜಾಮಹಿಮೆಯನ್ನು ಮರಳಿ ನಿಮಗೆ ವಿವರಿಸಿ ಹೇಳುವೆನು ಲಾಲಿಸಿ. ಹೇಳಲಶಕ್ಯವಾದ ಸಂಸಾರ ಸಮುದ್ರದಲ್ಲಿ ಮುಳುಗಿರುವ ವಿಷಯಾಸಕ್ತರಾದ ಮನುಷ್ಯರಿಗೆ ಶಿವಪೂಜೆ ಹೊರತಾಗಿ ಶ್ರೇಯಸ್ಕರವಾದದ್ದು ಮತ್ತೊಂದಿಲ್ಲ ಆದಕಾರಣ ಬುದ್ಧಿವಂತನಾದವನು ಶಿವಪೂಜೆಯನ್ನು ಮಾಡಲೇಬೇಕು. ತಾನು ಮಾಡುವದಕ್ಕೆ ಶಕ್ತನಾಗದೆ ಹೋದರೆ ಮತ್ತೊಬ್ಬರಿಂದಲಾದರೂ ಮಾಡಿಸಬೇಕು. ಅದಕ್ಕೂ ಅಸಮರ್ಥನಾದರೆ ಮತ್ತೊಬ್ಬರು ಮಾಡುವ ಪೂಜೆಯನ್ನಾದರೂ ಭಕ್ತಿಯಿಂದ ನೋಡಬೇಕು. ಒಂದುವೇಳೆ ಅನಾದರಣೆಯಿಂದಲಾದರು ಶಿವ ಪೂಜೆಯನ್ನು ಮಾಡಿದವರಿಗೆ ಮಾಡಿಸಿದವರಿಗೆ ನೋಡಿದಂಥಾವರಿಗೆ ಮುಕ್ತಿಯಾಗುವುದರಲ್ಲಿ ಸಂಶಯವಿಲ್ಲ. ಈ ಅರ್ಥದಲ್ಲಿ ಒಂದಾನೊಂದು ಇತಿಹಾಸಮಂ ಹೇಳುವೆನು ಕೇಳಿ.

ಪೂರ್ವದಲ್ಲಿ ಕಿರಾತರಾಜ್ಯವೆಂಬ ಬೇಡರ ದೇಶದಲ್ಲಿ ವಿಮರ್ಶನೆಂಬ ಒಬ್ಬ ರಾಯನಿದ್ದನು, ಆತನು ಶೂದ್ರನು, ಶತ್ರುನಿಗ್ರಹವಂ ಮಾಡಿದವನು, ಧೈರ್ಯಸಂಪನ್ನನು, ಸರ್ವದಾ ಬೇಟೆಯನ್ನಾಡುವದರಲ್ಲಿ ಪ್ರೀತಿಯುಳ್ಳವನು, ದಯಾರಹಿತನಾದವನು, ಸಕಲ ವಿಧವಾದ ಮಾಂಸಗಳನ್ನು ಭಕ್ಷಿಸುವಂಥವನು, ಬ್ರಹ್ಮ,

ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕುವರ್ಣದ ಸ್ತ್ರೀಯರನ್ನು ಭೋಗಿಸುವಂಥ ವನು, ಇಂಥ ಚಂಡಾಲ ಬುದ್ಧಿಯುಳ್ಳವನಾದರೂ, ಯಾವಾಗಲೂ ತಪ್ಪದೆ ಶಿವಪೂಜೆಯನ್ನು ಮಾಡುವನು. ಶುಕ್ಲ ಕೃಷ್ಣ ಪಕ್ಷದ ಚತುರ್ದಶಿಗಳಲ್ಲಿ ವಿಶೇಷ ವಾಗಿ ಸಕಲ ವೈಭವಗಳಿಂದಲು ಶಿವಪೂಜೆಯನ್ನು ಮಾಡಿ, ಬಳಿಕ ಸಂತೋಷ ದಿಂದ ನೃತ್ಯಗಾನ ಸ್ತೋತ್ರ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡುತ್ತಿದ್ದನು.

ಈ ಪ್ರಕಾರದಲ್ಲಿರುವ ಅವನ ದುರಾಚಾರವನ್ನು ಕಂಡು ಸದಾಚಾರ ನಿರತಳಾಗಿ ಸದ್ಗುಣ ಸಂಪನ್ನೆಯಾದ ಕಕುದ್ಮತಿಯೆಂಬ ಅವನ ಪಟ್ಟದ ಹೆಂಡ ತಿಯು ಬಹಳವಾಗಿ ಸಂಕಟಪಟ್ಟು ಏಕಾಂತದಲ್ಲಿರುವಾಗ ಆತನಿಗೆ ಇಂತೆಂ ದಳು. ಎಲೈ ರಾಯನೇ! ನೀನು ಮಾಡುವುದು ಶಿವಪೂಜೆ, ನೀನು ಭಕ್ಷಿಸುವುದು ಮಾಂಸ ಈ ನಿನ್ನ ಚರಿತ್ರವು ಮಹಾ ಆಶ್ಚರ್ಯವಾಗಿದೆ ನೀನು ಯಾವಾಗಲೂ ಸರ್ವಭಕ್ಷಕನಾಗಿ ಸಕಲ ಜಾತಿ ಸ್ತ್ರೀಯರಲ್ಲಿಯು ಸಂಭೋಗಪರನಾಗಿ ಸರ್ವ ಪ್ರಾಣಹಿಂಸಕನಾಗಿದ್ದೀಯೆ. ಇಂಥ ನಿನಗೆ ಹೇಗೆ ಶಿವನಲ್ಲಿ ಭಕ್ತಿ ಉಂಟಾಯಿ ತೆಂದು ತನ್ನ ಪ್ರಾಣಕಾಂತೆಯು ಕೇಳಲಾಗಿ, ರಾಯನು ತ್ರಿಕಾಲಜ್ಞಾನಿಯಾದ ಕಾರಣ ತನ್ನ ಜ್ಞಾನದೃಷ್ಟಿಯಿಂದ ವಿಚಾರಿಸಿ ನೋಡಿ ಆ ಕಕುದ್ಮತಿಗೆ ಇಂತೆಂದು ಪ್ರತ್ಯುತ್ತರ ಹೇಳಿದನು.

ಎಲೈ ಶೋಭನಾಂಗಿಯೇ ! ಚಂದ್ರಮುಖಿಯೇ ! ಪ್ರಿಯಳೇ ಕೇಳು, ನಾನು ಪೂರ್ವಜನ್ಮದಲ್ಲಿ ಪಂಪಾನಗರದಲ್ಲಿ ನಾಯಿಯಾಗಿ ಹುಟ್ಟಿ ಮನೆಮನೆ ತಿರಿಗಿ ಎಂಜಲುತಿಂದು ಹೊಟ್ಟೆಯನ್ನು ಹೊರೆದುಕೊಂಡು ಬಹುಕಾಲವಿದ್ದೆನು. ಒಂದಾನೊಂದು ದಿನ ಆ ಪಟ್ಟಣದ ನಡುಬೀದಿಯಲ್ಲಿ, ರಮಣಿಯವಾಗಿರುವ ಶಿವಾಲಯವನ್ನು ಕಂಡು ಅದರ ಸಮೀಪಕ್ಕೆ ಹೋದೆನು ಆ ದಿನ ಚತುರ್ದಶಿ ಯಾದಕಾರಣ ಮಹಾತ್ಮರು ಶಿವಪೂಜೆಯನ್ನು ಮಾಡುತ್ತಿದ್ದರು. ನಾನು ಹೊರ ಬಾಗಿಲಲ್ಲಿ ಇದ್ದುಕೊಂಡು ನೋಡುತ್ತಿದ್ದೆನು. ಬಳಿಕ ಅರ್ಚಕರು ಬಲಿಪೀಠದ ಮೇಲೆ ಬಲಿಯನ್ನು ತಂದಿರಿಸಿದರು. ಅದನ್ನು ಭಕ್ಷಿಸಬೇಕೆಂದು ನಾನು ಆದರ ಸಮೀಪಕ್ಕೆ ಹೋಗಲು, ಅಲ್ಲಿರುವ ಕಾವಲುಗಾರರು ಕೋಲುಗಳಿಂದ ಹೊಡೆದು ಕೊಲ್ಲಬೇಕೆಂದು ಅಟ್ಟಿಸಿಕೊಂಡು ಬರಲಾಗಿ ನಾನು ಭಯಪಟ್ಟು, ಆ ಶಿವಾಲ ಯವನ್ನು ಪ್ರದಕ್ಷಿಣವಾಗಿ ಬಳಸಿಕೊಂಡು ಆ ಬರಿ ಅನ್ನದ ಮೇಲಿನ ಆಶೆಯಿಂದ ಮರಳಿ ಬಾಗಿಲಿಗೆ ಬಂದೆನು. ಈ ಪ್ರಕಾರದಲ್ಲಿ ಮೂರು ನಾಲ್ಕುವೇಳೆ ಪ್ರದಕ್ಷಿ ಣವಾಗಿ ಗುಡಿಯನ್ನು ಬಳಸಿಕೊಂಡು ಬಂದು ಬಾಗಲಲ್ಲಿಯೇ ನಿಂತು ಕಾವಲು ಗಾರರ ಬಾಣಪ್ರಹಾರಗಳಿಂದ ಅಲ್ಲಿಯೇ ಮೃತನಾದೆನು. ಆಗ ನಾನು ಶಿವ ಸಾನ್ನಿಧ್ಯದಲ್ಲಿ ಪ್ರಾಣಗಳನ್ನು ಬಿಟ್ಟೆನಾದಕಾರಣ ಈಗ ನಾನು ಈ ರಾಜಕುಲ ದಲ್ಲಿ ಹುಟ್ಟಿದೆನು. ಚತುರ್ದಶಿಯ ದಿನ ಶಿವಪೂಜೆಯನ್ನು ನೋಡಿದ ಪುಣ್ಯ

ದಿಂದ ನನಗೆ ಶಿವನಲ್ಲಿ ಭಕ್ತಿ ಉಂಟಾಯಿತು. ಶಿವಸನ್ನಿಧಿಯಲ್ಲಿದ್ದ ದೀಪ ಮಾಲಿಗಳನ್ನು ನೋಡಿದೆನಾದುದರಿಂದ ಮಹಿಮೆಯುಂಟಾಗಿ ಈಗ ನಾನು ತ್ರಿಕಾಲಜ್ಞಾನಿಯಾದೆನು. ಹೇಗಾದರೂ ನಾನು ಪೂರ್ವಜನ್ಮದಲ್ಲಿ ನಾಯಿ ಯಾಗಿದ್ದಕಾರಣ ಆ ವಾಸನೆಯಿಂದ ವರ್ಜಾವರ್ಜ್ಯಂಗಳಿಲ್ಲದೆ ಮಾಂಸಾಹಾರ ದಲ್ಲಿಯೂ ಪರಸ್ತ್ರೀಗಮನದಲ್ಲಿಯೂ ಆಸಕ್ತನಾಗಿದ್ದೇನೆ. ಎಲೈ ಪ್ರಿಯಳೇ ! ಕೇಳು, ಜ್ಞಾನಿಗಳಿಗೂ ಸಹ ಜನ್ಮಾಂತರದವಾಸನೆ ತಪ್ಪಲಾರದು. ಚತುರ್ದಶಿ ಯದಿನ ಶಿವಪೂಜೆಯನ್ನು ನೋಡಿದ ಮಾತ್ರದಿಂದಲೇ ದುರಾಚಾರಸಂಪನ್ನನಾ ದರೂ ನನಗೆ ಈ ಶಿವಭಕ್ತಿ ಇಷ್ಟವಾಯಿತು. ಇನ್ನು ಭಕ್ತಿಯುಕ್ತರಾಗಿ ಶಿವ ಪೂಜೆಯನ್ನು ಮಾಡುವವರಿಗೆ ಇಷ್ಟಾರ್ಥ ಸಿದ್ಧಿಯಾಗುವುದರಲ್ಲಿ ಏನಾಶ್ಚರ್ಯ! ಆದಕಾರಣ ಅತಿಭಕ್ತಿಯಿಂದ ನೀನು ಶಿವಪೂಜೆಯನ್ನು ಮಾಡು ಎಂದು ಆ ರಾಯನು ತನ್ನ ಹೆಂಡತಿಗೆ ಹೇಳಲಾಗಿ ಆ ಕಕುದ್ಮತಿಯು ಇಂತೆಂದಳು.

ಎಲೈ ಪ್ರಿಯನೇ ! ನೀನು ಪಾರ್ವತೀಪತಿಯ ಕೃಪೆಯಿಂದ ತ್ರಿಕಾಲ ಜ್ಞಾನವಂತನಾಗಿದ್ದೀಯಲ್ಲ ! ಹಾಗಾದರೆ ನನ್ನ ಪೂರ್ವಜನ್ಮದ ವೃತ್ತಾಂತ ವನ್ನು ಯಥಾರ್ಥವಾಗಿ ಹೇಳಬಲ್ಲೆಯಾ! ಎನಲು, ಆ ರಾಯನು ಇಂತೆಂದನು. ಎಲೈ ಪ್ರಿಯಳೇ! ಕೇಳು, ನೀನು ಪೂರ್ವಜನ್ಮದಲ್ಲಿ ಪಾರಿವಾಳದ ಪಕ್ಷಿಯಾಗಿ ಹುಟ್ಟಿ ಆಕಾಶದಲ್ಲಿ ಸಂಚರಿಸುತ್ತಿರ್ದು ಒಂದಾನೊಂದು ಪ್ರದೇಶದಲ್ಲಿ ಮಾಂಸ ವನ್ನು ಕಂಡು ಅದನ್ನು ತೆಗೆದುಕೊಳ್ಳಲು ನಿನ್ನೊಡನೆ ಬಂದ ಒಂದು ಹದ್ದು ಆ ಮಾಂಸವನ್ನು ಇಚ್ಛೈಸಿ ತಾನು ತೆಗೆದುಕೊಳ್ಳಬೇಕೆಂದು ನಿನ್ನನ್ನು ಅಟ್ಟಿಸಿ ಕೊಂಡು ಬಂದಕಾರಣ ನೀನು ಓಡಿಹೋಗಿ ದೈವಯೋಗದಿಂದ ಶ್ರೀಶೈಲವ ನ್ನೈದಿ ಮಲ್ಲಿಕಾರ್ಜುನ ಸ್ವಾಮಿಯ ಆಲಯವನ್ನು ಪ್ರದಕ್ಷಿಣವಾಗಿ ಬಳಸಿ ಬಂದು ಧ್ವಜಾಗ್ರದಲ್ಲಿ ಕುಳಿತುಕೊಂಡೆ, ಅನಂತರದಲ್ಲಿ ಆ ಹದ್ದು ಶೀಘ್ರವಾಗಿ ಹಾರಿ ಬಂದು ನಿಶಿತವಾದ ತನ್ನ ಮೂಗಿನಿಂದ ನಿನ್ನನ್ನು ಕಚ್ಚಿ ಕೆಡವಿ ಆ ಮಾಂಸ ವನ್ನು ತೆಗೆದುಕೊಂಡು ಹೊರಟುಹೋಯಿತು, ಆಗ ನೀನು ದೇವದೇವನಾದ ಪರಮೇಶ್ವರನನ್ನು ನೋಡಿದ್ದುದರಿಂದಲೆ ಈ ಜನ್ಮದಲ್ಲಿ ನೀನು ರಾಜಕುಮಾರಿ ಯಾಗಿ ಹುಟ್ಟಿದ್ದೀಯೆ ಎಂದು ಆ ರಾಯನು ಹೇಳಲು ಕಕುದ್ಮತಿಯು ಪತಿಯನ್ನು ಕುರಿತು ಮತ್ತೆ ಇಂತೆಂದಳು.

ಎಲೈ ರಾಯನೇ! ನನ್ನ ಪೂರ್ವಜನ್ಮದ ವೃತ್ತಾಂತವನ್ನು ಹೇಳಿದುದರಿಂದ ಮಹತ್ತಾದ ಆಶ್ಚರ್ಯವಾಗುತ್ತಿದೆ. ಪರಮೇಶ್ವರನಲ್ಲಿ ಭಕ್ತಿ ಹೆಚ್ಚಿತು, ಇನ್ನೊಂ ದನ್ನು ಕೇಳಬೇಕೆಂದಿದ್ದೇನೆ. ಈ ದೇಹಂಗಳಂ ಬಿಟ್ಟು ನಾವಿಬ್ಬರೂ ಯಾವ ಗತಿಯನ್ನು ಪಡೆಯುವೆವೆಂದು ಕೇಳಲು, ಆ ಕಕುದ್ಮತಿಗೆ ಆ ರಾಯನಿಂತೆಂದನು.

ಎಲೆ ಪ್ರಿಯಳೆ ! ಕೇಳು ಮುಂದಿನ ಜನ್ಮದಲ್ಲಿ ನಾನು ಸಿಂಧುದೇಶದ ರಾಜನಾಗಿ ಹುಟ್ಟುವೆನು ನೀನು ಸೃಂಜಯದೇಶದ ರಾಯನಿಗೆ ಮಗಳಾಗಿ ಹುಟ್ಟಿ ನನಗೆ ಪ್ರಿಯಳಾದ ಹೆಂಡತಿಯಾಗುವೆ. ಮೂರನೆಯ ಜನ್ಮದಲ್ಲಿ ನಾನು ಸೌರಾಷ್ಟ್ರ ದೇಶದ ರಾಜನಾಗಿ ಹುಟ್ಟುವೆನು ನೀನು ಕಳಿಂಗರಾಯನ ಕುಮಾರಿಯಾಗಿ ಹುಟ್ಟಿ ನನ್ನನ್ನು ವರಿಸುವೆ, ನಾಲ್ಕನೆಯ ಜನ್ಮದಲ್ಲಿ ನಾನು ಗಾಂಧಾರದೇಶದ ಅರಸನಾಗಿ ಹುಟ್ಟುವೆನು ನೀನು ಮಗಧ ರಾಜನ ಕುಮಾರಿಯಾಗಿ ಹುಟ್ಟಿ ನನಗೆ ಪತ್ನಿಯಾಗುವೆ. ಐದನೆಯ ಜನ್ಮದಲ್ಲಿ ನಾನು ಅವಂತೀ ದೇಶಾಧಿಪತಿಯಾಗಿ ಜನಿಸುವೆನು. ನೀನು ದಶಾರ್ಣವ ದೇಶದ ಅರಸನ ಮಗಳಾಗಿ ಹುಟ್ಟಿ ನನ್ನನ್ನೇ ಮದುವೆಯಾಗುವೆ. ಆರನೆಯ ಜನ್ಮದಲ್ಲಿ ನಾನು ಅನರ್ತದೇಶಂಗಳಿಗೆ ಪ್ರಭು ವಾಗಿ ಜನಿಸುವೆನು ಆಗ ನೀನು ಯಯಾತಿ ವಂಶದಲ್ಲಿ ಹುಟ್ಟಿ ನನಗೆ ಹೆಂಡತಿ ಯಾಗುವೆ ಏಳನೆಯ ಜನ್ಮದಲ್ಲಿ ನಾನು ಧೈರ್ಯ ಸೌಂದರ್ಯ ಗಾಂಭೀರ್ಯಾದಿ ಗುಣ ಸಂಪನ್ನನಾಗಿ ಸಕಲ ಶಾಸ್ತ್ರಂಗಳನ್ನು ಬಲ್ಲವನಾಗಿ ಪರಾಕ್ರಮವಂತನಾಗಿ ಸಮಸ್ತ ರಾಜಲಕ್ಷಣಗಳಿಂದ ಕೂಡಿದವನಾಗಿ ಪ್ರಜೆಗಳಿಗೆ ಮನೋರಂಜಕನಾಗಿ ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳವನಾಗಿ ಪದ್ಮವರ್ಣನೆಂಬ ಪೆಸರಂತಾಳ್ದು ಪಾಂಡ್ಯದೇಶಾಧೀಶ್ವರನಿಗೆ ಪುತ್ರನಾಗಿ ಹುಟ್ಟುವೆನು. ಆಗಲೂ ನೀನು ರೂಪ ಸೌಂದರ್ಯದಿಂದ ಸಮಾನವಂತಳಾಗಿ ಸಮಸ್ತ ರಾಜಕುಮಾರಿ ಚಿಹ್ನೆಗಳುಳ್ಳವ ಳಾಗಿ ಮನೋಹರವಾದ ಅವಯವಂಗಳುಳ್ಳವಳಾಗಿ ವಸುಮತಿಯೆಂಬ ಹೆಸರಂ ತಾಳ್ದು ವಿದೇಹರಾಯನಿಗೆ ಮಗಳಾಗಿ ಹುಟ್ಟುತ್ತೀಯೆ, ಆ ಜನ್ಮದಲ್ಲಿಯು ನೀನು ಸಮಸ್ತ ರಾಜಕುಮಾರರನ್ನು ಬಿಟ್ಟು ದಮಯಂತಿ ನಳಚಕ್ರವರ್ತಿಯನು ವರಿಸಿದೋಪಾದಿಯಲ್ಲಿ ಸ್ವಯಂವರದಲ್ಲಿ ನನ್ನನ್ನೇ ವರಿಸುವೆ, ಆ ಸಮಯದಲ್ಲಿ ಸಮಸ್ತ ರಾಜಕುಮಾರರು ನನ್ನೊಡನೆ ಯುದ್ಧಕ್ಕೆ ಬರುವರು ನಾನು ಅವರನ್ನೆಲ್ಲ ರನ್ನೂ ಜಯಿಸಿ ನಿನ್ನನ್ನು ಮದುವೆಯಾಗಿ ರಾಜ್ಯವನ್ನಾಳುತ್ತಾ ಬಹು ವರ್ಷ ಗಳು ಸುಖವನ್ನನುಭವಿಸಿ ಬ್ರಹ್ಮಯಜ್ಞ, ವೈಶ್ವದೇವ, ಅತಿಥಿ ಸತ್ಕಾರ, ದೇವ ತರ್ಪಣ, ಋಷಿತರ್ಪಣ, ಪಿತೃತರ್ಪಣ, ಬಲಿಹರಣಂಗಳೆಂಬ ಪಂಚಮಹಾ ಯಜ್ಞಂಗಳಿಂದಲು, ರಾಜಸೂಯ, ಅಶ್ವಮೇಧ, ವಾಜಪೇಯಾದಿ ಯಾಗಂಗಳಿಂ ದಲು, ಗೋದಾನ, ಭೂದಾನ, ಕನ್ಯಾದಾನ, ಹಿರಣ್ಯದಾನಾದಿ ಸಕಲ ದಾನಂಗ ಳಿಂದಲೂ ಬ್ರಾಹ್ಮಣರಿಗೆ ಸಂತೋಷವನ್ನುಂಟುಮಾಡಿ ಜಗತ್ತಿಗೆ ಶುಭಪ್ರದ ನಾದ ಪರಮೇಶ್ವರನನ್ನು ಪೂಜಿಸುತ್ತಿರ್ದು ಅಂತ್ಯದಲ್ಲಿ ನನ್ನ ಮಗನಿಗೆ ಪಟ್ಟಾಭಿ ಷೇಕವನ್ನು ಮಾಡಿ ತಪಸ್ಸಿಗಾಗಿ ವನವನ್ನು ಪ್ರವೇಶಿಸಿ, ಆ ವನದಲ್ಲಿ ಮುನಿ ಶ್ರೇಷ್ಠನಾದ ಅಗಸ್ತ್ಯನ ಉಪದೇಶದಿಂದ ಶಿವತತ್ವವನ್ನು ತಿಳಿದು ನಿನ್ನೊಡನೆ ಕೈಲಾಸಕ್ಕೆ ಹೋಗುವೆನು.

ಕೇಳೌ ಕಕುದ್ಮತೀ! ಮುಂದಿನ ಜನ್ಮದಲ್ಲಿಯು ನನಗೆ ರಾಜತ್ವ ಅಂತ್ಯ ದಲ್ಲಿ ಕೈಲಾಸಪದವು ಇವೆಲ್ಲವು ಈಗ ನಾನು ತಪ್ಪದೇ ಮಾಡುತ್ತಿರುವ ಚತು ರ್ದಶಿ ಶಿವಪೂಜೆಯ ಮಹಿಮೆಯಿಂದ ಲಭಿಸುವುವು. ಈ ಚತುರ್ದಶಿ ಪೂಜೆ ಯಲ್ಲಿ ನನಗೆ ವಿಶ್ವಾಸವು ನಾನು ಪೂರ್ವಜನ್ಮದಲ್ಲಿ ಪರಮೇಶ್ವರನ ಪೂಜೆಯನ್ನು ನೋಡಿದ ಪುಣ್ಯದಿಂದಲೆ ಉಂಟಾಯಿತು. ಇಲ್ಲವಿದ್ದರೆ ನನ್ನ ನಾಯಿ ಜನ್ಮವೆಲ್ಲಿ ಈ ಸದ್ಗತಿ ಎಲ್ಲಿಯದೆಂದು ವಿಮರ್ಶರಾಯನು ಕಕುದ್ಮತಿಗೆ ಹೇಳಲಾಗಿ, ಆ ಕಕುದ್ಮತಿ ತನ್ನ ಗಂಡನಿಂದ ಹೇಳಲ್ಪಟ್ಟ ಜನ್ಮಾಂತರ ಗತಿಯನ್ನು ಕೇಳಿ ಆಶ್ಚ ರ್ಯಯುಕ್ತಳಾಗಿ ತನ್ನ ಗಂಡನನ್ನು ಕೊಂಡಾಡಿದಳು. ಈ ಪ್ರಕಾರ ಆ ವಿಮರ್ಶ ರಾಯನು ಕಕುದ್ಮತಿಯನ್ನು ಪ್ರೀತಿಯೊಡನೆ ಕೂಡಿ ಸಕಲ ಭೋಗಂಗಳನ್ನನು ಭವಿಸಿ ಏಳನೆಯ ಜನ್ಮಾಂತರದಲ್ಲಿ ಶಿವಪದವಿಯನ್ನೈದಿದನು ಆದಕಾರಣ ಯಾರು ಆಶ್ಚರ್ಯಯುಕ್ತಮಾದ ಈ ಶಿವಪೂಜಾಮಹಿಮೆಯ ಕಥೆಯನ್ನು ಕೇಳು ವರೋ ಯಾರು ಹೇಳುವರೋ ಅವರೆಲ್ಲರೂ ಕೈಲಾಸಪದವಿಯನ್ನು ಪಡೆಯುವ ರೆಂದು ಸೂತಪುರಾಣೀಕನು ಶೌನಕಾದಿ ಮುನಿಗಳಿಗೆ ನಿರೂಪಿಸಿದನೆಂಬಲ್ಲಿಗೆ,

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರ ನರಪತಿ ಬಿರುದೆಂತೆಂಬರ ಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡಾದಿ ನಾನಾ ಬಿರುದಾಂಕಿತ ಯಾದವಕುಲತಿಲಕ ಆತ್ರೇಯ ಸಗೋತ್ರ ಅಶ್ವಲಾಯನಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರ ರಾಜಒಡೆಯರ ಪೌತ್ರ ನರಸರಾಜಒಡೆಯರ ಪುತ್ರರಾದ ಶ್ರೀಇಮ್ಮಡಿ ಚಾಮರಾಜ ಒಡೆಯರವರು ಕರ್ಣಾಟಕ ಭಾಷೆಯಲ್ಲಿ ವಿರಚಿಸಿದ ಸ್ಕಾಂದಪುರಾಣೋಕ್ತಮಾದ ಬ್ರಹ್ಮೋತ್ತರಖಂಡದಲ್ಲಿ ಚತುರ್ದಶಿ ಪೂಜೆಯ ಮಹಿಮೆಯಿಂದ ವಿಮರ್ಶರಾಯನಿಗೆ ಶಿವಕೈವಲ್ಯ ಪದವಿಯಾದ ೪ನೆಯ ಅಧ್ಯಾಯಕ್ಕೆ ಮಂಗಳಮಸ್ತು.

## ಪ್ರದೋಷ ಮಹಾತ್ಮೆ.

### ಐದನೆಯ ಅಧ್ಯಾಯ.

ಅನಂತರದಲ್ಲಿ ಸೂತಪುರಾಣಿಕನು ಶೌನಕಾದಿ ಮಹಾಮುನಿಗಳನ್ನು ಕುರಿತು ಪುನರಪಿ ಶಿವಪೂಜಾ ಪ್ರಭಾವವನ್ನು ಹೇಳತೊಡಗಿದನು. ಕೇಳಿರೈ ಋಷಿಗಳಿರಾ! ಮನುಷ್ಯರಿಗೆ ಶಿವನೇ ಗುರುವು, ಶಿವನೇ ಬಂಧುವು, ಶಿವನೇ ಮನಸ್ಸು, ಶಿವನೇ ಜೀವವು, ಶಿವನೇ ಸರ್ವವು, ಶಿವನನ್ನು ಬಿಟ್ಟು ಮತ್ತೊಂ

ದಿಲ್ಲ. ಆದಕಾರಣ ಶಿವನನ್ನು ಕುರಿತು ಜಪಹೋಮನಿಯಮಗಳನ್ನು ಸ್ವಲ್ಪ ಸ್ವಲ್ಪವಾಗಿ ಮಾಡಿದರೂ ಅನಂತವಾದ ಫಲವನ್ನೇ ಕೊಡುವನು. ಶಿವನಿಗೆ ಸಮರ್ಪಿಸಿದ ಪತ್ರಪುಷ್ಪ ಫಲೋದಕಗಳು ಅವನಿಗೆ ಅರ್ಪಿತವಾದರೆ ಒಂದಕ್ಕೆ ಕೋಟಿ ಗುಣಿತವಾಗುವುವು. ಯಾರು ವೇದಶಾಸ್ತ್ರ ವಿಹಿತವಾದ ಸಮಸ್ತ ಕಾಮ್ಯ ಕರ್ಮಗಳನ್ನು ಮಾಡಿ ಭಕ್ತಿಯಿಂದ ಪರಮೇಶ್ವರನನ್ನು ಪೂಜಿಸುತ್ತಿರುವರೋ ಅವರು ಸಂಸಾರಬಂಧದಿಂದ ಮುಕ್ತರಾಗುವರು. ಪುತ್ರಮಿತ್ರ ಕಳತ್ರಾದಿಗಳಲ್ಲಿ ಇರುವ ಪ್ರೀತಿಯು ಪರಮೇಶ್ವರನ ಪೂಜೆಯಲ್ಲಿದ್ದರೆ, ಆ ಪರಮೇಶ್ವರನು ಪ್ರಸನ್ನ ನಾಗುವದೇನಾಶ್ಚರ್ಯ! ಆದಕಾರಣ ಮಹಾತ್ಮರು ಹೆಣ್ಣು ಹೊನ್ನು ಮಣ್ಣು ಗಳಲ್ಲಿ ಆಶೆಯನ್ನು ಬಿಟ್ಟು ಅನ್ನಪಾನಾದಿಗಳಿಲ್ಲದೆ ಶರೀರವನ್ನು ದಂಡಿಸಿ ಶಿವಪೂಜೆ ಯನ್ನು ಮಾಡುತ್ತಿದ್ದರೆ ಅವರು ಶಿವಸಾಯುಜ್ಯವನ್ನು ಪಡೆಯುವರು. ಶಿವ ಸ್ತೋತ್ರವನ್ನು ಮಾಡುವುದೇ ನಾಲಗೆ, ಧ್ಯಾನಿಸುವದೇ ಮನಸ್ಸು, ಕಥೆಯನ್ನು ಕೇಳುವುದೇ ಕಿವಿಗಳು, ಪೂಜೆಯನ್ನು ಮಾಡುವುದೇ ಹಸ್ತಗಳು, ಆ ಪೂಜೆಯನ್ನು ನೋಡುವುದೇ ಕಣ್ಣುಗಳು, ನಮಸ್ಕರಿಸುವುದೇ ಶಿರಸ್ಸು, ಕ್ಷೇತ್ರಗಳನ್ನು ಮೆಟ್ಟು ವುದೇ ಪಾದಗಳು, ಯಾವನು ಸಮಸ್ತವಾದ ಇಂದ್ರಿಯಗಳನ್ನು ಶಿವನಲ್ಲಿಯೇ ಆಸಕ್ತಿಯಿಂದಿರಿಸಿ ಈ ಲೋಕದ ಸಂಸಾರ ದುಃಖವಿಲ್ಲದೇ ಸುಖದಲ್ಲಿರುವನೋ ಆತನು ಶಿವಸಾಯುಜ್ಯವನ್ನೇ ಪಡೆಯುವನು. ಸ್ತ್ರೀಯಾದರೂ ಪುರುಷನಾ ದರೂ ನಪುಂಸಕನಾದರೂ ಶಿವಭಕ್ತಿಯುಳ್ಳವನಾಗಿದ್ದರೆ ಯಾರಾದರೂ ಶಿವ ಸಾಯುಜ್ಯವನ್ನೇ ಪಡೆಯುವರು. ಯಾವನು ಶಿವಭಕ್ತಿ ಸಂಪನ್ನನೋ ಆವನೇ ನಮಸ್ಕಾರಕ್ಕೆ ಯೋಗ್ಯನು. ಈ ಅರ್ಥದಲ್ಲಿ ಸಂಶಯವಿಲ್ಲ. ಅಲ್ಲದೆ ಹೇಳಿದ ವರಿಗೂ ಕೇಳಿದವರಿಗೂ ಸಕಲಾರ್ಥಗಳನ್ನು ಕೊಡುವುದಾಗಿ ಸಮಸ್ತ ಪಾಪ ಗಳನ್ನು ಪರಿಹರಿಸುವಂಥ ಒಂದಾನೊಂದು ಅಪೂರ್ವ ಕಥೆಯುಂಟು, ಆ ಕಥೆ ಯನ್ನು ನಿಮಗೆ ಹೇಳುವೆನು ಕೇಳಿ:—

ಉಜ್ಜಯಿನೀ ಪಟ್ಟಣದಲ್ಲಿ ಮನುಷ್ಯರೂಪವನ್ನು ಧರಿಸಿ ಭೂಲೋಕಕ್ಕೆ ಬಂದ ದೇವೇಂದ್ರನೋಪಾದಿಯಲ್ಲಿ ಇರುತ್ತಿದ್ದ ಚಂದ್ರಸೇನನೆಂಬ ಒಬ್ಬ ರಾಯ ನಿದ್ದನು. ಆತನು ತನ್ನ ಪಟ್ಟಣದಲ್ಲಿರುವ ಮಹಾಕಾಳೇಶ್ವರನನ್ನು ಯಾವಾ ಗಲೂ ಸೇವಿಸುತ್ತಿರುವನು. ಆ ಚಂದ್ರಸೇನನಿಗೆ ಸಕಲ ವಂದ್ಯನಾದ ಮಣಿ ಭದ್ರನೆಂಬ ಹೆಸರುಳ್ಳ ಒಬ್ಬಾನೊಬ್ಬ ಪ್ರಮಥನಾಯಕನು ಸೇವ್ಯನಾಗಿ ನಿತ್ಯವೂ ಸುಖವನ್ನು ಕೊಡುತ್ತಿದ್ದನು. ಆ ಮಣಿಭದ್ರನು ಒಂದು ದಿನ ಪ್ರಸನ್ನನಾಗಿ ಆ ಚಂದ್ರಸೇನನಿಗೆ ಚಿಂತಾಮಣಿಯೆಂಬ ಮಾಣಿಕ್ಯವನ್ನು ಕೊಟ್ಟನು. ಕೌಸ್ತುಭ ದೋಪಾದಿಯಲ್ಲಿ ಪ್ರಕಾಶಮಾನವಾದ ಆ ಮಾಣಿಕ್ಯವು ನೋಡಿದವರಿಗೂ ಕೇಳಿ ದವರಿಗೂ ಧ್ಯಾನಿಸಿದವರಿಗೂ ಇಷ್ಟಾರ್ಥವನ್ನು ಕೊಡುವಂಥದು ಅದರ ಕಾಂತಿ

ಲೇಶವಾದರು ಸೋಕಿದಮಾತ್ರದಿಂದಲಿ ಕಂಚು, ಕಬ್ಬಿಣ, ತಾಮ್ರ, ಸೀಸ, ತಗರ, ಪಾಷಾಣ, ಮೊದಲಾದುವು ಚಿನ್ನವಾಗುತ್ತಿದ್ದವು, ಆ ಮಾಣಿಕ್ಯವನ್ನು ಮುತ್ತಿನ ಸರದಲ್ಲಿ ಹಾಕಿ ನಾಯಕರತ್ನವಾಗಿ ಮಾಡಿಕೊಂಡು, ಅದನ್ನು ಕಂಠ ದಲ್ಲಿ ಧರಿಸಿ ಸಿಂಹಾಸನಾರೂಢನಾಗಿ ಆ ರಾಜನು ಸೂರ್‍ಯನೋಪಾದಿಯಲ್ಲಿ ಒಪ್ಪು ತ್ತಿದ್ದನು, ಆಗ ಸೌರಾಷ್ಟ್ರ, ಸೌವೀರ, ಕೇಕಯು, ಸಾಲ್ವ, ಪಾಂಡ್ಯ, ಪಾಂಚಾಲ, ಅವಂತಿ, ಪುಳಿಂದ, ಮಗಧ, ಮತ್ಸ್ಯ, ಮದ್ರ, ಸೃಂಜಯ, ಅಂಗ, ವಂಗ, ಕಳಿಂಗಾದಿ ದೇಶದ ಅರಸುಗಳೆಲ್ಲರು ಆ ಮಾಣಿಕ್ಯವು ಚಂದ್ರಸೇನನ ಕೊರಳಿ ನಲ್ಲಿದೆ ಎಂಬ ವೃತ್ತಾಂತವನ್ನು ಕೇಳಿ ಅದನ್ನು ಅಪೇಕ್ಷಿಸಿ ಚಿಂತಾಕ್ರಾಂತರಾಗಿ, ಕೆಲವರು ಸ್ನೇಹದಿಂದಲು ಬಲವಂತದಿಂದಲು ಕೇಳಿದರೂ ಆ ರಾಯನು ಯಾರನ್ನೂ ಗಣಿಸೆಮಾಡದೆ ಆ ಮಾಣಿಕ್ಯವನ್ನೂ ಕೊಡದೆ ಇರಲಾಗಿ, ಅದು ಆತನಿಗೆ ಪರಮೇಶ್ವರಾನುಗ್ರಹದಿಂದ ಬಂದದ್ದು ನಮಗೆ ಸಾಧಕವಾದುದಲ್ಲವೆಂದು ತಿಳಿಯದೆ ಆ ರಾಜರೆಲ್ಲರೂ ಒಟ್ಟು ಗೂಡಿ ತಮ್ಮತಮ್ಮ ಚತುರಂಗ ಬಲಸಮೇತ ರಾಗಿ ಹೊರಟು ಚಂದ್ರಸೇನನನ್ನು ಕೊಂದು ಆ ಮಾಣಿಕ್ಯವನ್ನು ಅಪಹರಿಸುವು ಕ್ಕಾಗಿ ಆತನ ಪಟ್ಟಣದ ನಾಲ್ಕು ಬಾಗಿಲುಗಳನ್ನು ಮುತ್ತಿದರು.

ಆಗ ಚಂದ್ರಸೇನನು ಗರ್ವಗ್ರಸ್ತರಾದ ಶತ್ರುಗಳಿಂದ ಮುಸುಕಲ್ಪಟ್ಟ ತನ್ನ ಪಟ್ಟಣದ ದುರ್ಗತಿಯನ್ನು ಕಂಡು ಭಯಪಡದೆ ಧೈರ್‍ಯದಿಂದ ಮಹಾಕಾಳೇಶ್ವ ರನನ್ನು ಮರೆಹೊಕ್ಕು, ಹಗಲಿರಳು ಯಾವ ಚಿಂತೆಯೂ ಇಲ್ಲದೆ ಭಕ್ತಿಯಿಂದ ಪೂಜಿಸುತ್ತಿದ್ದನು. ಆ ಸಮಯದಲ್ಲಿ ಆ ಪಟ್ಟಣದ ಗೋಪಸ್ತ್ರೀಯೊಬ್ಬಳು ಐದುವರುಷದ ತನ್ನ ಮಗನನ್ನು ಎತ್ತಿಕೊಂಡು ಮಹಾಕಾಳೇಶ್ವರನ ಗುಡಿಗೆ ಬಂದು ಆ ರಾಯನು ಮಾಡುತ್ತಿರುವ ಪೂಜೆಯನ್ನು ಕಂಡು ಆಶ್ಚರ್‍ಯಪಟ್ಟು, ಆ ಮಹಾಕಾಳೇಶ್ವರನಿಗೆ ನಮಸ್ಕರಿಸಿ ತನ್ನ ಮನೆಗೆ ಹೊರಟುಬಂದಳು. ಅನಂತರ ದಲ್ಲಿ ಆ ಗೋಪಸ್ತ್ರೀಯ ಕುಮಾರನು ಆ ರಾಯನು ಮಾಡುವ ಶಿವಪೂಜೆಯನ್ನು ನೋಡಿದವನಾಗಿದ್ದಕಾರಣ ಆ ಪ್ರಕಾರ ತಾನೂ ಶಿವಪೂಜೆಯನ್ನು ಮಾಡಬೇಕೆಂಬ ಲವಲವಿಕೆಯಿಂದ ಒಂದಾನೊಂದು ಸಣ್ಣ ಶಿಲೆಯನ್ನು ತಂದು ತನ್ನ ಮನೆಯ ಸಮೀಪದಲ್ಲಿದ್ದ ಹಾಳುಮನೆಯಲ್ಲಿ ಇಟ್ಟುಕೊಂಡು ಅದನ್ನೆ ಲಿಂಗವೆಂದು ಭಾವಿಸಿ ತನ್ನ ಕೈಗೆ ಸಿಕ್ಕಿದ ಪುಷ್ಪಗಳನ್ನು ತಂದು ಅಭಿಷೇಕವನ್ನು ಮಾಡಿ, ಆ ಪುಷ್ಪಗ ಳನ್ನು ಸಮರ್ಪಿಸುತ್ತ ಕ್ರಮ ದ್ರವ್ಯಂಗಳಿಂದ ಇವು ಭೂಷಣಗಳು, ಇವು ಶಿಲಾ ಕ್ಷತಗಳು ಇವು ಧೂಪ ದೀಪ ನೈವೇದ್ಯ ತಾಂಬೂಲಗಳೆಂದು ಸರ್‍ವೋಪಚಾರಂ ಗಳಿಂದಲೂ ಶಿವಪೂಜೆಯನ್ನು ಮಾಡಿದನು.

ಈ ಪ್ರಕಾರದಲ್ಲಿ ಹಲವುಸಾರಿ ಬಾರಿಬಾರಿಗೂ ಪೂಜಿಸುತ್ತ ಆ ಶಿವ ಲಿಂಗದ ಮುಂದೆ ನಿಂತು, ನಲಿದು, ನರ್ತಿಸಿ ನಮಸ್ಕಾರವನ್ನು ಮಾಡುತ್ತಿದ್ದನು.

ಹೀಗೆ ಮತ್ತೊಂದರಲ್ಲಿ ಮನಸ್ಸಿಲ್ಲದೆ ಶಿವಪೂಜೆಯನ್ನು ಮಾಡುತ್ತಿದ್ದ ತನ್ನ ಮಗನನ್ನು ಗೋಪಸ್ತ್ರೀಯು ಭೋಜನಕ್ಕೆ ಕರೆದರೂ ಅವನು ಶಿವಪೂಜೆಯಲ್ಲಿ ನಿರತರಾಗಿ ಭೋಜನದಲ್ಲಿ ಇಚ್ಛೆಯಿಲ್ಲದೆ ಮೌನದಿಂದ ಕಣ್ಣುಮುಚ್ಚಿಕೊಂಡು ಏಕಾಗ್ರಚಿತ್ತನಾಗಿ ಶಿವಲಿಂಗದ ಮುಂದೆ ಕುಳಿತಿದ್ದನು. ಅವಳು ಆ ಮಗನನ್ನು ಕೈಹಿಡಿದು ಎಳೆದರೂ ಏನು ಮಾಡಿದರೂ ಬಾರದೇ ಇರಲು, ಆ ಪೂಜೋಪಕರಣಗಳನ್ನು ಕೆಡಿಸಿ ಆ ಶಿವಲಿಂಗವನ್ನು ತೆಗೆದು ದೂರಕ್ಕೆ ಎಸೆಯಲು, ಆಹಾ ಬೇಡಬೇಡವೆಂದು ಕೂಗುತ್ತಿರುವ ಆ ಮಗನನ್ನು ಹೊಡೆದು ತಿರಿಗಿ ತನ್ನ ಮನೆಗೆ ಬಂದಳು. ಅನಂತರದಲ್ಲಿ ಆ ಗೋಪಾಲಕನು ತನ್ನ ತಾಯಿಂದ ಕೆಡಿಸಲ್ಪಟ್ಟ ಶಿವಪೂಜೆಯನ್ನು ನೋಡಿ, ಕಣ್ಣೀರಿನಿಂದ ನೆನೆದ ಮುಖವುಳ್ಳವನಾಗಿ ಹರಹರಾ! ಶಿವಶಿವಾ! ಮಹಾದೇವ ಎಂದು ಮೊರೆಯಿಡುತ್ತಾ ಭೂಮಿಯಲ್ಲಿ ಬಿದ್ದು ಹೊರಳಿ ಹೊರಳಿ ಶೋಕಿಸಿ ಮೂರ್ಛೆ ಹೋಗಿ, ಕ್ಷಣಮಾತ್ರದಲ್ಲಿ ಮೂರ್ಛೆ ತಿಳಿದೆದ್ದು ಕಣ್ದೆರೆದು ನೋಡಲಾಗಿ, ಆ ಹಾಳುಮನೆಯೇ ಮಣಿಮಯವಾದ ಕಂಭಗಳಿಂದಲು, ತೋರಣಗಳಿಂದಲು, ಇಂದ್ರನೀಲದ ಜಗಲಿಗಳಿಂದಲು, ವಜ್ರದಪ್ರಾಕಾರಗಳಿಂದಲು, ಚಿನ್ನದ ಕಲಶಗಳುಳ್ಳ ಶಿಖರಂಗಳಿಂದಲು, ಥಳಥಳಿಸುವ ಉಪ್ಪರಿಗೆಗಳಿಂದಲು, ರಮಣೀಯವಾದ ಅರಮನೆಯಂತಿರಲು, ಅದರ ಮಧ್ಯದಲ್ಲಿ ಅಮೂಲ್ಯ ರತ್ನಖಚಿತವಾದ ಶಿವಾಲಯದಲ್ಲಿ ಸರ್ವರತ್ನ ಮಯವಾದ ಪೀಠವನ್ನು, ರತ್ನಾಕಾರವಾದ ಲಿಂಗವನ್ನೂ ಕಂಡು ಭಯದಿಂದಲು ಆಶ್ಚರ್ಯದಿಂದಲು ಕೂಡಿ, ಆನಂದಸಮುದ್ರದಲ್ಲಿ ಮುಳಿಗಿದವನೋಪಾದಿಯಲ್ಲಿ ಸಂತುಷ್ಟನಾಗಿ, ಇದೆಲ್ಲ ಆ ಶಿವಪೂಜೆಯ ಮಹಿಮೆಯೆಂದು ತಿಳಿದು ತನ್ನ ತಾಯಿ ಮಾಡಿದ ಪಾಪ ಪರಿಹಾರಾರ್ಥವಾಗಿ ಭೂಮಿಯಲ್ಲಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಇಂತೆಂದು ಬಿನ್ನವಿಸಿದನು, ಎಲೈ ಪಾರ್ವತೀಪತಿಯಾದ ಪರಮೇಶ್ವರನೇ ನನ್ನ ತಾಯಿ ನಿನ್ನ ಮಹಿಮೆಯನ್ನರಿಯದೆ ಅಜ್ಞಾನದಿಂದ ಮಾಡಿದ ಅಪರಾಧವನ್ನು ಕ್ಷಮಿಸಿ, ಅವಳಲ್ಲಿ ಪ್ರಸನ್ನನಾಗು. ಹಾಗಾಗದಿದ್ದರೆ ಎಲೈ ಶಂಭುವೆ! ನನ್ನಲ್ಲಿ ಕೃಪೆಮಾಡಿ ನಾನು ಮಾಡಿದ ಪುಣ್ಯವೇನಾದರು ಇದ್ದರೆ ಅದರಿಂದಲಾದರೂ ನನ್ನ ತಾಯಿಯ ಅಪರಾಧವನ್ನು ಕ್ಷಮಿಸು ಎಂದು ಬೇಡಿಕೊಂಡು ಪ್ರಸನ್ನನಾದ ಶಿವನಿಗೆ ನಮಸ್ಕಾರಮಾಡಿ ಸೂರ್ಯನು ಅಸ್ತಂಗತನಾಗುತ್ತಿರಲು, ಆ ಗೋಪಾಲಕನು ಆ ಶಿವಾಲಯದಿಂದ ಹೊರಟು ದೇವೇಂದ್ರನ ಮನೆಗೆ ಸಮವಾಗಿ ನವರತ್ನಗಳಿಂದ ಅಲಂಕರಿಸಲ್ಪಟ್ಟ ಗೋಡೆಗಳಿಂದಲು, ಧನ ಧಾನ್ಯರಾಶಿಗಳಿಂದಲು, ಪಶುಗಳಿಂದಲೂ ಕೂಡಿ, ತೂಗುಮಂಚ ಸುಪ್ಪತ್ತಿಗೆಗಳಿಂದ ಒಪ್ಪುತ್ತಿರುವ ತನ್ನ ಅಪೂರ್ವವಾದ ಮನೆಯನ್ನು ನೋಡಿ ಸಂತೋಷಪಟ್ಟು ಸುವರ್ಣಮಯವಾದ ಆ ಮನೆಗೆ ಹೋಗಿ, ಅಲ್ಲಿ ಅನರ್ಘ್ಯವಾದ ರತ್ನ

ಮಯವಾದ ಚಪ್ಪರ ಮಧ್ಯದಲ್ಲಿದ್ದ ದಿವ್ಯವಾದ ಮಂಚದೊಳು ಬಿಳಿಯಬಟ್ಟೆಯ ಸುಪ್ಪತ್ತಿಗೆಯಲ್ಲಿ ಮಲಗಿದ್ದ ಸರ್ವಾಭರಣ ಭೂಷಿತಳಾದ ದಿವ್ಯವಾದ ದುಕೂಲ ವನ್ನುಟ್ಟು ದಿವ್ಯ ಲಕ್ಷಣವುಳ್ಳವಳಾಗಿ ದೇವತಾ ಸ್ತ್ರೀಯಂತೆ ಒಪ್ಪುತ್ತಿದ್ದ ತನ್ನ ತಾಯಿಯನ್ನು ಕಂಡು ಆ ಗೋಪಕುಮಾರನು ಸಂತೋಷದಿಂದ ವಿಕಸಿತವಾದ ಕಣ್ಣುಗಳುಳ್ಳವನಾಗಿ ಅವಳನ್ನು ಎಬ್ಬಿಸಿ ಎಲೇ ತಾಯಿಯಾ! ಏಳು ನಿನಗೆ ಮಂಗ ಳವಾಗಲಿ ನಿನಗೆ ಆಶ್ಚರ್ಯಕರವಾದ ನಿನ್ನಮನೆಯನ್ನು ನೋಡಿದೆಯೋ ಇಲ್ಲವೋ ಎನಲು, ಆ ಗೋಪಸ್ತ್ರೀಯು ಸಂಭ್ರಮದಿಂದ ಎದ್ದು ಕಣ್ದೆರೆದು ನೋಡಿ ತಾನೂ ತನ್ನ ಮಗನೂ ತನ್ನ ಮನೆಯೂ ನೂತನವಾಗಿ ತೋರುತ್ತಿರಲು, ಆಶ್ಚರ್ಯಪಟ್ಟು ಇದೇನೆಂದು ಕೇಳಲಾಗಿ; ಈಸಮಸ್ತವೂ ಪರಮೇಶ್ವರನ ಪೂಜಾ ಮಹಿಮೆಯಿಂದ ಉಂಟಾಯಿತೆಂದು ಮಗನು ಹೇಳಿದುದನ್ನು ಕೇಳಿ ಅವಳು ಶೀಘ್ರ ವಾಗಿ ಎದ್ದು ಶಿವಾಲಯಕ್ಕೆ ಹೋಗಿ ಭಕ್ತಿಯಿಂದ ಶಿವನಿಗೆ ನಮಸ್ಕಾರವನ್ನು ಮಾಡಿ ಶಿವಪೂಜೆಯನ್ನು ಮಾಡುತ್ತಿರುವ ಆ ಚಂದ್ರಸೇನರಾಯನಿಗೆ ಬಿನ್ನ ವಿಸಲು, ಆ ರಾತ್ರಿಯಲ್ಲಿ ತಾನು ಮಾಡುತ್ತಿದ್ದ ಶಿವಪೂಜೆಯನ್ನು ಹಿಂದಿರುಗಿಸಿ ಕೊಂಡು ತನ್ನ ಪ್ರಧಾನಿಗಳಿಂದಲು, ಪುರೋಹಿತರುಗಳಿಂದಲು ಬಂದು ಸುವರ್ಣ ಮಯವಾದ ಆ ಶಿವಾಲಯವನ್ನು ರತ್ನಮಯವಾದ ಆ ಲಿಂಗವನ್ನು ಸುವರ್ಣಮಯವಾಗಿಯೂ ರತ್ನಮಯವಾಗಿಯೂ ಒಪ್ಪುತ್ತಿರುವ ಆ ಗೋಪ ಕುಮಾರನ ಮನೆಯನ್ನೂ ಕಂಡು ಮುಹೂರ್ತಪರ್ಯಂತರ ಪರಮಾನಂದಭರಿತ ನಾಗಿ ಆಶ್ಚರ್ಯವೆಂಬ ಸಮುದ್ರದಲ್ಲಿ ಮುಳುಗಿ ಆನಂದಭಾಷ್ಪ ಸಮೇತನಾಗಿ, ಎಲೈ ಮಹಾತ್ಮನೇ! ನೀನು ಹೇಗೆ ಪರಮೇಶ್ವರನ ಕಟಾಕ್ಷಕ್ಕೆ ಪಾತ್ರನಾದೆಯೊ ಹಾಗೆ ನೀನೇ ಕೃತಾರ್ಥನೆಂದು ಕೊಂಡಾಡಿ ಆ ಬಾಲಕನನ್ನು ಪ್ರೀತಿಯಿಂದ ಅಪ್ಪಿಕೊಂಡು ಮುದ್ದಾಡಿದನು.

ಹೀಗೆ ಆಶ್ಚರ್ಯಪಟ್ಟು ಸಂತೋಷಪಡುತ್ತಿರುವ ಆ ರಾಯನಿಗೂ ಪುರೋ ಹಿತನಿಗೂ ಪ್ರಜೆಗಳಿಗೂ ಆ ರಾತ್ರಿಯು ಕ್ಷಣದಂತೆ ಕಳೆದು ಹೋಗಿ ಬೆಳಗಾದ ಮೇಲೆ ಪಟ್ಟಣವನ್ನು ಮುತ್ತಿಕೊಂಡಿರುವ ಶತ್ರುರಾಯರು ಆಶ್ಚರ್ಯವನ್ನು ಹೇಳು ತ್ತಿರುವ ಜನರ ಮುಖವಚನದಿಂದ ಕೇಳಿ ತಾವೂ ಭಯಪಟ್ಟು, ತಮ್ಮ ತಮ್ಮ ವೈರಗಳನ್ನು ಬಿಟ್ಟು ಸಂಧಿಮಾಡಿಕೊಳ್ಳುವುದಕ್ಕಾಗಿ ಹೇಳಿ ಕಳುಹಿಸಿ, ಆತನ ಅಪ್ಪಣೆಯಂತೆ ನಿರಾಯುಧರಾಗಿ ಪಟ್ಟಣವನ್ನು ಪ್ರವೇಶಿಸಲು ಆ ರಾಯನು ಅವರನ್ನು ಎದುರ್ಗೊಂಡು ಕರೆತಂದು ಮಹಾಕಾಳೇಶ್ವರನ ಸಂದರ್ಶನವನ್ನು ಮಾಡಿಸಿ, ಆ ಗೋಪಬಾಲನ ಶಿವಪೂಜಾ ಮಹಿಮೆಯಿಂದ ಪ್ರಾದುರ್ಭವಿಸಿದ ಶಿವಾಲಯವನ್ನೂ ಶಿವಲಿಂಗವನ್ನು ತೋರಿಸಿ, ಅರಮನೆಗೆ ಕರೆತಂದನು.

ಅನಂತರದಲ್ಲಿ ಆ ರಾಜರುಗಳೂ ಚಂದ್ರಸೇನರಾಯನೂ ಆ ಗೋಪ ಕುಮಾರನ ಮನೆಯ ರತ್ನಸಿಂಹಾಸನಗಳಲ್ಲಿ ಕುಳಿತು ಸಂತೋಷದಿಂದ ಗೋಪ ಕುಮಾರನಿಗೆ ವಸ್ತ್ರಮಾಲ್ಯಾದಿಗಳನ್ನು, ರತ್ನಗಳನ್ನು, ಧನವನ್ನು, ಅನೇಕವಾದ ಹಸುಗಳನ್ನು ಎಮ್ಮೆಗಳನ್ನು, ಆನೆಗಳನ್ನು, ಕುದುರೆಗಳನ್ನು, ಒಂಟೆಗಳನ್ನು, ಅಂದಣ ಪಲ್ಲಕ್ಕಿಗಳನ್ನು, ಛತ್ರಚಾಮರಗಳನ್ನು, ಗ್ರಾಮಗಳನ್ನು ಕೊಟ್ಟು, ದೇಶದಲ್ಲಿರುವ ಸಕಲರಿಗೂ ಆ ಗೋಪಕುಮಾರನನ್ನೇ ಪ್ರಭುವಾಗಿ ಮಾಡಿದರು. ಆ ಸಮಯದಲ್ಲಿ ಸಮಸ್ತ ದೇವತೆಗಳಿಂದ ಪೂಜಿಸಲ್ಪಟ್ಟಂಥಾ ವಾನರೇಶ್ವರ ನಾದ ಹನುಮಂತನು ಪ್ರತ್ಯಕ್ಷವಾಗಿ ಕಾಣಿಸಲು, ಅವನನ್ನು ಸಕಲ ರಾಜರು ಗಳು ನೋಡಿ ಸಂತೋಷಪಟ್ಟು ನಮಸ್ಕರಿಸಿ ಸ್ತೋತ್ರ ಮಾಡುತ್ತಾ ಸಿಂಹಾಸನ ದಲ್ಲಿ ಕುಳ್ಳಿರಿಸಿ ಕೈಕಟ್ಟಿಕೊಂಡು ನಿಂತಿರಲು, ಹನುಮಂತನು ಗೋಪಕುಮಾರ ನನ್ನು ಬಾಚಿತಬ್ಬಿಕೊಂಡು ಕೊಂಡಾಡಿ ಆ ರಾಜರುಗಳನ್ನು ಕುರಿತು ಇಂತೆಂದನು.

ಎಲೈ ರಾಯರುಗಳಿರಾ ! ಕೇಳಿ ಜಗತ್ತಿನಲ್ಲಿ ಮನುಷ್ಯರಿಗೆ ಶಿವಪೂಜೆ ಹೊರತಾಗಿ ಶ್ರೇಯಸ್ಸಿಗೆ ಮತ್ತೊಂದು ಗತಿಯಿಲ್ಲ. ಈ ಗೋಪಸ್ತ್ರೀಯ ಮಗನು ತನ್ನ ಭಾಗ್ಯವಶದಿಂದ ತ್ರಯೋದಶಿಯದಿನ ಪ್ರದೋಷ ಕಾಲದಲ್ಲಿ ಮಂತ್ರಗಳ ನ್ನರಿಯದವರಾದರು ಭಕ್ತಿಯಿಂದ ಶಿವಪೂಜೆಯನ್ನು ಮಾಡಿ ಉತ್ತಮೈಶ್ವರ್ಯವನ್ನು ಪಡೆದನು. ಲೋಕದಲ್ಲಿ ಪ್ರದೋಷ ಕಾಲದಲ್ಲಿ ಮಾಡುವ ಶಿವಪೂಜೆಯು ದುರ್ಲಭವಾದದ್ದು. ಆದರಲ್ಲಿಯು ತ್ರಯೋದಶಿಯಲ್ಲಿ ಮತ್ತೂ ದುರ್ಲಭವಾ ದದ್ದು. ಅದಕ್ಕಿಂತಲೂ ಕೃಷ್ಣಪಕ್ಷದಲ್ಲಿ ಇನ್ನೂ ಅಧಿಕವಾದದ್ದು. ಅಂಥಾ ಕೃಷ್ಣಪಕ್ಷದ ತ್ರಯೋದಶಿಯಲ್ಲಿ ಶಿವಪೂಜೆಯನ್ನು ಮಾಡಿದ ಈ ಗೋಪನು ಇನ್ನುಮೇಲೆ ಶ್ರೀಕರನೆಂಬ ಹೆಸರಿನಿಂದ ಎಂಟನೇ ಜನ್ಮದಲ್ಲಿ ಕೀರ್ತಿವಂತ ನಾಗಿ ಹುಟ್ಟುತ್ತಾನೆ ನಾರಾಯಣನು ಈತನಿಗೆ ಮಗನಾಗಿ ಹುಟ್ಟಿ ಕೃಷ್ಣರಾಯ ರೆಂಬ ಪೆಸರಂ ತಾಳ್ದು ಸದ್ಗತಿಯನ್ನು ಕೊಡುತ್ತಾನೆ. ಆಗ ಗೋಪವಂಶವೆಲ್ಲವು ಭಾಗ್ಯವುಳ್ಳದ್ದಾಗುತ್ತೆಂದು ಹೇಳಿ, ಆ ಗೋಪಕುಮಾರನಿಗೆ ಶೈವಾಚಾರ ಸಂಪ್ರ ದಾಯವನ್ನು ಉಪದೇಶಮಾಡಿ ಅಂತರ್ಧಾನನಾದನು.

ಹೀಗೆ ನಡೆದ ಈ ಸಮಸ್ತವನ್ನು ಆ ರಾಜರುಗಳು ಕಂಡು ಸಂತೋಷ ಪಟ್ಟು, ಆ ಚಂದ್ರಸೇನನಿಂದ ಉಡುಗೊರೆಯನ್ನು ತೆಗೆದುಕೊಂಡು ಕಳುಹಿಸಲ್ಪ ಟ್ಟವರಾಗಿ ತಮ್ಮ ತಮ್ಮ ಪಟ್ಟಣಗಳಿಗೆ ತೆರಳಿದರು. ಅನಂತರದಲ್ಲಿ ಮಹಾ ತೇಜಸ್ವಿಯಾದ ಆ ಶ್ರೀಕರನೆಂಬ ಗೋಪಾಲಕನು ಹನುಮಂತನಿಂದ ಉಪದೇಶ ಮಾಡಲ್ಪಟ್ಟವನಾಗಿ ಅದೇಪ್ರಕಾರದಿಂದ ಧರ್ಮನಿಷ್ಠರಾದ ಬ್ರಾಹ್ಮಣರುಗಳೊ ಡನೆ ಶಿವಪೂಜೆಯನ್ನು ಮಾಡುತ್ತಿದ್ದು, ಆ ಚಂದ್ರಸೇನನೆಂಬ ರಾಯನೊಡನೆ

ಶಿವಸಾಯುಜ್ಯವನ್ನು ಪಡೆದನು. ಎಲೈ ಋಷಿಗಳಿರಾ ! ಕೇಳಿ, ಈ ಕಥೆಯು ವಿಚಿತ್ರವಾದುದು, ಉತ್ತಮವಾದುದು, ಗೋಪ್ಯವಾದುದು, ಪವಿತ್ರವಾದುದು, ಕೀರ್ತಿಯನ್ನುಟುಮಾಡುವಂಥದು, ಪಾಪ ಸಮೂಹಗಳನ್ನು ಪರಿಹರಿಸುವಂಥದು, ಪರಮೇಶ್ವರನಲ್ಲಿ ಭಕ್ತಿಯನ್ನು ಹೆಚ್ಚಿಸುವಂಥದೆಂದು ಸೂತಪುರಾಣಿಕನು ಶೌನಕಾದಿ ಮಹಾಮುನಿಗಳಿಗೆ ನಿರೂಪಿಸಿದನೆಂಬಲ್ಲಿಗೆ,

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರ ನರಪತಿ ಬಿರುತೆಂದೆಂಬರಗಂಡ ಶಂಖಚಕ್ರ ಮಕರ ಮತ್ಸ್ಯ ಶರಭಸಾಳ್ವ ಗಂಡಭೇರುಂಡಾದಿ ನಾನಾಬಿರುದಾಂಕಿತ ಯಾದವಕುಲತಿಲಕ ಆತ್ರೇಯ ಸಗೋತ್ರ ಅಶ್ವಲಾಯನ ಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರ ರಾಜಒಡೆಯ ಪೌತ್ರ ನರಸರಾಜ ಒಡೆಯರ ಪುತ್ರ ಶ್ರೀ ಇಮ್ಮಡಿ ಚಾಮರಾಜ ಒಡೆಯರು ಕರ್ಣಾಟಕ ಭಾಷೆಯಲ್ಲಿ ವಿರಚಿಸಿದ ಸ್ಕಂದಪುರಾಣೋಕ್ತ ಬ್ರಹ್ಮೋತ್ತರಖಂಡದಲ್ಲಿ ಪ್ರದೋಷ ವ್ರತ ಮಹಿಮೆಯಿಂದ ಚಂದ್ರಸೇನರಾಯನಿಗೂ ಶ್ರೀಕರನೆಂಬ ಗೋಪಕುಮಾರನಿಗೂ ಶಿವಸಾಯುಜ್ಯವಾದಿಲ್ಲಿಗೆ ೫ ನೆಯ ಅಧ್ಯಾಯಕ್ಕೆ ಮಂಗಳಮಸ್ತು.



ಆರನೆಯ ಅಧ್ಯಾಯ.

## ಶನಿಪ್ರದೋಷ ಮಹಿಮೆ.

ಅನಂತರದಲ್ಲಿ ಶೌನಕಾದಿಮಹಾಮುನಿಗಳು ಸೂತಪುರಾಣಿಕನನ್ನು ಕುರಿತು ಇಂತೆಂದು ಬೆಸಗೊಂಡರು.

ಎಲೈ ಸೂತಪುರಾಣಿಕನೇ ! ಕೇಳಿದ ಮಾತ್ರದಿಂದಲೆ ಸಮಸ್ತ ಪಾಪಗಳನ್ನು ಪರಿಹರಿಸುವಂಥ ಪ್ರದೋಷ ಪೂಜಾಮಹಿಮೆಯನ್ನು ಹೇಳಿದೆಯಲ್ಲ ಇನ್ನೊಂದುಸಾರಿ ನಾವು ಆ ಪ್ರದೋಷ ಪೂಜಾಮಹಿಮೆಯನ್ನೇ ಕೇಳಬೇಕೆಂದು ಇಚ್ಛೈಸುತ್ತಾ ಇದ್ದೇವೆ. ಪರಮೇಶ್ವರನು ಪ್ರದೋಷಕಾಲದಲ್ಲಿ ತನ್ನ ಪೂಜೆಯನ್ನು ಮಾಡಿದವರಿಗೆ ಯಾವ ಸಿದ್ಧಿಯನ್ನು ಕೊಡುವನು ನಮಗೆ ನಿರೂಪಿಸಬೇಕೆಂದು ಬೇಡಿಕೊಳ್ಳಲ್ಪಟ್ಟವನಾಗಿ ಸೂತಪುರಾಣಿಕನು ಶೌನಕಾದಿ ಋಷಿಗಳಿಗೆ ಇಂತೆಂದನು. ಎಲೈ ಪ್ರಸಿದ್ಧ ಜ್ಞಾನವಂತರಾದ ಮಹಾಮುನಿಗಳಿರಾ ! ನೀವು ಕೇಳಿದುದು ಬಹಳ ಒಳ್ಳೆಯದಾಯಿತು. ಇನ್ನೊಂದು ಸಲ ಪ್ರದೋಷ ಪೂಜಾ ಮಹಿಮೆಯನ್ನೇ ವಿವರಿಸಿ ಹೇಳುತ್ತೇನೆ ಕೇಳಿ. ತ್ರಯೋದಶಿ ದಿವಸದಲ್ಲಿ ಸಾಯಂ

ಕಾಲವು ಮಹಾ ಪ್ರದೋಷವೆನಿಸಿಕೊಳ್ಳುವದು. ಆಗ ಶಿವನೊಬ್ಬನೇ ಪೂಜಾ ರ್ಹನು ಆದಕಾರಣ ಇತರ ದೇವತೆಗಳನ್ನು ಪೂಜಿಸಬಾರದು, ಪ್ರದೋಷಪೂಜಾ ಫಲವನ್ನು ಹೇಳುವದಕ್ಕೆ ಬ್ರಹ್ಮಾದಿ ದೇವತೆಗಳಿಗೂ ಶಕ್ಯವಿಲ್ಲ. ಒಂದಾನೊಂದು ಸಮಯದಲ್ಲಿ ಬ್ರಹ್ಮ, ವಿಷ್ಣು, ಮೊದಲಾದ ದೇವತೆಗಳು ಬಂದು ಪರಮೇಶ್ವರ ನನ್ನು ಬೇ[illegible] ಜಗದೀಶ್ವರನಾದ ಪರಮೇಶ್ವರನನ್ನು ಕುರಿತು ಜಪತಪ ಹೋಮ ದಾನ ಪೂಜೆ ಕಥಾಶ್ರವಣ ಧ್ಯಾನಗಳನ್ನು ಯಾರು ಮಾಡುವರೋ ಅವರಿಗೆ ಧರ್ಮಾರ್ಥ ಕಾಮಮೋಕ್ಷಗಳೆಂಬ ನಾಲ್ಕು ಪುರುಷಾ ರ್ಥಗಳೂ ಸಿದ್ಧಿಯಾಗುವವು, ಅಂಥ ಆ ಪ್ರದೋಷಪೂಜೆಯು ದಾರಿದ್ರವೆಂಬ ಕತ್ತಲೆಗೆ ದೀವಿಗೆ, ದೋಷಗಳೆಂಬ ಸಮುದ್ರಕ್ಕೆ ಹಡಗು, ದುಃಖ ಭಯಗಳೆಂಬ ಅರಣ್ಯಕ್ಕೆ ಕಾಳ್ಗಿಚ್ಚು, ಬುದ್ಧಿಯಿಲ್ಲದವನಾದರು, ನೀಚನಾದರು ದುರ್ಜನ ನಾದರು ಯಾವನು ಪ್ರದೋಷಕಾಲದಲ್ಲಿ ಶಿವಪೂಜೆಯನ್ನು ಮಾಡುವನೋ ಅವನಿಗೆ ಯಾವವಿಪತ್ತುಗಳು ಸಂಭವಿಸುವದಿಲ್ಲ. ಶತ್ರುಗಳಿಂದ ಕೊಲ್ಲಲ್ಪಟ್ಟ ವನಾದರು ಸಮುದ್ರದಲ್ಲಿ ಮುಳುಗಿದವನಾದರು, ಪರ್ವತಗಳಿಂದ ಆಕ್ರಮಿಸಲ್ಪಟ್ಟ ವನಾದರು, ಯಮದಂಡದಿಂದ ಹೊಡೆಯಲ್ಪಟ್ಟವನಾದರು, ಅನೇಕ ವ್ಯಾಧಿಗ ಳಿಂದ ಬಾಧಿಸಲ್ಪಟ್ಟವನಾದರು ಪ್ರದೋಷಕಾಲದಲ್ಲಿ ಶಿವಪೂಜೆಯನ್ನು ಮಾಡಿ ದರೆ ಆ ಶಿವಪೂಜೆಯ ಮಹಿಮೆಯಿಂದ ಸರ್ವದುಃಖಗಳೂ ತೊಲಗಿಹೋಗುವವು, ಮತ್ತು ಇಂಥಾ ತ್ರಯೋದಶಿಯೂ ಶನಿವಾರವೂ ಕೂಡಿಬಂದರೆ ಅದರ ಪುಣ್ಯ ವನ್ನು ವಿವರಿಸಲು ಪುರಷೋತ್ತಮನಾದ ಮಹಾವಿಷ್ಣುವಿಗೂ ಸಹಸ್ರ ಮುಖಗ ಳುಳ್ಳ ಆದಿಶೇಷನಿಗೂ ಅಶಕ್ಯವು. ಈ ಅರ್ಥದಲ್ಲಿ ನಿಜವಾದ ಒಂದಾನೊಂದು ಇತಿಹಾಸವನ್ನು ಹೇಳುವೆನು ಕೇಳಿ ಎಂದು ಎಚ್ಚರಿಸಿ ಸೂತಪುರಾಣಿಕನು ಹೇಳತೊಡಗಿದನು.

ವಿಮರ್ಶದೇಶದಲ್ಲಿ ಸತ್ಯರಥನೆಂಬ ಒಬ್ಬ ರಾಜನಿದ್ದನು. ಆತನು ಸತ್ಯ ವಂತನು, ಧರ್ಮಿಷ್ಠನು, ಧೈರ್ಯವಂತನು, ಸದಾಚಾರ ಸಂಪನ್ನನು, ಕೀರ್ತಿವಂತನು ಹೀಗಿರುವಲ್ಲಿ ಆ ರಾಯನು ಸುಖದಿಂದ ಕೆಲವುಕಾಲ ಧರ್ಮದಿಂದ ರಾಜ್ಯಪರಿ ಪಾಲನೆಯನ್ನು ಮಾಡುತ್ತಿರುವಾಗ, ಅವನ ಶತ್ರುಗಳಾದ ದುರ್ಮರ್ಷಣಾದಿ ಸಾಳ್ವದೇಶದ ರಾಯರುಗಳು ಸ್ವಲ್ಪ ರಾಜ್ಯವುಳ್ಳವರಾದರೂ ಅಧಿಕ ಬಲವುಳ್ಳವ ರಾದಕಾರಣ ಚತುರಂಗಬಲ ಸಮೇತರಾಗಿ ಬಂದು ಆ ಸತ್ಯರಥರಾಯನ ಪಟ್ಟ ಣಕ್ಕೆ ಮುತ್ತಿಗೆ ಹಾಕಿದರು. ಆಗ ಆ ಸಾಳ್ವರಾಯನ ಸಂಗಡ ಯುದ್ಧಮಾಡುವ ದಕ್ಕೆ ತನ್ನ ಚತುರಂಗಬಲಸಮೇತನಾಗಿ ಹೊರಟವನಾಗಿ, ಆದಿಶೇಷನು ಪಾತಾಳ ಲೋಕದಲ್ಲಿ ದುಷ್ಟನಾದ ಗಂಧರ್ವನೊಡನೆ ಯುದ್ಧಮಾಡಿದ ಹಾಗೆ ಭಯಂಕರ ಮಾದ ಯುದ್ಧವನ್ನು ಮಾಡಿ, ಆ ಸಾಳ್ವರು ಮಹಾ ಪ್ರಬಲರಾದಕಾರಣ ಈತನು

ತನ್ನ ಮಂತ್ರಿಗಳೊಡನೆ ಸಾಹಸವನ್ನು ಮಾಡಿ ವೀರಸ್ವರ್ಗವನ್ನು ಪಡೆದನು. ಅನಂತರ ಮಿಕ್ಕಾದ ಭಟರು ದಿಕ್ಕು ದಿಕ್ಕಿಗೆ ಓಡಿಹೋದರು. ಈ ಪ್ರಕಾರ ಶತ್ರುರಾಜರು ಎಲ್ಲರನ್ನು ಜಯಿಸಿ, ಬಲವನ್ನು ಮುರಿದು, ಪಟ್ಟಣದ ಬಾಗಿಲಿಗೆ ಬಂದು ರಾತ್ರಿಯಲ್ಲಿ ಸಿಂಹನಾದ ಮಾಡುತ್ತಿದ್ದರು. ಆ ಕೋಲಾಹಲ ಧ್ವನಿಯನ್ನು ಕೇಳಿ ಗರ್ಭಿಣಿಯಾಗಿದ್ದ ಆ ವಿನುಶರಾಯನ ಹೆಂಡತಿಯು ಭಯಪಟ್ಟು ಒಬ್ಬಳೇ ಹೊರಟು ಒಂದಾನೊಂದು ಕಳ್ಳದಿಡ್ಡಿ ಬಾಗಿಲು ಹೊಕ್ಕು ಪಡುವಣದಿಕ್ಕಿಗೆ ಹೊರಟುಹೋದಳು. ಅವಳು ಬೆಳಗಾದಮೇಲೆ ಆ ದಾರಿಯಲ್ಲಿಯೇ ಮೆಲ್ಲಮೆಲ್ಲನೆ ಕೆಲವು ದೂರ ನಡೆದು ಹೋಗಿ, ನಿರ್ಮಲವಾದ ಒಂದು ಕೊಳವನ್ನು ಕಂಡು, ಬಿಸಲಿನಿಂದ ಬಳಲಿದವಳಾದಕಾರಣ, ಆ ಕೊಳದ ತೀರದಲ್ಲಿ ತಣ್ಣಗೆ ನೆರಳುಳ್ಳ ಒಂದು ವೃಕ್ಷವನ್ನು ಕಂಡು ಅದರ ಸಮೀಪಕ್ಕೆ ಹೋಗಿ ಬುಡದಲ್ಲಿದ್ದ ಜಗಲಿಯಮೇಲೆ ಕುಳಿತುಕೊಂಡು ಶುಭಗ್ರಹ ದೃಷ್ಟಿಯುಳ್ಳ ಸುಮುಹೂರ್ತದಲ್ಲಿ ಕುಮಾರನನ್ನು ಹೆತ್ತಳು ಆ ಬಳಿಕ ಸತ್ಯರಥನ ಹೆಂಡತಿ ಪ್ರಸವವೇದನೆಯಿಂದ ಕಂಗೆಟ್ಟು ಬಾಯಾರಿದವಳಾಗಿ ಉದಕಪಾನ ಮಾಡುವೆನೆಂದು ಆ ಕೊಳಕ್ಕಿಳಿಯಲು, ಅಲ್ಲಿದ್ದ ದೊಡ್ಡ ಮೊಸಳೆಯು ಅವಳನ್ನು ನುಂಗಿತು. ಹೀಗೆ ತಂದೆ ತಾಯಿ ಇಲ್ಲದೆ ಅನಾಥನಾದ ಆ ಮಗುವು ಹಸಿವಿನಿಂದಲೂ ಬಾಯಾರಿಕೆಯಿಂದಲೂ ಕಂಗೆಟ್ಟು ಆ ಮರದಕೆಳಗಿನ ಜಗಲಿಯಮೇಲೆ ಅಳುತ್ತಿದ್ದಿತು. ಆಗ ದಿಕ್ಕಿಲ್ಲದಕಾರಣ ಅನಾಥೆಯಾಗಿ ಮನೆಮನೆ ತಿರುಗಿ ಭಿಕ್ಷಾನ್ನವನ್ನು ಬೇಡಿ ಹೊಟ್ಟೆಹೊರೆದುಕೊಳ್ಳುತ್ತಿದ್ದ ಋಷಿ ಎಂಬ ಬ್ರಾಹ್ಮಣಸ್ತ್ರೀಯು ಒಂದು ವರ್ಷದ ತನ್ನ ಮಗನನ್ನು ಎತ್ತಿಕೊಂಡು ಆ ಮಾರ್ಗಮಧ್ಯದಲ್ಲಿ ಬರುತ್ತಾ, ದೈವಯೋಗದಿಂದ ಈ ಶಿಶುವಿನ ಧ್ವನಿಯನ್ನು ಕೇಳಿ, ಆ ವೃಕ್ಷದ ಬಳಿಗೆ ಬಂದು ಸೂರ್ಯಬಿಂಬದೋಪಾದಿಯಲ್ಲಿ ಪ್ರಕಾಶಿಸುತ್ತ, ದಿಕ್ಕಿಲ್ಲದೆ ಅಳುತ್ತಿರುವ ಆ ಬಾಲಕನನ್ನು ಕಂಡು ತನ್ನಷ್ಟಕ್ಕೆ ತಾನೆ ಹೀಗೆಂದು ಚಿಂತಿಸಿದಳು. ಶಿವಶಿವಾ ! ನಾನು ಇಂದು ಮಹತ್ತಾದ ಆಶ್ಚರ್ಯವನ್ನು ಕಂಡೆನು. ಈ ಶಿಶುವಿಗೆ ಹೊಕ್ಕಳು ಕೂಡ ಕೊಯ್ಯಲಿಲ್ಲ ಈ ಮಗುವಿನ ತಾಯಿ ಎಲ್ಲಿಗೆ ಹೋದಳೋ, ಈ ಶಿಶುವಿನ ತಂದೆ ಇದ್ದಾನೋ ಇಲ್ಲವೋ ಈ ಹುಡುಗನಿಗೆ ಒಡಹುಟ್ಟಿದವರೂ ನೆಂಟರೂ ಒಬ್ಬರೂ ಇಲ್ಲದಂತೆ ತೋರುತ್ತಿದೆ ಆದಕಾರಣ ಅನಾಥನಾಗಿ ಬರೀ ನೆಲದಲ್ಲಿ ಮಲಗಿದ್ದಾನೆ. ಇವನನ್ನು ನನ್ನ ಮಗನಹಾಗೆ ಪೋಷಿಸುವೆನೆಂದೊಡೆ, ಇದು ಬ್ರಾಹ್ಮಣ ಶಿಶುವೋ, ಕ್ಷತ್ರಿಯ ಪುತ್ರನೋ, ಶೂದ್ರ ಶಿಶುವೋ, ಚಂಡಾಲ ಶಿಶುವೋ ತಿಳಿಯಲಿಲ್ಲ ಮುಟ್ಟುವದಕ್ಕೆ ಸಂದೇಹವಾಗುತ್ತದೆಯಲ್ಲ ಎಂದು ಆಲೋಚಿಸುತ್ತಿರಲು, ಆಗ ಶಿವನೋಪಾದಿಯಲ್ಲಿ ಒಬ್ಬ ಯೋಗೀಶ್ವರನು ಅಲ್ಲಿಗೆ ಬಂದು ಆ ಬ್ರಾಹ್ಮಣ ಸ್ತ್ರೀಯನ್ನು ಕುರಿತು ಇಂತೆಂದನು.

ಎಲ್ಯೆ ಬ್ರಾಹ್ಮಣ ಸ್ತ್ರೀಯೇ! ಆ ಜಾತಿ ಈ ಜಾತಿ ಎಂಬ ಸಂಶಯವನ್ನು ಬಿಟ್ಟು ಈ ಬಾಲಕನನ್ನು ನೀನು ಪೋಷಿಸು, ಈ ಬಾಲಕನನ್ನು ಪೋಷಿಸಿದುದರಿಂದ ನಿನಗೆ ಮಹತ್ತಾದ ಶ್ರೇಯಸ್ಸು ಆಗುತ್ತದೆಂದು ನುಡಿದು ಅಂತರ್ಧಾನನಾದನು. ಬಳಿಕ ಆ ಬ್ರಾಹ್ಮಣ ಸ್ತ್ರೀಯು ಆ ಸನ್ಯಾಸಿಯ ವಾಕ್ಯದಲ್ಲಿ ವಿಶ್ವಾಸವಿಟ್ಟು, ಆ ಬಾಲಕನನ್ನು ಕರೆದುಕೊಂಡು ಏಕಚಕ್ರನಗರಕ್ಕೆ ಹೋಗಿ ಅಲ್ಲಿ ಒಂದು ಮನೆಯನ್ನು ಮಾಡಿಕೊಂಡು ತನ್ನ ಮಗನಂತೆ ಆ ರಾಜಕುಮಾರನನ್ನು ಪೋಷಿಸುತ್ತಿದ್ದಳು. ಹೀಗೆ ಬೆಳೆಯುತ್ತಿದ್ದ ಇಬ್ಬರು ಬಾಲಕರಿಗೂ ಆ ಪಟ್ಟಣದ ಬ್ರಾಹ್ಮಣರು ಆಯಾ ಕಾಲದಲ್ಲಿ ನಡೆಯಬೇಕಾದ ಜಾತಕರ್ಮ ನಾಮಕರಣ ಅನ್ನಪ್ರಾಶನ ಚೌಲೋಪನಯನ ಮೊದಲಾದ ಸಂಸ್ಕಾರಗಳನ್ನು ಮಾಡಲಾಗಿ, ಆ ಬಾಲಕರು ನಿಯಮಸ್ಥರಾಗಿ ತಾಯಿಯೊಡನೆ ಮನೆಮನೆಗೆ ಹೋಗಿ ಭಿಕ್ಷಾವನ್ನು ತಂದು ಅದರಿಂದ ಜೀವಿಸುತ್ತಿದ್ದರು. ಆ ಬಳಿಕ ಆ ಬ್ರಾಹ್ಮಣಸ್ತ್ರೀಯು ಆ ಬಾಲಕರನ್ನು ಕರೆದುಕೊಂಡು ಒಂದುದಿನ ಶಿವದರ್ಶನಾರ್ಥವಾಗಿ ದೈವಯೋಗದಿಂದ ಆ ಗ್ರಾಮದ ಶಿವಾಲಯಕ್ಕೆ ಬಂದಳು. ಆ ಸಮಯಲ್ಲಿ ಶಾಂಡಿಲ್ಯನೆಂಬ ಮಹಾಮುನಿಯು ಜ್ಞಾನವೃದ್ಧರಾದ ಬಹುಮಂದಿ ಮುನಿಗಣಸಹಿತವಾಗಿ ಅಲ್ಲಿಗೆ ಬಂದು ತಾನೂ ಆ ಶಿವದರ್ಶನವನ್ನು ಮಾಡುತ್ತಿದ್ದು ಇಬ್ಬರು ಬಾಲಕರನ್ನು ನೋಡಿ ಶಿವಶಿವಾ ದೈವಬಲವನ್ನು ಏನೆಂದು ಹೇಳಲಿ, ಕರ್ಮಗತಿಯನ್ನು ದಾಟುವುದಕ್ಕೆ ಯಾರಿಗೂ ಶಕ್ಯವಲ್ಲ. ಈ ಬಾಲಕನು ಈ ಬ್ರಾಹ್ಮಣ ಸ್ತ್ರೀಯನ್ನು ತನ್ನ ತಾಯಿಯೆಂದು ನಿಶ್ಚಯಿಸಿ ಬ್ರಾಹ್ಮಣ ಕರ್ಮವನ್ನೇ ಆಚರಿಸುತ್ತಾ ಇವಳ ಮಗನೊಡನೆ ಬಿಕ್ಷಾನ್ನವನ್ನು ಬೇಡಿತಿಂದು ಜೀವಿಸುತ್ತಿರುವನೆಂದು ನುಡಿಯಲು, ಆ ಬ್ರಾಹ್ಮಣ ಸ್ತ್ರೀಯು ಆ ಶಾಂಡಿಲ್ಯ ಮಹಾಮುನಿಯ ವಾಕ್ಯವನ್ನು ಕೇಳಿ ಆಶ್ಚರ್ಯಯುಕ್ತಳಾಗಿ ಸಭಾಮಧ್ಯದಲ್ಲಿ ಕುಳಿತಿದ್ದ ಶಾಂಡಿಲ್ಯ ಮಹಾಮುನಿಗೆ ನಮಸ್ಕರಿಸಿ ಇಂತೆಂದಳು.

ಎಲೈ ಋಷಿಶ್ರೇಷ್ಠನೇ! ನನಗೆ ಪೂರ್ವದಲ್ಲಿ ಒಬ್ಬಾನೊಬ್ಬ ಯತೀಶ್ವರನು ಈ ಬಾಲಕನನ್ನು ಪೋಷಿಸಿದರೆ ನಿನಗೆ ಶ್ರೇಯಸ್ಸಾದೀತೆಂದು ಹೇಳಿದಕಾರಣ ಆತನ ವಾಕ್ಯದಲ್ಲಿ ವಿಶ್ವಾಸವಿಟ್ಟು ನನ್ನ ಮಗನ ಹಾಗೆ ಈ ಬಾಲಕನನ್ನೂ ಪೋಷಿಸುತ್ತಿದ್ದೇನೆ. ಇದುವರೆಗೂ ಇವನ ಕುಲಗೋತ್ರಂಗಳು ನನಗೆ ತಿಳಿಯದು. ಇವನ ಕುಲವಾವುದು? ಇವನ ತಂದೆ ತಾಯಿಗಳು ಯಾರು? ಜ್ಞಾನದೃಷ್ಟಿ ಸಂಪನ್ನನಾದ ನೀನು ಇದೆಲ್ಲವನ್ನೂ ನನಗೆ ತಿಳಿಸಬೇಕೆಂದು ಬೇಡಿಕೊಳ್ಳಲಾಗಿ ಆ ಶಾಂಡಿಲ್ಯ ಮಹಾಮುನಿಯು ಆ ಬ್ರಾಹ್ಮಣ ಸ್ತ್ರೀಗೆ ಆ ಬಾಲಕನ ವೃತ್ತಾಂತವನ್ನು ಹೇಳುತ್ತಿದ್ದನು.

ಎಲೈ ಬ್ರಾಹ್ಮಣ ಸ್ತ್ರೀಯೇ! ನೀನು ಕೇಳಿದ ಬಾಲಕನ ವೃತ್ತಾಂತವನ್ನು ವಿವರಿಸಿ ಹೇಳುವೆನು ಕೇಳು! ಇವನು ಕ್ಷತ್ರಿಯಜಾತಿಯಲ್ಲಿ ಹುಟ್ಟಿದ ವಿಮರ್ಶ ದೇಶಾಧೀಶ್ವರನಾದ ಸತ್ಯರಥನೆಂಬ ರಾಯನ ಮಗನು. ಇವನ ತಂದೆಯು ಯುದ್ಧದಲ್ಲಿ ಪ್ರಬಲರಾದ ಶತ್ರುಗಳಿಂದ ಸಂಹರಿಸಲ್ಪಟ್ಟನು, ಇವನ ತಾಯಿ ಯನ್ನು ಕೊಳದಲ್ಲಿದ್ದ ಮೊಸಳೆ ನುಂಗಿತೆಂದು ಹೇಳಲಾಗಿ ಅದನ್ನು ಕೇಳಿ ಆಶ್ಚರ್ಯ ಪಟ್ಟು ಆ ಬ್ರಾಹ್ಮಣ ಸ್ತ್ರೀಯು ಮತ್ತೆ ಇಂತೆಂದಳು.

ಎಲೈ ಮಹಾಮುನಿಯೇ! ಇವನ ತಂದೆಯಾದ ಸತ್ಯರಥನು ಸಕಲವಾದ ಭೋಗ ಭಾಗ್ಯಂಗಳನ್ನು ಅನುಭವಿಸುವ ಕಾಲದಲ್ಲಿಯೇ ಏನುಕಾರಣ ಶತ್ರು ಗಳಿಂದ ಯುದ್ಧದಲ್ಲಿ ಕೊಲ್ಲಲ್ಪಟ್ಟನು. ಇವನ ತಾಯಿಯನ್ನು ಏನುಕಾರಣ ನೆಗಳು ನುಂಗಿತು. ಇವನಿಗೆ ಹುಟ್ಟಿದಾಗಲೇ ಮಾತೃವಿಯೋಗವಾಗಲು ಕಾರಣ ವೇನು. ಇವನಿಗೆ ಏತಕ್ಕಾಗಿ ಈ ದಾರಿದ್ರ್ಯ ಬಂದಿತು, ಈ ದಾರಿದ್ರ್ಯವನ್ನು ಪರಿಹರಿಸಿಕೊಂಡು ಇವನು ಎಂದಿಗೆ ರಾಜ್ಯವನ್ನು ಪಡೆದಾನು. ಭಿಕ್ಷಾನ್ನದಿಂದ ಜೀವಿಸುತ್ತಿರುವ ನನ್ನ ಮಗನ ದಾರಿದ್ರ್ಯ ಎಂದಿಗೆ ಹೋದೀತು ಇದೆಲ್ಲವನ್ನೂ ನನಗೆ ನಿರೂಪಿಸಬೇಕೆಂದು ಪ್ರಾರ್ಥಿಸಲಾಗಿ, ಆ ಶಾಂಡಿಲ್ಯ ಮುಹಾಮುನಿಯು ಅವಳನ್ನು ಕುರಿತು ಮತ್ತಿಂತೆಂದನು.

ಕೇಳೌ ಬ್ರಾಹ್ಮಣ ಸ್ತ್ರೀಯೇ! ಇವನ ತಂದೆಯಾದ ಸತ್ಯರಥನೆಂಬ ರಾಯನು ಪೂರ್ವ ಜನ್ಮದಲ್ಲಿ ಸಮಸ್ತ ಧರ್ಮಗಳನ್ನು ಬಲ್ಲವನಾಗಿ ಪಾಂಡ್ಯ ದೇಶವನ್ನಾಳುತ್ತಿದ್ದು ಒಂದಾನೊಂದು ಶನಿವಾರ ಪ್ರದೋಷಕಾಲದಲ್ಲಿ ಮೂರು ಲೋಕಗಳಿಗೂ ಒಡೆಯನಾದ ಪರಮೇಶ್ವರನನ್ನು ಪೂಜಿಸುತ್ತಿದ್ದಾಗ ಆ ಪಟ್ಟಣ ವನ್ನು ಶತ್ರುಗಳು ಮುತ್ತಿ ಕೋಲಾಹಲ ಮಾಡುತ್ತಿದ್ದರು, ಆ ಧ್ವನಿಯನ್ನು ಕೇಳಿ ಆ ರಾಯನು ಶಿವಪೂಜೆಯನ್ನು ಬಿಟ್ಟು ತನ್ನ ಪಟ್ಟಣವೇನಾಯಿತೋ ಎಂದು ಸಂಶಯಪಟ್ಟು ಅರಮನೆಯಿಂದ ಹೊರಟು ಬಂದು ಪರಾಕ್ರಮ ಸಂಪನ್ನನಾದ ತನ್ನ ಪ್ರಧಾನಶತ್ರುವಾದ ಸಾಮಂತರಾಯನನ್ನು ಕೈ ಸೆರೆಯಾಗಿ ಹಿಡಿದುಕೊಂಡು ಬರಲು, ಸೆರೆಯಾಗಿ ಸಿಕ್ಕಿದ ಸಾಮಂತರಾಯನನ್ನು ಕರೆದು ಕೋಪದಿಂದ ಅವನ ಶಿರಚ್ಛೇದನವನ್ನು ಮಾಡಿ ಆ ಶಿವಪೂಜೆಯನ್ನು ಪೂರೈಸದೆ ರಾತ್ರಿಯಲ್ಲಿ ಭೋಜನ ಮಾಡಿದಕಾರಣ ಈ ಜನ್ಮದಲ್ಲಿ ಭೋಗಭಾಗ್ಯಗಳನ್ನನುಭವಿಸುವ ಕಾಲದಲ್ಲಿಯೇ ಶತ್ರುಗಳಿಂದ ಸಂಹರಿಸಲ್ಪಟ್ಟನು. ಈ ಬಾಲಕನು ಪೂರ್ವಜನ್ಮದಲ್ಲಿ ಆ ವಿಮರ್ಶ ರಾಯನಿಗೆ ಪುತ್ರನಾಗಿ ಹುಟ್ಟಿ ಪ್ರದೋಷಕಾಲದಲ್ಲಿ ಶಿವಪೂಜೆಯನ್ನು ಮಾಡದೆ ಮಲಗಿ ನಿದ್ರಿಸಿದನು. ಆದುದರಿಂದ ಈ ಜನ್ಮದಲ್ಲಿ ಆತನ ಕುಮಾರನಾಗಿ ಜನಿ ಸಿದರೂ ಹುಟ್ಟಿದಾಗಲೇ ಮಾತೃವಿಯೋಗವನ್ನು ಪಡೆದನು. ಇವನ ತಾಯಿ

ಪೂರ್ವಜನ್ಮದಲ್ಲಿ ಕೋಪದಿಂದ ತನ್ನ ಗಂಡನನ್ನು ಕೊಂದಿದ್ದಕಾರಣ, ಈ ಜನ್ಮದಲ್ಲಿ ಆವಳನ್ನು ಮೊಸಳೆ ನುಂಗಿತು, ಇದು ಇವರ ವೃತ್ತಾಂತ, ಆದು ಕಾರಣ ಶಿವಪೂಜೆ ಮಾಡುವವರು ಸ್ಥಿರವಾದ ಭಕ್ತಿಯಿಂದ ಇರಬೇಕು. ಅಪಾರವಾದ ಸಂಸಾರದಲ್ಲಿ ಇರುವ ಮನುಷ್ಯರಿಗೆ ಪರಮೇಶ್ವರನ ಪೂಜೆಯೇ ಸಾರಭೂತವಾದದ್ದು. ಈ ಅರ್ಥವು ನಿಜವೆ ಹೊರತು ಸುಳ್ಳಲ್ಲ, ಲೋಕಕ್ಕೆ ಪರಮ ಹಿತವಾದದ್ದು, ಸಕಲ ಉಪನಿಷತ್ತುಗಳ ಸಾರಸಹಿತವಾದದ್ದು. ಯಾರು ಪ್ರದೋಷಕಾಲದಲ್ಲಿ ಶಿವಪೂಜೆಯನ್ನು ಮಾಡದೇ ಇತರರು ಮಾಡುವ ಶಿವ ಪೂಜೆಯನ್ನಾದರೂ ಭಕ್ತಿಯಿಂದ ನೋಡದೆ ಇರುವರೋ ಮತ್ತೆ ಯಾರು ಶ್ರದ್ಧೆಯಿಂದ ಶಿವಕಥೆಯನ್ನು ಕೇಳದೇ ಇರುವರೋ ಅವರೆಲ್ಲರೂ ಜನ್ಮಜನ್ಮಾಂತರಗಳಲ್ಲಿಯೂ ದರಿದ್ರರಾಗಿ ಹುಟ್ಟುವರು.

ಮತ್ತೆ ಯಾರು ಶನಿಪ್ರದೋಷಕಾಲದಲ್ಲಿ ಮತ್ತೊಂದು ಚಿಂತೆಯಿಲ್ಲದೆ, ಪರಮೇಶ್ವರನ ಪಾದಕಮಲವನ್ನು ನಂಬಿ ಪೂಜೆಮಾಡುವರೋ ಅವರು ಮೂರು ಜನ್ಮ ಪರಿಯಂತವೂ ಪುತ್ರ ಪೌತ್ರ ಕಳತ್ರ ಧನ ಧಾನ್ಯ ಸಮೃದ್ಧರಾಗಿ ಇಹದಲ್ಲಿ ದೊಡ್ಡವರೆನಿಸಿಕೊಂಡು ಸುಖದಿಂದ ಬದುಕುವರು. ಶನಿಪ್ರದೋಷಕಾಲದಲ್ಲಿ ಪರಮೇಶ್ವರನು ಕೈಲಾಸ ಪರ್ವತದಲ್ಲಿ ಜಗನ್ಮಾತೆಯಾದ ಪಾರ್ವತೀದೇವಿಯೊಡನೆ ರತ್ನಖಚಿತವಾದ ಸಿಂಹಾಸನದಮೇಲೆ ಕುಳಿತವನಾಗಿ ನಾಟ್ಯವನ್ನು ಆಡುತ್ತಿರುವನು. ಆ ಸಮಯದಲ್ಲಿ ಸರಸ್ವತಿಯು ವೀಣೆಯನ್ನು ನುಡಿಸುತ್ತಿರುವಳು, ದೇವೇಂದ್ರನು ವೇಣುವನ್ನೂದುತ್ತಿರುವನು, ಬ್ರಹ್ಮದೇವನು ತಾಳವನ್ನು ಬಾರಿಸುತ್ತಿರುವನು, ವಿಷ್ಣುವು ಮದ್ದಳೆಯನ್ನು ಹೊಡೆಯುತ್ತಿರುವನು, ಲಕ್ಷ್ಮೀದೇವಿಯು ಗಾನ ಮಾಡುತ್ತಿರುವಳು. ಬಳಿಕ ಗಂಧರ್ವ ಯಕ್ಷ ಋಷಿಗಳೂ, ಸೂರ್ಯ ಚಂದ್ರಾದಿ ಗ್ರಹಗಳು ಸಿದ್ಧ ಸಾಧ್ಯ ಚಾರಣ ಕಿನ್ನರ ಕಿಂಪುರುಷ ವಿದ್ಯಾಧರಾದಿ ಅಪ್ಸರಸ್ತ್ರೀಯರೂ ಸರ್ಪ, ಪಕ್ಷಿ, ಶಾಕಿನಿ, ಢಾಕಿನಿ ಮೊದಲಾದ ಭೂತಗಳೂ, ಲೋಕಾಂತರದಲ್ಲಿರುವ ಜನರು ತಮತಮಗೆ ಯೋಗ್ಯವಾದ ಊಳಿಗಂಗಳನ್ನು ಮಾಡುತ್ತಾ ಶಿವನನ್ನು ಸೇವಿಸುತ್ತಿರುವರು. ಆದಕಾರಣ ಪ್ರದೋಷ ಕಾಲದಲ್ಲಿ ಶಿವನೊಬ್ಬನೆ ಪೂಜಾಯೋಗ್ಯನು. ಆ ಕಾಲದಲ್ಲಿ ಮಿಕ್ಕಾದ ದೇವತೆಗಳು ಪೂಜೆಗೆ ಯೋಗ್ಯರಲ್ಲ, ಪರಮೇಶ್ವರನ ಪೂಜೆಯಿಂದಲೇ ಸಮಸ್ತ ದೇವತೆಗಳು ಪ್ರಸನ್ನರಾಗುವರು, ಈ ನಿನ್ನ ಕುಮಾರನು ಹಿಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿ ಹುಟ್ಟಿ ದುರ್ದಾನ ಪ್ರತಿಗ್ರಹ ಮಾಡಿ ಧನವನ್ನು ಸಂಪಾದಿಸಿ ಅದಕ್ಕೆ ಯೋಗ್ಯವಾದ ಧರ್ಮವನ್ನು ಮಾಡದಿದ್ದ ಕಾರಣ ಈಗ ದರಿದ್ರನಾದನು, ಆದ ಕಾರಣದಿಂದ ಈಗ ನೀನು ನಿನ್ನ ಮಗನಿಂದಲೂ ಈ ರಾಜಕುಮಾರನಿಂದಲೂ ಶಿವಪೂಜೆಯನ್ನು ಮಾಡಿಸಿದರೆ ಇವರ ದಾರಿದ್ರ್ಯವು ಹೋಗುವದೆಂದು ಶಾಂಡಿಲ್ಯ

ಮಹಾಮುನಿ ನುಡಿದನೆಂದು ಈ ಸೂತಪುರಾಣೀಕನು ಶೌನಕಾದಿ ಋಷಿಗಳಿಗೆ ನಿರೂಪಿಸಿದನು.

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮವೀರ
ನರಪತಿ ಬಿರುದೆಂತೆಂಬರ ಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ
ಗಂಡಭೇರುಂಡಾದಿ ನಾನಾ ಬಿರುದಾಂಕಿತ ಯಾದವಕುಲತಿಲಕ ಆತ್ರೇಯ
ಸಗೋತ್ರ ಅಶ್ವಲಾಯನಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರ
ರಾಜಒಡೆಯರ ಪೌತ್ರ ನರಸರಾಜಒಡೆಯರ ಪುತ್ರರಾದ ಶ್ರೀಇಮ್ಮಡಿ
ಚಾಮರಾಜ ಒಡೆಯರವರು ಕರ್ಣಾಟಕ ಭಾಷೆಯಲ್ಲಿ ವಿರಚಿಸಿದ
ಸ್ಕಾಂದಪುರಾಣೋಕ್ತವಾದ ಬ್ರಹ್ಮೋತ್ತರಖಂಡದಲ್ಲಿ ಶಾಂಡಿಲ್ಯ
ಮಹಾಮುನಿಯು ಬ್ರಾಹ್ಮಣಸ್ತ್ರೀಗೆ ಬೋಧಿಸಿದ ಶನಿ
ಪ್ರದೋಷ ಪೂಜಾ ಮಹಿಮೆಯನ್ನು ಪೇಳ್ದಲ್ಲಿಗೆ
೭ನೆಯ ಅಧ್ಯಾಯಕ್ಕೆ ಮಂಗಳಮಸ್ತು.



## ಶನಿಪ್ರದೋಷ ಮಹಿಮೆ.

### ಎಂಟನೆಯ ಅಧ್ಯಾಯ.

ಬಳಿಕ ಸೂತಪುರಾಣಿಕನು ಶೌನಕಾದಿ ಮಹಾಮುನಿಗಳನ್ನು ಕುರಿತು ಮತ್ತೆ ಇಂತೆಂದನು.

ಎಲೈ ಶೌನಕಾದಿ ಮಹಾಮುನಿಗಳಿರಾ! ಹೀಗೆ ಶಾಂಡಿಲ್ಯ ಮಹಾಮುನಿಯಿಂದ ರಾಜಕುಮಾರನ ವೃತ್ತಾಂತವನ್ನು ಕೇಳಿದ ಆ ಬ್ರಾಹ್ಮಣ ಸ್ತ್ರೀಯು ಶಾಂಡಿಲ್ಯ ಋಷಿಗೆ ನಮಸ್ಕಾರವನ್ನುಮಾಡಿ ಶನಿಪ್ರದೋಷಕಾಲದಲ್ಲಿ ಮಾಡುವ ಪೂಜೆಯಕ್ರಮವನ್ನು ಹೇಳಬೇಕೆಂದು ಕೇಳಲು ಆ ಬ್ರಾಹ್ಮಣ ಸ್ತ್ರೀಯನ್ನು ಕುರಿತು ಋಷಿಯು ಇಂತೆಂದು ನಿರೂಪಿಸಿದನು.

ಎಲೌ ಬ್ರಾಹ್ಮಣ ಸ್ತ್ರೀಯೇ! ಕ್ರಮವಾದ ಶಿವಪೂಜಾವಿಧಾನವನ್ನು ಹೇಳುವೆನು ಕೇಳು. ಶುಕ್ಲಪಕ್ಷ ಕೃಷ್ಣಪಕ್ಷಗಳೆರಡರಲ್ಲಿಯು ತ್ರಯೋದಶಿಯ ದಿನ ಹಗಲು ಉಪವಾಸ ಮಾಡಿ ಸೂರ್ಯಾಸ್ತಮಯಕಾಲಕ್ಕೆ ಮೂರುಘಳಿಗೆ ಮುಂಚಿತವಾಗಿ ಸ್ನಾನಮಾಡಿ ಶುಭ್ರವಾದ ಮಡಿಯನ್ನು ಧರಿಸಿಕೊಂಡು ನೀಚರೊಡನೆ ಸಂಭಾಷಣೆಯನ್ನು ಮಾಡದೆ ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮಾಡಿ ಶಿವಪೂಜೆಯನ್ನು ಆರಂಭಿಸಿ ಪರಿಶುದ್ಧವಾದ ಪ್ರದೇಶದಲ್ಲಿ ಗೋಮಯದಿಂದ ಸಾರಿಸಿ, ನಾಲ್ಕು ಸ್ತಂಭಗಳುಳ್ಳ ಮಂಟಪವನ್ನು ಕಟ್ಟಿ ಅದನ್ನು

ತೋರಣ ಮೇಲ್ಕಟ್ಟುಗಳಿಂದಲು ಫಲಪುಷ್ಪಗಳಿಂದಲು ಅಲಂಕರಿಸಿ, ಆ ಮಂಟಪದಲ್ಲಿ ಹಳದಿ, ಹಸರು, ಬಿಳುಪು, ಕಪ್ಪು, ಕೆಂಪು ಬಣ್ಣಗಳಿಂದ ಅಷ್ಟದಳಪದ್ಮವನ್ನು ಬರೆದು ಪೀಠವನ್ನು ಹಾಕಿ, ಆ ಪೀಠಮಧ್ಯದಲ್ಲಿ ಪಾರ್ವತೀಪರಮೇಶ್ವರರ ವಿಗ್ರಹಗಳನ್ನು ಇಟ್ಟುಕೊಂಡು ತಾನು ಅದರ ಮುಂದುಗಡೆ ಮತ್ತೊಂದು ಮಣೆಯಮೇಲೆ ಕುಳಿತು ತನ್ನ ಬಲಗಡೆಯಲ್ಲಿ ಅರ್ಘ್ಯೋದಕದ ಕಲಶ ಎಡಗಡೆಯಲ್ಲಿ ಘಂಟೆ, ಮುಂದುಗಡೆಯಲ್ಲಿ ಪಂಚಪಾತ್ರೆಗಳು, ಅದರ ಮುಂದುಗಡೆಯಲ್ಲಿ ಶಂಖ, ತನ್ನ ಬಲಗಡೆಯಲ್ಲಿ ಏಕಾರ್ತಿ, ಪಂಚಾರ್ತಿ, ನಾಗಾರ್ತಿ, ಧೂಪಾರ್ತಿ, ದೀಪಾರ್ತಿ ಮೊದಲಾದ ಪೂಜೋಪಕರಣಗಳನ್ನು ತಂದಿಟ್ಟುಕೊಂಡು, ರೇಚಕ ಪೂರಕ, ಕುಂಭಕಂಗಳಿಂದ ಪ್ರಾಣಾಯಾಮದೊಡನೆ ಸಂಕಲ್ಪಮಾಡಿ ಪೂಜಾವಿಘ್ನಕಾರಿಗಳಾದ ಭೂತಗಳನ್ನು ಆಗಮೋಕ್ತ ಮಂತ್ರಗಳಿಂದಲೂ ಕೂರ್ಮಾದಿ ಯಂತ್ರಗಳಿಂದಲು, ಉಚ್ಚಾಟನೆಮಾಡಿ ಅನಂತರ ತನ್ನ ದೇಹದ ಎಡಭಾಗದಲ್ಲಿರುವ ಪಾಪಪುರುಷನನ್ನು ಮೂರ್ತಿಮತ್ತಾಗಿ ಧ್ಯಾನಿಸಿ ವಾಯುವಿನಿಂದ ಒಣಗಿದ ಹಾಗೂ ಜಠರಾಗ್ನಿಯಿಂದ ಸುಡಲ್ಪಟ್ಟ ಹಾಗೆಯೂ ಭಾವಿಸಿ ದೇಹವನ್ನು ಅಮೃತದಲ್ಲಿ ನೆನಸಿದ ಹಾಗೆ ಭಾವಿಸಿ, ಐವತ್ತೊಂದು ಮಂತ್ರಗಳನ್ನು ಅವಯವಗಳಲ್ಲಿ ಅಳವಡಿಸಿ ಸ್ಥಾನವನ್ನು ಮಾಡಿಕೊಂಡು ತನ್ನ ಎಡಭಾಗದಲ್ಲಿ ಗುರುನಮಸ್ಕಾರವನ್ನು ಮಾಡಿ, ಬಲಭಾಗದಲ್ಲಿ ವಿಘ್ನೇಶ್ವರನಂ ಪೂಜಿಸಿ ತನ್ನ ಭುಜಗಳು, ತೊಡೆಗಳು, ಮುಖ, ಹೊಕ್ಕಳು ಪಾರ್ಶ್ವಗಳೆಂಬ ಈ ಎಂಟರಲ್ಲಿಯೂ ಕ್ರಮವಾಗಿ ಧರ್ಮ ಜ್ಞಾನ ವೈರಾಗ್ಯೈಶ್ವರ್ಯ ಅಧರ್ಮಾಜ್ಞಾನಾ ವೈರಾಗ್ಯಾನೈಶ್ವರ್ಯಗಳೆಂಬ ಎಂಟುಮಂದಿ ದೇವತೆಗಳನ್ನು ಭಾವಿಸಿ, ತನ್ನ ಹೃದಯಕಮಲದ ಕರ್ಣಿಕಾ ಪೀಠದಲ್ಲಿ ಆಧಾರಶಕ್ತಿ, ಅದರಮೇಲೆ ಮೂಲಪ್ರಕೃತಿ, ಅದರಮೇಲೆ ಮಹಾಮಂಡೂಕ, ಅದರಮೇಲೆ ಆದಿವರಾಹ, ಅದರಮೇಲೆ ಶೇಷ, ಆತನಮೇಲೆ ಭೂಮಿ, ಅದರಮೇಲೆ ಅಮೃತಸಮುದ್ರ, ಅದರಲ್ಲಿ ರತ್ನದ್ವೀಪ, ಅದರಲ್ಲಿ ರತ್ನ ಮಂಟಪ, ಅದರ ಮಧ್ಯದಲ್ಲಿ ರತ್ನದ ಜಗುಲಿ, ಅದರಮೇಲೆ ಶ್ವೇತಛತ್ರ, ಉಭಯಪಾರ್ಶ್ವಗಳಲ್ಲಿಯೂ ಚಾಮರಗಳು ಸುತ್ತಲೂ ಮಂದಾರ ಪಾರಿಜಾತ ಸಂತಾನಕಲ್ಪವೃಕ್ಷ ಹರಿಚಂದನ ತರುಗಳು, ಛತ್ರದ ನೆರಳಿನಲ್ಲಿ ತಾವರೆದಂಟು, ಅದರಮೇಲೆ ಕಾಂಡ, ಅದರಮೇಲೆ ಅಷ್ಟದಳಪದ್ಮ ಅದರಮೇಲೆ ಕರ್ಣಿಕೆ, ಅದರಮೇಲೆ ರತ್ನಸಿಂಹಾಸನ, ಅದರಮೇಲೆ ದ್ವಾದಶದಳಾತ್ಮಕವಾದ ಸೂರ್ಯ ಮಂಡಲ, ಅದರಮೇಲೆ ಷೋಡಶದಳಾತ್ಮಕವಾದ ಚಂದ್ರಮಂಡಲ, ಅದರ ಮೇಲೆ ದಶದಳಾತ್ಮಕವಾದ ಅಗ್ನಿಮಂಡಲ, ಅದರಮೇಲೆ ಸತ್ವರಜಸ್ತಮೋಗುಣಗಳು, ಅದರಮೇಲೆ ಮಾಯಾಶಕ್ತಿಯು, ಸಿಂಹಾಸನದ ನಾಲ್ಕು ದಿಕ್ಕುಗಳಲ್ಲಿಯೂ ಆತ್ಮಾಂತರಾತ್ಮ ಪರಮಾತ್ಮ ಜ್ಞಾನಾತ್ಮರುಗಳು, ಆ ಸಿಂಹಾಸನದ

ಅಷ್ಟದಿಕ್ಕುಗಳಲ್ಲಿಯೂ ವಾಮೆಯು, ಜ್ಯೇಷ್ಠೆಯು, ರೌದ್ರಿಯು, ಕಾಳಿಯು, ಕಲವಿಕರಣೆಯು, ಬಲವಿಕರಣಿಯು, ಬಲಪ್ರಮಥನೆಯು, ಸರ್ವಭೂತದಮನೆ ಎಂಬ ಅಷ್ಟಶಕ್ತಿಗಳನ್ನು ಧ್ಯಾನಿಸಿ ಮಧ್ಯದಲ್ಲಿ ಮನೋನ್ಮನಿಯೆಂಬ ಶಕ್ತಿಯನ್ನು ಭಾವಿಸಬೇಕು.

ಈ ಪ್ರಕರ ಹೃದಯಕಮಲದೊಳು ಭಾವಿಸಿ ದಹರಾಕಾಶ ಮಧ್ಯದಲ್ಲಿ ರತ್ನಸಿಂಹಾಸನದಮೇಲೆ ಕೋಟಿ ಚಂದ್ರರಿಗೆ ಸಮಾನವಾದ ಕಾಂತಿಯುಳ್ಳಂಥಾ ಚಂದ್ರಶೇಖರನಾದಂಥಾ ಹೊಂಬಣ್ಣವಾದ ಜಡೆಗಳುಳ್ಳಂಥಾ ಜಡೆಯಲ್ಲಿ ಗಂಗೆಯನ್ನು ತಾಳ್ದಂಥಾ ರತ್ನಖಚಿತವಾದ ಕಿರೀಟವನ್ನು ಧರಿಸಿದಂಥಾ ಆ ಕೀರೀಟದ ಮೇಲೆ ಆದಿಶೇಷನ ಪಾದಹೆಡೆಗಳಿಂದ ಸೇವಿಸಲ್ಪಟ್ಟಂಥಾ ಅಷ್ಟಮಿ ಚಂದ್ರನಿಗೆ ಸಮಾನವಾದ ಹಣೆವುಳ್ಳಂಥಾ ಸತ್ವರಜಸ್ತಮೋಗುಣಗಳೋಪಾದಿಯಲ್ಲಿ ತ್ರಿಪುಂಡ್ರವನ್ನು ಧರಿಸಿದಂಥಾ ಚಂದ್ರಸೂರ್ಯಾಗ್ನಿ ಸಮಾನಗಳಾದ ನೇತ್ರಗಳುಳ್ಳಂಥಾ ವಿಷ್ಣು ಚಕ್ರದೋಪಾದಿಯಲ್ಲಿರುವ ಕಿವಿಗಳುಳ್ಳಂಥಾ ಮಾಯಾಶಕ್ತಿ ಪ್ರತಿಫಲಿತವಾದ ಕನ್ನಡಿಯೋಪಾದಿಯಲ್ಲಿರುವ ಕಪೋಲಭಾಗವುಳ್ಳಂಥಾ ಅನಾದಿ ಸಂಸ್ಕಾರದೋಪಾದಿಯಲ್ಲಿ ಉನ್ನತವಾದ ಮೂಗುಳ್ಳಂಥಾ ಸಕಲಾವಯವ ಭೂಷಣಗಳಾದ ಸರ್ಪಗಳ ರತ್ನಕಾಂತಿ ಖನೀಭೂತವಾದ ಸಮೂಹದೋಪಾದಿಯಲ್ಲಿರುವ ತುಟಿಗಳುಳ್ಳಂಥಾ ಶಿರೋ ಭೂಷಣವಾಗಿಯು ಹಣೆಯೆಂಬ ವ್ಯಾಜವುಳ್ಳವನಾಗಿಯೂ ಇರುವ ಎರಡು ಚಂದ್ರಗಳ ದ್ವಾತ್ರಿಂಶತ್ಕಳೆಗಳೋ ಎಂಬಂತೆ ಪ್ರಕಾಶಿಸುತ್ತಿರುವ ದಂತಪಂಗ್ತಿಗಳುಳ್ಳಂಥಾ ಆಶ್ರಿತರಾದ ಸಕಲ ಜನರ ಬಹಿಷ್ಕೃತವಾದ ಪಾಪ ಸಮೂಹದೋಪಾದಿಯಲ್ಲಿ ಕಪ್ಪಾದ ಕಂಠವುಳ್ಳಂಥಾ ಅನೇಕ ದಿನಗಳಿಂದ ತನ್ನನ್ನು ಜಯಿಸಿದ ಚಂದ್ರನನ್ನು ಜಯಿಸಬೇಕೆಂದು ಪರಮೇಶ್ವರನ ಆಶ್ರಯವನ್ನು ಮಾಡುತ್ತಿರುವ ಅಂಧಕಾರದ ಸಮೂಹದೋಪಾದಿಯಲ್ಲಿರುವ ಶತ್ರುಗಳಿಂದ ವ್ಯಾಪ್ತನಾದಂಥಾ ಮನ್ಮಥನಿಂದೇರಿಸಿದ ಧನುಸ್ಸುಗಳಂತಿರುವ ಕಣ್ಣುಹುಬ್ಬುಗಳುಳ್ಳ ಮೀನಧ್ವಜನಾದ ಮನ್ಮಥನನ್ನು ಗೆದ್ದಮೇಲೆ ತನ್ನನ್ನು ಆಶ್ರಯಿಸಿದ ಮೀನುಗಳೋಪಾದಿಯಲ್ಲಿರುವ ಕಣ್ಣುಗಳುಳ್ಳ ವರದಾಭಯಜ್ಞಾನ ಕಪಾಲಚಿಹ್ನೆಗಳಿಂದ ಕೂಡಿದ ಹಸ್ತಗಳಿಂದ ಮೋಕ್ಷ ವೈರಾಗ್ಯ ಧರ್ಮಾರ್ಥಸಿದ್ಧಿಗಳನ್ನು ಕೊಡುವೆನೆಂದು ಪ್ರಕಟಿಸುವಂಥ ಪಂಚವಿಂಶತಿ ತತ್ವಸ್ಯೂತವಾದ ಹಾರಗಳಿಂದ ಪ್ರಕಾಶಿಸುತ್ತಿರುವ ಕೊರಳುಳ್ಳಂಥಾ ಸಕಲ ಜಗನ್ಮೋಹಿನಿಯಾದ ಮಾಯೆಯು ಆಶ್ರಮದೋಪಾದಿಯಲ್ಲಿ ವಿಸ್ತಾರವಾದ ವಕ್ಷಸ್ಥಳವುಳ್ಳಂಥಾ ಪ್ರತ್ಯಪಾಷಾಣಭಿನ್ನವಾದ ಸರ್ಪಮಯಗಳಾದ ಕಟಕಾದ್ಯಾಭರಣಗಳುಳ್ಳಂಥಾ ವ್ಯಾಘ್ರಚರ್ಮವನ್ನು ಧರಿಸಿ ಸರ್ವ ಸಂಸಾರಭಯವನ್ನು

ಹೋಗಲಾಡಿಸುವೆನೆಂದೆಲ್ಲರಿಗು ತಿಳಿಯಪಡಿಸುತ್ತಿರುವಂಥಾ ಸಕಲ ಜಗಜ್ಜನನಿಯಾದ ಪಾರ್ವತಿಯು ನಿಮಿತ್ತ ವಾಹನದ ಸಿಂಹದೋಪಾದಿಯಲ್ಲಿ ಪ್ರಕಾಶಿಸುತ್ತಿರುವ ಮಧ್ಯಪ್ರದೇಶವುಳ್ಳ ಅಸಂಭಾವನ ವಿಪರೀತ ಭಾವನೆಗಳಂತೆ ಶ್ರವಣಾನಂತರದಲ್ಲಿಯು ಅನಿರ್ವಚನೀಯವಾದ ಊರ್ಧ್ವಾದ್ಯಧೋಭಾಗವುಳ್ಳ ಪರಮೇಶ್ವರ ಸನ್ನಿಧಾನದಲ್ಲಿ, ಆ ಜಗದೀಶ್ವರನ ವಾಮಭಾಗದ ರತ್ನ ಸಿಂಹಾಸನದಮೇಲೆ ಮಂಡಿಸಿ ದಾಸವಾಳದ ಹುಷ್ಪಿಗೂ ಮಿಂಚುಗಳಿಗೂ ಸೂರ್ಯನಿಗೂ ಸಮಾನವಾದ ಕಾಂತಿಯುಳ್ಳ ಮನಸ್ಸಿಗೂ ಕಣ್ಣುಗಳಿಗೂ ಇಂಪಾದ ರೂಪವುಳ್ಳ ಶಿರಸ್ಸಿನಲ್ಲಿ ಬಾಲಚಂದ್ರನನ್ನು ಧರಿಸಿದಂಥಾ, ನುಣುಪಾಗಿ ಕಪ್ಪಗಿರುವ ವಕ್ರವಾದ ಕುರುಳಗಳುಳ್ಳ ಮಣಿಮಯ ಕುಂಡಲಗಳಿಂದ ಪ್ರಕಾಶವಾದ ಮುಖವುಳ್ಳ ಕನ್ನಡಿಯೋಪಾದಿಯಲ್ಲೊಪ್ಪುತ್ತಿರುವ ಕಪೋಲಗಳುಳ್ಳ ಮುಗುಳುನಗೆಯಿಂದ ಮನೋಹರವಾದ ಅತಿ ಕೆಂಪಾದ ಅದರವುಳ್ಳಂಥಾ ಬಲಮುರಿ ಶಂಖಕ್ಕೆ ಸಮಾನವಾದ ಕೊರಳುಳ್ಳಂಥಾ, ಹವಳಗಳೋಪಾದಿಯಲ್ಲಿರುವ ದಂತಪಂಗ್ತಿಗಳುಳ್ಳಂಥಾ, ತಾವರೆಮೊಗ್ಗುಗಳಿಗೆ ಸಮಾನವಾದ ಕುಚಗಳುಳ್ಳಂಥಾ, ಪಾಶಾಂಕುಶ ಕಪಾಲ ಶಂಖ ಚಕ್ರ ಗದಾ ಪದ್ಮಾಭಯವರದ ಹಸ್ತಗಳನ್ನು ಧರಿಸಿರುವ ಭುಜಗಳುಳ್ಳಂಥಾ, ಬಹಳವಾಗಿ ರತ್ನಗಳನ್ನು ಕೆತ್ತಿದುಂಗುರಗಳನ್ನು ಧರಿಸಿರುವ ಬೆರಳುಳ್ಳಂಥಾ ಚಿನ್ನದ ಒಡ್ಯಾಣವನ್ನು ಧರಿಸಿದಂಥಾ, ತ್ರಿವಳಿ ಸಹಿತವಾದ ಮಧ್ಯವುಳ್ಳಂಥಾ, ಚಂದ್ರನೋಪಾದಿಯಲ್ಲಿ ಪ್ರಕಾಶಿಸುತ್ತಿರುವ ಗಂಧಮಾಲ್ಯ ಲೇಪನಗಳುಳ್ಳಂಥಾ ಅಷ್ಟದಿಕ್ಪಾಲಕರ ಸ್ತ್ರೀಯರ ಶಿರಸ್ಸುಗಳಿಂದ ನಮಸ್ಕರಿಸಲ್ಪಟ್ಟ ಪಾದಕಮಲಗಳುಳ್ಳಂಥಾ ಜಗನ್ಮಾತೆಯಾದ ಪಾರ್ವತಿಯನ್ನು ಧ್ಯಾನಿಸುತ್ತಿರಬೇಕು.

ಹೀಗೆ ಪರಮೇಶ್ವರನನ್ನೂ ಪಾರ್ವತೀದೇವಿಯನ್ನೂ ಧ್ಯಾನಿಸಿದನಂತರ ಗಂಧ ಪುಷ್ಪಾಕ್ಷತೆ ನೈವೇದ್ಯ ತಾಂಬೂಲ ಮುಂತಾದ ಸಕಲೋಪಚಾರಗಳನ್ನು ಸಮರ್ಪಿಸಿ ಪಂಚಬ್ರಹ್ಮ ಮಂತ್ರಗಳಿಂದ ಸರ್ವಕಾಲದಲ್ಲಿಯೂ ಭಾವಿಸುತ್ತಿರಬೇಕು. ಇಂತು ಹೃದಯಕಮಲದಲ್ಲಿ ಭಾವಿಸಿದ ಪಾರ್ವತೀ ಪರಮೇಶ್ವರರನ್ನು ಬಾಹ್ಯಪೀಠಕ್ಕೆ ಬಿಜಯಂಗೈಸಿ ವಿಗ್ರಹಗಳಲ್ಲಿ ಆವಾಹನೆಯನ್ನು ಮಾಡಬೇಕು. ಹೇಗೆಂದರೆ:—

ಎಲೈ ಪರಮೇಶ್ವರನೇ ! ಋಣಭಾರದಿಂದಲು, ದಾರಿದ್ರ್ಯದಿಂದಲು, ಬಹಳ ಬಗೆಯ ರೋಗಗಳಿಂದಲು, ನಾನಾವಿಧಗಳಾದ ಪಾಪಗಳಿಂದಲು ಪೀಡಿತನಾಗಿ, ದುಃಖಾಗ್ನಿಯಿಂದ ಸುಡಲ್ಪಟ್ಟವನಾಗಿ ಸಂಸಾರಭಯದಿಂದ ಬಾಧಿಸಲ್ಪಟ್ಟು ದೀನನಾಗಿರುವ ನನ್ನನ್ನು ರಕ್ಷಿಸು. ದೇವತೆಗಳಿಗೆ ಒಡೆಯನಾಗಿ ಅಭಯಪ್ರದನಾದ ಎಲೈ ಮಹಾದೇವನೇ ! ಈ ವಿಗ್ರಹಗಳಲ್ಲಿ ನೀನು ಪಾರ್ವತೀಸಮೇತನಾಗಿ ನಿಂತು ನಾನು ಮಾಡುವ ಶಿವಪೂಜೆಯನ್ನು ಸ್ವೀಕರಿಸಿ

ಅನುಗ್ರಹಿಸು ಎಂದು ಆವಾಹಿಸಿ, ಆ ಪರಮೇಶ್ವರನ ಎಡದ ಭಾಗದಲ್ಲಿ ಗುರುಗಳನ್ನು ಬಲದಲ್ಲಿ ವಿಘ್ನೇಶ್ವರನನ್ನೂ ಈಶಾನ್ಯದಲ್ಲಿ ಕ್ಷೇತ್ರಪಾಲನ್ನೂ ಆಗ್ನೇಯದಲ್ಲಿ ಕಾತ್ಯಾಯನಿಯನ್ನೂ ನೈರುತ್ಯದಲ್ಲಿ ಪಾಸತ್ರೇಷ್ಟತಿಯನ್ನೂ, ವಾಯುವ್ಯದಲ್ಲಿ ಸರಸ್ವತಿಯನ್ನೂ ಭಾವಿಸಬೇಕು. ಅನಂತರದಲ್ಲಿ ಪೀಠದ ನಾಲ್ಕು ಪಾದಗಳಲ್ಲಿಯೂ ಆಗ್ನೇಯ ಮೊದಲಾಗಿ ಧರ್ಮಜ್ಞಾನ ವೈರಾಗ್ಯ ಐಶ್ವರ್ಯಗಳೆಂಬ ದೇವತೆಗಳನ್ನು ಭಾವಿಸಬೇಕು. ಪೀಠದ ಪೂರ್ವಾದಿ ಮುಂತಾದ ನಾಲ್ಕು ದಿಕ್ಕುಗಳಲ್ಲಿಯೂ ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯಗಳೆಂಬ ದೇವತೆಗಳನ್ನು ಭಾವಿಸಿ ಬಳಿಕ ಪೀಠಮಧ್ಯದಲ್ಲಿ ಪೂರ್ವದಲ್ಲಿ ಹೇಳಿದಂತೆ ಆಧಾರಶಕ್ತಿ ಮೊದಲಾಗಿ ವಾಮಾದಿ ನವಶಕ್ತಿಗಳನ್ನು ಕಡೆಯಾಗಿ ಎಲ್ಲವನ್ನೂ ಆಯಾಯ ಸ್ಥಳಗಳಲ್ಲಿ ಆವಾಹಿಸಬೇಕು. ಇದಾದಮೇಲೆ ಇತರದೇವತೆಗಳನ್ನು ಆವಾಹಿಸಬೇಕು.

ಪ್ರಥಮಾವರಣದಲ್ಲಿ ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣ ವೇದಗಳನ್ನು ದ್ವಿತೀಯಾವರಣದಲ್ಲಿ ಅಘೋರ ಸದ್ಯೋಜಾತ ವಾಮದೇವ ತತ್ಪುರುಷ, ಈಶಾನ ಮೂರ್ತಿಗಳನ್ನು ನಿವೃತ್ತಿ ಪ್ರತಿಷ್ಠಾ ವಿದ್ಯಾಶಾಂತಿ ಶಾಂತ್ಯತೀತಗಳೆಂಬ ಶಕ್ತಿಗಳನ್ನು ತೃತೀಯಾವರಣದಲ್ಲಿ ಅನಂತ ಸೂಕ್ಷ್ಮ ಶಿವೋತ್ತಮ ಏಕನೇತ್ರ, ಏಕರುದ್ರ, ತ್ರಿಮೂರ್ತಿ, ಶ್ರೀಕಂಠ. ಶಿಖಂಡಿಯೆಂಬ ಅಷ್ಟವಿದ್ಯೇಶ್ವರರನನ್ನು ಶಂಖನಿಧಿ ಪದ್ಮನಿಧಿಗಳನ್ನೂ ಚತುರ್ಥಾವರಣದಲ್ಲಿ ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಮಾಹೇಂದ್ರಿ, ಚಾಮುಂಡಿ ಎಂಬ ಸಪ್ತಮಾತೃಕೆಳಗನ್ನೂ, ವೃಷಭೇಶ್ವರ, ಕ್ಷೇತ್ರಪಾಲಕ, ಚಂಡೀಶ್ವರ, ದುರ್ಗ, ಸ್ಕಂದ, ವಿನಾಯಕ, ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿಃ, ಪ್ರಾಕಾಮ್ಯ, ಈಶತ್ವಗಳೆಂಬ ಅಷ್ಟೈಶ್ವರ್ಯಗಳನ್ನೂ ಪಂಚಮಾವರಣದಲ್ಲಿ ಇಂದ್ರ, ಅಗ್ನಿ, ಯಮ, ನಿರಋತಿ, ವರುಣ, ವಾಯು, ಕುಬೇರ, ಈಶಾನ್ಯರೆಂಬ ಅಷ್ಟದಿಕ್ಪಾಲಕರನ್ನೂ ಭಾವಿಸಬೇಕು ಬಳಿಕ ಈ ಆವರಣಗಳ ಮಧ್ಯದಲ್ಲಿ ತೇಜೋರೂಪನಾದ ಪಾರ್ವತೀಸಹಿತನಾದ ಪರಮೇಶ್ವರನಿಗೆ ರತ್ನಸಿಂಹಾಸನವನ್ನು ಕೊಟ್ಟು ಕುಳ್ಳಿರಿಸಿ ಹಾಲು, ಮೊಸರು, ಜೇನು ತುಪ್ಪ, ಅಕ್ಷತೆ, ದೂರ್ವತಿಲಗಳು, ದರ್ಭೆ, ಪುಷ್ಪಗಳು, ಉದಕವೆಂಬ ಅಷ್ಟದ್ರವ್ಯಗಳಿಂದ ಅರ್ಘ್ಯವನ್ನು ಕೊಟ್ಟು ಶುದ್ಧೋದಕದಿಂದ ಪಾದ್ಯವನ್ನೂ ಆಚಮನೀಯವನ್ನೂ ಸಲ್ಲಿಸಿ ಹಾಲು ಮೊಸರು, ತುಪ್ಪ, ಜೇನುತುಪ್ಪ, ಶರ್ಕರೆಗಳಿಂದ ಪಂಚಾಮೃತಾಭಿಷೇಕವನ್ನೂ ಎಳನೀರಿನಿಂದ ಫಲೋದಕ ಸ್ನಾನವನ್ನೂ, ಶಂಖೋದಕದಿಂದ ಶುದ್ಧೋದಕಾಭಿಷೇಕವನ್ನೂ ಮಾಡಿ, ಇನ್ನೂ ಅನೇಕ ಅಭಿಷೇಚನ ಮಂತ್ರಗಳಿಂದ ಅಭಿಷೇಕವನ್ನು ಮಾಡಿ, ದಿವ್ಯ ವಸ್ತ್ರವನ್ನೂ

ಯಜ್ಞೋಪವೀತವನ್ನೂ ಆಭರಣಗಳನ್ನೂ ಕರ್ಪೂರ, ಕಸ್ತೂರಿ, ಪುನುಗು, ಕುಂಕುಮ, ಕೇಸರಿ, ಅಗರು, ಶ್ರೀಗಂಧ, ಚಂಗಲುಕೋಷ್ಠ, ನಖಗಳೆಂಬ ಅಷ್ಟಾಂಗ ಗಂಧವನ್ನೂ ಸಮರ್ಪಿಸಿ, ತಿಲಾಕ್ಷತೆಗಳಿಂದಲೂ ಬಿಲ್ವಪತ್ರಗಳಿಂದಲೂ ತಾವರೆ ಕಮಲಗಳಿಂದಲೂ ಮರುಗ, ಮೊಲ್ಲೆ, ಮಲ್ಲಿಗೆ, ಕುರುವಕ, ಇರುವಂತಿಗೆ, ಸೇವಂತಿಗೆ, ಸಂಪಗೆ, ಜಾಜಿ, ಸುರಗಿ ಮೊದಲಾದ ನಾನಾವಿಧವಾದ ಪುಷ್ಪಗಳಿಂದಲೂ ಇನ್ನೂ ಉತ್ತಮವಾದ ತುಂಬೆ ಹುವ್ವುಗಳಿಂದಲೂ ಪೂಜಿಸಿ ಧೂಪ ದೀಪಾದ್ಯುಪಚಾರಗಳನ್ನು ಮಾಡಿ ಅನ್ನ, ಸೂಪ, ಶಾಕ, ಅಪೂಪ, ಪಾಯಸ, ತುಪ್ಪ, ಹಾಲು ಮೊಸರು, ಹಪ್ಪಳ, ಉಪ್ಪಿನಕಾಯಿ, ಲಾಡು, ಚಿರೋಟಿ, ಮಂಡಿಗೆ, ಪೇಣಿ, ಗೂಳೂರಿಗೆ ಮುಂತಾದ ಅನೇಕ ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ, ಖಾದ್ಯ, ಪಾನೀಯಗಳೆಂಬ ಷಡ್ವಿಧಾನ್ನಗಳಿಂದ ನೈವೇದ್ಯವನ್ನು ಮಾಡಿ, ಆ ಅನ್ನದಿಂದಲೇ ಅಗ್ನಿಯಲ್ಲಿ ಆಗಮೋಕ್ತ ಮಂತ್ರಗಳಿಂದ ಹೋಮವನ್ನು ಮಾಡಿ ಪರಮೇಶ್ವರನಿಗೆ ಕರ್ಪೂರ ತಾಂಬೂಲವನ್ನು ಸಮರ್ಪಿಸಿ, ಏಕಾರ್ತಿ ಮೊದಲಾದ ಆರತಿಗಳಿಂದ ನೀರಾಜನವನ್ನು ಬೆಳಗಿ, ಛತ್ರಚಾಮರ ದರ್ಪಣಾದ್ಯುಪಚಾರಗಳೊಡನೆ ವೈದಿಕ ಮಂತ್ರಗಳಿಂದಲೂ ಆಗಮೋಕ್ತ ಮಂತ್ರಗಳಿಂದಲೂ ಪೂಜಿಸಬೇಕು. ದರಿದ್ರನಾದವನು ಶಕ್ತ್ಯಾನುಸಾರವಾಗಿ ಪೂಜಿಸಬೇಕು. ಅನೇಕ ಸಂಪತ್ತುಳ್ಳವನು ಡಂಭವಾಗಿ ಪೂಜಿಸುವದು ಒಂದೆ, ದರಿದ್ರನು ತನ್ನ ಶಕ್ತ್ಯಾನುಸಾರ ಪೂಜಿಸುವದೂ ಒಂದೆ ಈ ಎರಡೂ ಪರಮೇಶ್ವರನಿಗೆ ಸಮವಾದ ಸಂತೋಷವನ್ನುಂಟುಮಾಡುವುದು. ಈ ಪ್ರಕಾರವಾಗಿ ಪರಮೇಶ್ವರನನ್ನು ಪೂಜಿಸಿ, ಅನಂತರದಲ್ಲಿ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿದಮೇಲೆ ನಾನಾವಿಧಗಳಾದ ಸ್ತೋತ್ರಗಳಿಂದ ಸ್ತುತಿಸಬೇಕು. ಅದೆಂತೆಂದರೆ,—

ಸಕಲ ಲೋಕಗಳಿಗೂ ಒಡೆಯನಾದ ಶಾಶ್ವತನಾದ ಶಂಕರನೇ! ಜಯಜಯಾ, ಸಕಲ ದೇವತೆಗಳಿಗೂ ಅಧ್ಯಕ್ಷನಾದವನೇ! ಸಮಸ್ತ ದೇವತೆಗಳಿಂದ ಪೂಜಿಸಲ್ಪಟ್ಟಂಥ ಸ್ವಾಮಿಯೇ ಜಯಜಯಾ, ನಿರ್ಗುಣನಾದ ನಿರಾಧಾರನಾದ ನಿತ್ಯನಾದ ನಾಶರಹಿತನಾದ ವಿಶ್ವಂಭರನಾದ ನಾಗರಾಜ ಕನ್ಯಕಾರಮಣನಾದ ಶಂಭುವೇ ಜಯಜಯಾ, ಕುರಂಗಧರ ಶಶಿಖಂಡಾವಸಂತನಾದ ಕೋಟಿಸೂರ್ಯ ಪ್ರಕಾಶಮಾನನಾದ ಪ್ರಭುವೇ ಜಯಜಯಾ, ಅನಂತಗುಣ ಸಂಪನ್ನನಾದ ಅಚಿಂತ್ಯನಾದ ವಿರೂಪಾಕ್ಷನಾದ ನಿರಂಜನನಾದ ದೇವನೇ ಜಯಜಯಾ, ಕೃಪಾ ಸಮುದ್ರನಾದ ಭಕ್ತಾರ್ತಿ ಭಂಜನನಾದ ಹರನೇ ಜಯಜಯಾ, ಎಂದು ಸ್ತೋತ್ರಮಾಡಿ, ಎಲೈ ಪರಮೇಶ್ವರನೇ! ಸಂಸಾರ ಭಯದಿಂದಲೂ ಮಹತ್ತಾದ ಭಯದಿಂದಲೂ ಋಣಭಾರಳಿಂದಲೂ ಶೋಕ ಮೋಹಗಳಿಂದಲೂ ಗ್ರಹಬಾಧೆ

ಗಳಿಂದಲೂ ದುಃಖಪಡುತ್ತಿರುವ ನನ್ನಲ್ಲಿ ಪ್ರಸನ್ನನಾಗಿ ಅನೇಕ ಕೋಟಿ ಜನ್ಮಂ ಗಳಲ್ಲಿ ಮಾಡಿದ ಪಾಪಗಳನ್ನು ಪರಿಹರಿಸಿ ಐಶ್ವರ್ಯವನ್ನು ಕೊಟ್ಟು ಸಂರಕ್ಷಿ ಸೆಂದೂ ದರಿದ್ರನು ತನ್ನ ಇಷ್ಟಾನುಸಾರ ಪ್ರಾರ್ಥಿಸಬೇಕು. ಧನಿಕನಾದರೆ ದೀರ್ಘಾಯುರಾರೋಗ್ಯ ಶರೀರಬಲ ಸಂತಾನಾಭಿವೃದ್ಧಿಗಳನ್ನು ಪ್ರಾರ್ಥಿಸ ಬೇಕು. ಭೂಪತಿಯಾದರೆ ಬೊಕ್ಕಸ ಭಂಡಾರಗಳ ಅಭಿವೃದ್ಧಿಯನ್ನು ಶತ್ರುಗಳ ನಾಶವನ್ನು ಚಂದ್ರಸೂರ್ಯಾದಿ ನವಗ್ರಹಗಳ ಅನುಗ್ರಹವನ್ನು ತನ್ನ ರಾಜ್ಯದಲ್ಲಿ ಚೋರಭಯ ದುರ್ಭಿಕ್ಷ ಕ್ಷಾಮಡಾಮರಾದಿ ಪ್ರಕೃತೋಪದ್ರವರಾಹಿತ್ಯವನ್ನು ಪೈರು ಪಚ್ಚೆಗಳ ಸಮೃದ್ಧಿಯನ್ನು ಪ್ರಾರ್ಥಿಸಬೇಕು.

ಈ ಪ್ರಕಾರದಲ್ಲಿ ಪರಮೇಶ್ವರನನ್ನು ಪರಿವಾರ ಸಮೇತನಾಗಿ ಪ್ರದೋಷ ಕಾಲದಲ್ಲಿ ಪೂಜೆಮಾಡಿದವರಿಗೆ ಇಷ್ಟಾರ್ಥಗಳನ್ನು ಕೊಡುವನು. ಈ ಶಿವಪೂಜೆ ಯನ್ನು ಈರೀತಿಯಾಗಿ ಪ್ರದೋಷಕಾಲದಲ್ಲಿಯೆ ಮಾಡಬೇಕು. ಇಲ್ಲದಿದ್ದರೆ, ಶುಕ್ಲಪಕ್ಷ ಕೃಷ್ಣಪಕ್ಷಗಳ ತ್ರಯೋದಶಿಯಲ್ಲಿಯಾದರೂ ಮಾಡಲೇಬೇಕು. ಅದೂ ಇಲ್ಲದಿದ್ದರೆ ಶನಿವಾರ ಸಹಿತವಾದ ತ್ರಯೋದಶಿಯಲ್ಲಿಯಾದರೂ ಅಗತ್ಯವಾಗಿ ಮಾಡಬೇಕು. ಈ ಪ್ರದೋಷಪೂಜೆಯ ಫಲದಿಂದ ಪರಿಹರವಾಗದ ಸ್ವಾಮಿ ದ್ರೋಹ, ಗುರುದ್ರೋಹ, ಸ್ವರ್ಣಸ್ತೇಯ, ಸುರಾಪಾನ, ಗುರುತಲ್ಪಗಮನ, ಬ್ರಹ್ಮಹತ್ಯಾದಿ ಮಹಾಪಾಪಗಳೂ ಶ್ರುತಿ, ಸ್ಮೃತಿ ಪುರಾಣಗಳಲ್ಲಿ ಹೇಳದಿರುವ ಪ್ರಾಯಶ್ಚಿತ್ತಮಿಲ್ಲದ ಪಾಪಗಳೂ ಸಹ ಪರಿಹರವಾಗುವುವು.

ಎಲೈ ಬ್ರಾಹ್ಮಣ ಸ್ತ್ರೀಯೇ! ನಿನಗೆ ಪ್ರದೋಷ ಪೂಜಾವಿಧಾನವನ್ನು ಹೇಳಿದೆನು ನೀನು ಈ ಬಾಲಕನಿಂದ ಈ ಪ್ರಕಾರದಲ್ಲಿ ಪ್ರದೋಷ ಪೂಜೆಯನ್ನು ಮಾಡಿಸಿದೆಯಾದರೆ ಇವನ ದಾರಿದ್ರ್ಯ ವಿಮೋಚನೆಯಾಗುವದು, ಒಂದು ವರ್ಷ ದೊಳಗೆ ಇವರು ಐಶ್ವರ್ಯ ಸಂಪನ್ನರಾಗುವರೆಂದು ಶಾಂಡಿಲ್ಯ ಮಹಾಮುನಿಯು ಬ್ರಾಹ್ಮಣ ಸ್ತ್ರೀಗೆ ನಿರೂಪಿಸಲಾಗಿ ಆ ಬ್ರಾಹ್ಮಣ ಸ್ತ್ರೀಯು ಆತನ ವಾಕ್ಯವನ್ನು ಕೇಳಿ ಆ ಇಬ್ಬರು ಕುಮಾರರು ಸಹಿತ ಆ ಮುನಿಶ್ರೇಷ್ಠನ ಪಾದಾರವಿಂದಗಳಿಗೆ ಸಾಷ್ಟಾಂಗವೆರಗಿ, ಎಲೈ ಮಹಾತ್ಮನೇ! ನಿನ್ನ ದರ್ಶನಮಾತ್ರದಿಂದಲೇ ನಾನು ಕೃತಾರ್ಥಳಾದೆನು, ಈ ಕುಮಾರರು ಇಬ್ಬರು ನಿನ್ನ ಮರೆಹೊಕ್ಕವರು ಈತನು ಧರ್ಮಗುಪ್ತನೆಂಬ ರಾಜಕುಮಾರನು, ಈತನು ಶುಚಿವ್ರತನೆಂಬ ನನ್ನ ಕುಮಾರನು ಈ ಮುವ್ವರು ನಿನ್ನ ಚರಣಸೇವಕರಾದೆವು. ದಾರಿದ್ರ್ಯವೆಂಬ ಸಮುದ್ರದಲ್ಲಿ ಮುಳಿಗಿರುವ ನಮ್ಮನ್ನು ಉದ್ಧರಿಸೆಂದು ಪ್ರಾರ್ಥಿಸಲು, ಆ ಶಾಂಡಿಲ್ಯ ಮಹಾ ಮುನಿಯು ಅಮೃತಕ್ಕೆ ಸಮಾನವಾದ ವಾಕ್ಯಗಳಿಂದ ಅವಳನ್ನು ಸಂತೋಷ ಪಡಿಸಿ, ಆ ಕುಮಾರರಿಗೆ ಪ್ರದೋಷ ಪೂಜಾವಿಹಿತವಾದ ಮಂತ್ರಗಳನ್ನುಪದೇಶ

ಮಾಡಿ ಕಳುಹಿಸಲು, ಆ ಕುಮಾರರು ತಾಯಿ ಸಹಿತ ಶಾಂಡಿಲ್ಯ ಮಹಾಮುನಿಗೆ ನಮಸ್ಕರಿಸಿ, ತಮ್ಮ ಮನೆಗೆ ಬಂದವರಾಗಿ ತಾವು ಶಾಂಡಿಲ್ಯ ಮಹಾಮುನಿಯ ಉಪದೇಶ ಪ್ರಕಾರದಲ್ಲಿಯೇ ಪ್ರದೋಷಪೂಜೆಯನ್ನು ಮಾಡುತ್ತಿದ್ದರು. ನಾಲ್ಕು ತಿಂಗಳಾದಮೇಲೆ ಒಂದಾನೊಂದು ದಿನ ಆ ಬ್ರಾಹ್ಮಣ ಕುಮಾರನು ರಾಜ ಕುಮಾರರನ್ನು ಬಿಟ್ಟು ತಾನೊಬ್ಬನೇ ಸ್ನಾನಾರ್ಥವಾಗಿ ನದೀತೀರಕ್ಕೆ ಹೋಗಿ ಅಲ್ಲಿ ವಿಲಾಸದಿಂದ ಸಂಚರಿಸುತ್ತಿದ್ದ ಒಂದಾನೊಂದು ಪ್ರದೇಶದಲ್ಲಿ ಪ್ರಕಾಶಿಸು ತ್ತಿರುವ ನವರತ್ನಪೂರಿತಮಾದ ಬಿಂದಿಗೆಯನ್ನು ಕಂಡವನಾಗಿ ಸಂತೋಷದಿಂದ ಅದನ್ನು ತೆಗೆದುಕೊಂಡು ಈಶ್ವರಾನುಗ್ರಹದಿಂದ ಪ್ರಾಪ್ತವಾದದ್ದೆಂದು ನಿಶ್ಚ ಯಿಸಿ, ಮನೆಗೆ ತಂದು ತಮ್ಮ ತಾಯಿಯನ್ನು ಕರೆದು ಎಲೈ ತಾಯಿಯೇ! ನೋಡು, ಶಿವಾನುಗ್ರಹದಿಂದ ನದೀತೀರದಲ್ಲಿ ನಾನು ಸಂಚರಿಸುತ್ತಿದ್ದಾಗ ಈ ದ್ರವ್ಯದಬಿಂದಿಗೆ ಸಿಕ್ಕಿತೆಂದು ಹೇಳಲಾಗಿ ಆ ತಾಯಿಯು ಮಗನ ವಾಕ್ಯವನ್ನು ಕೇಳಿ, ಆ ದ್ರವ್ಯದ ಬಿಂದಿಗೆಯನ್ನು ಕಂಡು ಆಶ್ಚರ್ಯಪಟ್ಟು, ಅತ್ಯಂತ ಸಂಭ್ರಮ ದಿಂದ ರಾಜಕುಮಾರನನ್ನು ಕರೆದು ತನ್ನ ಕುಮಾರನು ತಂದ ಆ ದ್ರವ್ಯದ ಬಿಂದಿಗೆಯನ್ನು, ತೋರಿಸಿ ನೀವು ಮಾಡಿದ ಶಿವಪೂಜಾ ಪ್ರಭಾವದಿಂದ ಇದು ಬಂದಿದೆ ನೀವು ಇಬ್ಬರು ಸರಿಯಾಗಿ ಹಂಚಿಕೊಂಡು ಅನುಭವಿಸಿ ಎಂದು ನಿರೂ ಪಿಸಲಾಗಿ, ಶುಚಿವ್ರತನು ಒಡಂಬಟ್ಟವನಾದನು. ಧರ್ಮಗುಪ್ತನೆಂಬ ರಾಜ ಕುಮಾರನು ಆ ಮಾತಿಗೆ ಒಡಂಬಡದೆ ಎಲೆ ತಾಯಿಯೇ! ಇದು ಶುಚಿವ್ರತನ ಶಿವಪೂಜಾ ಪ್ರಭಾವದಿಂದ ಪ್ರಾಪ್ತವಾದಕಾರಣ ಆತನಿಗೆ ಇರಲಿ, ಪರಮೇ ಶ್ವರನು ಒಂದುವೇಳೆ ನನ್ನಲ್ಲಿಯೂ ಅನುಗ್ರಹಿಸುವನೆಂದು ತಾಯಿಗೆ ಬಿನ್ನೈಸಿ, ಎಂದಿನಂತೆ ಅತ್ಯಂತ ಭಕ್ತಿಯಿಂದ ಶಿವಪೂಜೆಯನ್ನು ಮಾಡುತ್ತಾ ಒಂದು ಸಂವತ್ಸರ ಪರಿಯಂತರ ಸುಖದಲ್ಲಿದ್ದನು.

ಒಂದಾನೊಂದು ದಿನ ವಸಂತಕಾಲದಲ್ಲಿ ಆ ಶುಚಿವ್ರತ ಸಹಿತನಾಗಿ ವನ ವಿಹಾರಕ್ಕೆ ಹೋಗಿ ವಿಲಾಸದಿಂದ ಒಂದು ಪ್ರದೇಶದಲ್ಲಿ ಕ್ರೀಡಿಸುತ್ತಿದ್ದ ಅತ್ಯಂತ ಸೌಂದರ್ಯವುಳ್ಳ ಗಂಧರ್ವ ಕನ್ಯೆಯರನ್ನು ಕಂಡನು. ಆಗ ಶುಚಿವ್ರತನು ಆ ಗಂಧರ್ವ ಸ್ತ್ರೀಯರನ್ನು ಕಂಡು ಧರ್ಮಗುಪ್ತನನ್ನು ಕರೆದು ತೋರಿಸಿ ಎಲೈ ಧರ್ಮಗುಪ್ತನೇ ನೋಡಿದೆಯಾ ಇಲ್ಲಿಗೆ ಮುಂದುಗಡೆ ಸ್ವಲ್ಪದೂರದಲ್ಲಿ ಸ್ತ್ರೀಯರು ಕ್ರೀಡಿಸುತ್ತಿದ್ದಾರೆ. ಆದಕಾರಣ ನಾವು ಇಲ್ಲಿಂದ ಮುಂದಕ್ಕೆ ಹೋಗಬಾರದು. ಏಕೆಂದರೆ ಸ್ತ್ರೀಯರು ಕಪಟಗಾತ್ರಿಯರು ಹಾವಭಾವ ವಿಲಾಸ ವಿಭ್ರಮಗಳಿಂ ದಲೂ ನಯವಿನಯಗಳಿಂದಲೂ ಒಳ್ಳೆಯ ನಡೆನುಡಿಗಳಿಂದಲೂ ಎಂಥವನನ್ನಾ ದರೂ ಧೈರ್ಯಗೆಡಿಸಿ ವಶಮಾಡಿಕೊಳ್ಳುವರು ಆದಕಾರಣ ಪರಿಶುದ್ಧನಾಗಿ ಧರ್ಮಿಷ್ಠ

ನಾಗು ಗೃಹಸ್ಥನು ಪರಸ್ತ್ರೀಯರ ಸಮೀಪಕ್ಕೆ ಹೋಗನು. ಅವರೊಡನೆ ಸಂಭಾಷಣೆಯನ್ನೂ ಮಾಡನು, ಬ್ರಹ್ಮಚಾರಿಗಳಾದವರು ಹೆಂಗಸರನ್ನು ನೋಡ ಲೇಬಾರದು. ಅದರಿಂದ ನಾನು ಇಲ್ಲಿಯೇ ಇರುವೆನೆಂದು ಹೇಳಿ ಮುಂದಕ್ಕೆ ಹೋಗದೆ ಅಲ್ಲಿಯೇ ನಿಂತನು. ಧರ್ಮಗುಪ್ತನು ಧೈರ್ಯದಿಂದ ಆ ಸ್ತ್ರೀಯರನ್ನು ನೋಡಬೇಕೆಂದು ಅವರಿದ್ದ ಕಡೆಗೆ ಬರಲು, ಒಬ್ಬ ಗಂಧರ್ವಳು ಆತನನ್ನು ಕಂಡು ತನ್ನಲ್ಲಿ ತಾನು ಇವನಾರೋ ನಮ್ಮ ಸಮೀಪಕ್ಕೆ ಬರುತ್ತಿದ್ದಾನೆ. ಇವನು ಯೌವನವಂತನು, ಸಕಲಾವಯವ ಸೌಂದರ್ಯಶಾಲಿ, ಸೊಕ್ಕಿದ ಆನೆಯೋಪಾದಿ ಯಲ್ಲಿ ಮಂದಗಮನವುಳ್ಳವನು, ದೇಹವನ್ನು ಧರಿಸಿದ ಶೃಂಗಾರರಸದ ಸಮು ದ್ರದೋಪಾದಿಯಲ್ಲಿ ಮನಂಗೊಳಿಸುತ್ತಾ ಇದ್ದಾನೆ. ವಿಲಾಸದಿಂದ ಚಂಚಲ ವಾದ ಕಣ್ಣುಗಳುಳ್ಳವನು, ವಿಶಾಲ ವಕ್ಷಸ್ಥಳನು, ವಸಂತ, ಜಯಂತ, ಮನ್ಮಥ, ನಳಕೂಬರರಿಗೆ ಸಮಾನವಾದವನೆಂದು ಆಶ್ಚರ್ಯಭರಿತಳಾಗಿ ಆತನ ರೂಪರೇಖಾ ಲಾವಣ್ಯ ಸೌಂದರ್ಯ ವಿಲಾಸಗಳನ್ನು ಕೊಂಡಾಡಿ ತೋರಿಸುತ್ತ ತನ್ನ ಸಖಿಯು ರೊಡನೆ ಇಂತೆಂದಳು.

ಎಲೈ ಸಖಿಗಳಿರಾ! ಇಲ್ಲಿಗೆ ಸಮೀಪದಲ್ಲಿ ಒಂದು ಹುವ್ವಿನ ತೋಟವಿದೆ, ನೀವೆಲ್ಲರೂ ಅಲ್ಲಿಗೆ ಹೋಗಿ ಮೊಲ್ಲೆ, ಮಲ್ಲಿಗೆ, ಸಂಪಗೆ, ಹೊನ್ನೆ, ಸುರಹೊನ್ನೆ, ಮೊದಲಾದ ನಾನಾವಿಧವಾದ ಪುಷ್ಪಗಳನ್ನು ಕೊಯಿದುಕೊಂಡು ಬನ್ನಿ ಆ ಪರಿಯಂತರ ನಾನು ಇಲ್ಲಿಯೇ ಇರವೆನೆಂದು ಹೇಳಿ, ಅವರೆಲ್ಲರು ಹೊರಟು ಹೋದಮೇಲೆ ಆ ಗಂಧರ್ವಕನ್ನಿಕೆಯು ಆ ರಾಜಕುಮಾರನಲ್ಲಿಯೆ ದೃಷ್ಟಿಯಿರಿಸಿ ನೋಡುತ್ತಿದ್ದಳು. ಅನಂತರದಲ್ಲಿ ಧರ್ಮಗುಪ್ತನು ತಿಲೋತ್ತಮೆ, ರಂಭೆ, ಮೇನಕೆ, ಊರ್ವಶಿ ಮೊದಲಾದ ಅಪ್ಸರ ಸ್ತ್ರೀಯರನ್ನು ತಿರಸ್ಕರಿಸುತ್ತಿರುವ ಸೊಬಗುಳ್ಳ ಆ ಗಂಧರ್ವ ಕನ್ನಿಕೆಯನ್ನು ನೋಡುತ್ತಾ ಬರಲು, ಆ ಗಂಧರ್ವ ಕನ್ನಿಕೆಯು ಅಧೈರ್ಯವನ್ನು ಬಿಟ್ಟು ಎದುರಾಗಿ ಬಂದು ಚಿಗುರೆಲೆಗಳ ಆಸನವನ್ನು ಹಾಕಿ ಆತನಲ್ಲಿ ಮೋಹಾಕ್ರಾಂತಳಾಗಿ, ಎಲೈ ಕೆಂದಾವರೆಯ ದಳಗಳೋಪಾದಿ ಯಲ್ಲಿ ಕಣ್ಣುಗಳುಳ್ಳ ಸೌಂದರ್ಯಶಾಲಿಯೇ ನೀನು ಯಾರು, ಯಾವ ದೇಶದಿಂದ ಇಲ್ಲಿಗೆ ಬಂದೆ, ಯಾರ ಮಗನಾಗಬೇಕು. ಎಂದು ಪ್ರೀತಿಯಿಂದ ಕೇಳಲಾಗಿ, ಆ ಧರ್ಮಗುಪ್ತನು ಆ ಗಂಧರ್ವ ಕನ್ನಿಕೆಯನ್ನು ಕುರಿತು ಎಲೈ ಪ್ರಿಯಳೇ! ನಾನು ವಿಮರ್ಶರಾಯನ ಕುಮಾರನು ಶತ್ರುಗಳಿಂದ ಅಪಹರಿಸಲ್ಪಟ್ಟ ನನ್ನ ರಾಜ್ಯವು ನಾಶವಾಯಿತು, ನನ್ನ ವೃತ್ತಾಂತವನ್ನು ಕೇಳುತ್ತಿರುವ ನೀನು ಯಾರು? ಯಾರ ಮಗಳು, ಇಲ್ಲಿಗೆ ಏನುಕಾರಣ ಬಂದೆ, ಮನಸ್ಸಿನಲ್ಲಿ ಏನನ್ನು ಚಿಂತಿಸುತ್ತಿ ದ್ದೀಯೆ ಹೇಳು ಎನಲು, ಆ ಗಂಧರ್ವ ಕನ್ನಿಕೆಯು ಇಂತೆಂದಳು.

ಕೇಳೈ ರಾಜಕುಮಾರನೇ ! ನಾನು ದ್ರವಿಣನೆಂಬ ಗಂಧರ್ವರಾಯನ ಮಗಳು, ನನ್ನ ಹೆಸರು ಅಂಶುಮತಿ, ನೀನು ಬರುತ್ತಿರುವುದನ್ನು ಕಂಡು ನಿನ್ನೊಡನೆ ಸಂಭಾಷಣೆ ಮಾಡಬೇಕೆಂದು ಸಖಿಯರನ್ನೂ ದೂರವಾಗಿ ಕಳುಹಿಸಿ ನಾನೊಬ್ಬಳೇ ಇಲ್ಲಿ ನಿಂತೆನು, ಸಂಗೀತ ವಿದ್ಯೆಯಲ್ಲಿ ನನಗೆ ಸರಿಯಾದವರಿಲ್ಲ ನನ್ನ ಗಾನವನ್ನು ಕೇಳಿದರೆ ಸಮಸ್ತ ದೇವತಾ ಸ್ತ್ರೀಯರು ಸಂತೋಷ ಪಡುವರು. ನಾನು ಅರವತ್ತುನಾಲ್ಕು ವಿದ್ಯೆಗಳನ್ನೂ ಬಲ್ಲೆ ಜನರ ಇಂಗಿತ ವನ್ನು ಸುಲಭವಾಗಿ ತಿಳಿದುಕೊಳ್ಳುವೆನು, ಈಗ ನಿನ್ನ ಮನಸ್ಸಿನಲ್ಲಿರುವ ಅಭಿ ಲಾಷೆ ಏನು ಹೇಳು ಎನಲು, ಆ ರಾಜಕುಮಾರನು ನೀನು ನನ್ನಲ್ಲಿ ಆಸಕ್ತಳಾಗಿ ರುವ ಹಾಗೆ ನಾನೂ ನಿನ್ನಲ್ಲಿ ಆಸಕ್ತನಾಗಿದ್ದೇನೆ, ನಮ್ಮಿಬ್ಬರಿಗೂ ದೈವಯೋಗ ದಿಂದ ಅನ್ಯೋನ್ಯ ಪ್ರೀತಿ ಉಂಟಾಯಿತು ಎಂದನು. ಆಗ ಆ ಗಂಧರ್ವ ಕನ್ನಿಕೆಯು ಸಂತೋಷಪಟ್ಟು ತನ್ನ ಕುಚಗಳಿಗೆ ಅಲಂಕಾರವಾಗಿದ್ದ ಮುಕ್ತಾ ಹಾರವನ್ನು ತೆಗೆದು ಆ ರಾಜಕುಮಾರನ ಕೊರಳಿಗೆ ಹಾಕಿದಳು. ಆಗ ರಾಜ ಕುಮಾರನು ಅವಳನ್ನು ಕುರಿತು ಇಂತೆಂದನು.

ಎಲೈ ಅಂಶುಮತಿಯೆ ! ನೀನು ಯಥಾರ್ಥವಾಗಿಯೇ ಹೇಳಿದೆ, ಹೇಗಾ ದರೂ ನಾನೊಂದು ಮಾತನ್ನು ಹೇಳುವೆನು ಕೇಳು, ನಾನು ರಾಜ್ಯಹೀನನು ದರಿದ್ರನಾದವನು ಇಂಥವನನ್ನು ಹೇಗೆ ಮದುವೆಯಾಗುವೆ, ಇದಲ್ಲದೆ ನೀನು ತಂದೆಯುಳ್ಳವಳು, ತಂದೆಯ ಅಪ್ಪಣೆಯಿಲ್ಲದೆ ಹೇಗೆ ಮದುವೆಯಾಗುವೆ, ಎನಲು ಆ ಗಂಧರ್ವಕನ್ನಿಕೆಯು ಯುಕ್ತವಾದ ಆತನ ಮಾತನ್ನುಕೇಳಿ ಮುಗುಳು ನಗೆಯನ್ನು ನಗುತ್ತಾ, ಎಲೈ ರಾಜಕುಮಾರನೇ ! ನೀನು ಹೇಳಿದದು ನಿಜವೇ ಸರಿ, ಆದರೆ ಈಗ ನೀನು ನಿನ್ನ ಮನೆಗೆ ಹೋಗಿ ನಾಳೆಯ ದಿನ ಪ್ರಾತಃಕಾಲಕ್ಕೆ ಸರಿಯಾಗಿ ಇಲ್ಲಿಗೆ ಬಂದಿರು ನಾನು ನನ್ನ ತಂದೆಯನ್ನು ಕರೆದು ಕೊಂಡು ನಾಳೆಯ ದಿನವೆ ಇಲ್ಲಿಗೆ ಬರುತ್ತೇನೆ, ಇದು ಹುಸಿಯಲ್ಲ ನಂಬು ಎಂದು ಹೇಳಿ ಆತನನ್ನು ಮನೆಗೆ ಕಳುಹಿಸಿ ತನ್ನ ಸಖಿಯರೊಡಗೂಡಿ ಮನೆಗೆ ಹೊರಟು ಬಂದಳು.

ಅನಂತರದಲ್ಲಿ ಆ ರಾಜಕುಮಾರನು ಸಂತೋಷದಿಂದ ಆ ಬ್ರಾಹ್ಮಣ ಕುಮಾರನಿದ್ದೆಡೆಗೆ ಬಂದು ಆ ವೃತ್ತಾಂತವನ್ನೆಲ್ಲ ಹೇಳಿ ಸಂತೋಷಪಡಿಸಿ, ಮರುದಿನ ಬ್ರಾಹ್ಮಣ ಕುಮಾರನೊಡನೆ ಹೊರಟು ಸಂಕೇತ ಸ್ಥಳಕ್ಕೆ ಬಂದು ಅಲ್ಲಿ ತನ್ನ ಮಗಳನ್ನು ಕರೆದುಕೊಂಡು ಬಂದಿರುವ ಗಂಧರ್ವರಾಯನನ್ನು ಕಂಡನು. ಆ ಗಂಧರ್ವರಾಯನು ಆ ಕುಮಾರರಿಬ್ಬರನ್ನೂ ಎದುರ್ಗೊಂಡು ಅರ್ಘ್ಯಾದಿಗಳಿಂದ ಪೂಜಿಸಿ, ಪೀಠಗಳಲ್ಲಿ ಕುಳ್ಳಿರಿಸಿ ಧರ್ಮಗುಪ್ತನೆಂಬ ರಾಜ ಕುಮಾರನನ್ನು ಕುರಿತು ಇಂತೆಂದನು.

ಎಲೈ ರಾಜಕುಮಾರನೇ! ಕೇಳು, ನಿನ್ನೆಯದಿನ ನಾನು ಕೈಲಾಸಕ್ಕೆ ಹೋಗಿ ಸಕಲ ಪರಿವಾರಗಳಿಂದ ಸೇವಿಸಲ್ಪಡುತ್ತಿದ್ದ ಪಾರ್ವತೀ ಸಹಿತನಾದ ಪರಮೇಶ್ವರನನ್ನು ಕಂಡು ಸಾಷ್ಟಾಂಗವೆರಗಿ ನಿಂತಿರಲು, ಕೃಪಾಸಮುದ್ರನಾದ ಶಿವನು ನನ್ನನ್ನು ತನ್ನಸಮಿಾಪಕ್ಕೆ ಕರೆದು ಸಕಲ ದೇವತೆಗಳೂ ಕೇಳುತ್ತಿರುವ ಹಾಗೆ ನನ್ನೊಡನೆ ಇಂತೆಂದನು. ಎಲೈ ಗಂಧರ್ವರಾಯನೇ! ಲಾಲಿಸು ಭೂಲೋಕದಲ್ಲಿ ವಿಮರ್ಶರಾಯನ ಮಗನಾದ ಧರ್ಮಗುಪ್ತನು ಶತ್ರುಗಳಿಂದ ಆಕ್ರಮಿಸಲ್ಪಟ್ಟ ರಾಜ್ಯವುಳ್ಳವನಾಗಿ ತಂದೆ ತಾಯಿಗಳಿಲ್ಲದೆ ದರಿದ್ರನಾಗಿ ಶಾಂಡಿಲ್ಯ ಮಹಾಮುನಿಯ ಉಪದೇಶದಿಂದ ಪ್ರದೋಷಕಾಲದಲ್ಲಿ ನನ್ನನ್ನು ತಪ್ಪದೆ ಪೂಜಿಸುತ್ತಿರುವನು. ಆ ಬಾಲಕನು ಮಾಡುವ ಪೂಜೆಯಿಂದಲೇ ಆತನು ಶತ್ರುಗಳನ್ನು ನಿಗ್ರಹಮಾಡಿ ತನ್ನ ರಾಜ್ಯವನ್ನು ಹೇಗೆ ಅನುಭವಿಸುವನೋ ಹಾಗೆ ನೀನು ಆತನಿಗೆ ಸಹಾಯಮಾಡು ಎಂದು ಆಜ್ಞಾಪಿಸಲು, ನಾನು ಪರಮೇಶ್ವರನ ವಾಕ್ಯವನ್ನು ಶಿರಸಾವಹಿಸಿ ಮನೆಗೆ ಬಂದೆನು, ಆಗ ನನ್ನ ಮಗಳಾದ ಅಂಶುಮತಿಯು ಎಲೈ ತಂದೆಯೇ! ಭೂಲೋಕದಲ್ಲಿ ಧರ್ಮಗುಪ್ತನೆಂಬ ರಾಜಕುಮಾರನು ಸೌಂದರ್ಯ ಸಂಪನ್ನನು, ಅತಿ ಪ್ರೌಢನಾದವನು, ಧೈರ್ಯಶಾಲಿ, ನಾನು ವನವಿಹಾರಾರ್ಥವಾಗಿ ನಿನ್ನೆಯದಿನ ಭೂಲೋಕಕ್ಕೆ ಹೋಗಿ ಅವನನ್ನು ನೋಡಿಕೊಂಡು ಬಂದೆನು. ಆತನನ್ನು ಬಿಟ್ಟು ಮತ್ತೊಬ್ಬನನ್ನು ನಾನು ಮದುವೆಯಾಗುವುದಿಲ್ಲ ಆದಕಾರಣ ನನ್ನನ್ನು ಅವನಿಗೆ ಕೊಟ್ಟು ಮದುವೆ ಮಾಡಿಸು ಎಂದು ನಾನಾಬಗೆಯಿಂದ ನನ್ನನ್ನು ಬೇಡಿಕೊಂಡಳು. ನಾನು ಅದನ್ನು ಕೇಳಿ ಇದೆಲ್ಲವು ಈಶ್ವರನ ಅನುಗ್ರಹದಿಂದ ಆದದ್ದೆಂದು ನಿಶ್ಚೈಸಿ ಅಂಶುಮತಿಯನ್ನು ಕೊಟ್ಟು ನಿನಗೆ ಮದುವೆ ಮಾಡುವದಕ್ಕಾಗಿ ಇಲ್ಲಿಗೆ ಬಂದೆನು. ಆದಕಾರಣ ಇವಳನ್ನು ನೀನು ವಿವಾಹವಾಗು, ನಾನು ನಿನ್ನ ಸಮಸ್ತ ಶತ್ರುಗಳನ್ನು ಸಂಹರಿಸಿ ನಿನಗೆ ರಾಜ್ಯ ಸಾಧೀನವಾಗುವಂತೆ ಮಾಡುವೆನು. ಅದೂ ಅಲ್ಲದೆ ನೀನು ಈ ಅಂಶುಮತಿಯೊಡನೆ ಹತ್ತುಸಾವಿರ ವರ್ಷಕಾಲ ಸಕಲವಾದ ಭೋಗಭಾಗ್ಯಗಳನ್ನು ಅನುಭವಿಸಿ ಅಂತ್ಯದಲ್ಲಿ ಈ ಶರೀರದಿಂದ ಕೂಡಿ ಅಂಶುಮತಿಯೊಡನೆ ಕೈಲಾಸವನ್ನೈದುವೆ ಎಂದು ಉದಕಪೂರ್ವಕವಾಗಿ ಆ ವನದಲ್ಲಿ ಆ ಧರ್ಮಗುಪ್ತನಿಗೆ ತನ್ನ ಮಗಳಾದ ಅಂಶುಮತಿಯನ್ನು ಧಾರೆಯನ್ನೆರೆದು ಆತನಿಗೆ ನವರತ್ನಹಾರಗಳನ್ನು ಚಂದ್ರನಿಗೆ ಸರಿಯಾದ ಶಿರೋಮಾಣಿಕ್ಯವನ್ನೂ ನಾನಾ ಬಗೆಯಾದ ಆಭರಣಗಳನ್ನೂ ದಿವ್ಯವಾದ ರಾಜವಸ್ತ್ರಗಳನ್ನೂ, ಅಪರಿಮಿತವಾದ ದ್ರವ್ಯವನ್ನೂ, ಹತ್ತುಸಾವಿರ ಮದ್ದಾನೆಗಳನ್ನೂ, ಇಪ್ಪತ್ತು ಸಾವಿರ ಕುದುರೆಗಳನ್ನೂ, ಮುವ್ವತ್ತು ಸಾವಿರ ರಥಗಳನ್ನೂ ಇಂದ್ರಚಾಪಕ್ಕೆ ಸರಿಯಾದ ಬಿಲ್ಲನ್ನೂ, ಪ್ರಯೋಗೋಪ ಸಂಹಾರ ಸಹಿತವಾದ ಮಂತ್ರಾಸ್ತ್ರಗಳನ್ನೂ ಹವಳ

ಸಾನುವುಳ್ಳ ಹಲಿಗೇ ಕತ್ತಿಗಳನ್ನೂ, ಅಭೇದ್ಯವಾದ ವಜ್ರ ಕವಚಗಳನ್ನೂ, ಶತ್ರುಗಳನ್ನು ಸಂಹರಿಸುವಂಥಾ ಶಕ್ತ್ಯಾಯುಧವನ್ನುಳ್ಳ ಒಳ್ಳೆಯದಾದ ನಾಲ್ಕು ಶ್ವೇತ ಕುದುರೆಗಳನ್ನು ಕಟ್ಟಿಂದಂಥಾ ಪುಷ್ಪರಥವನ್ನೂ ಅಪರಿಮಿತ ಸಂಖ್ಯೆಯ ಕಾಲ್ಬಲಗಳನ್ನು ಕೊಟ್ಟು ಮಗಳಿಗೆ ಊಳಿಗವನ್ನು ಮಾಡುವ ಸಾವಿರಮಂದಿ ದಾಸಿಗಳನ್ನೂ, ಉಚಿತವಾದ ಆಭರಣಗಳನ್ನೂ, ಕೊಟ್ಟು ಚತುರಂಗಬಲ ಸಹಿತನಾದ ತನ್ನ ಗಂಧರ್ವ ಸೇನೆಯನ್ನೇ ಸಹಾಯವಾಗಿ ಕಳುಹಿಸಿ, ಆ ಧರ್ಮ ಗುಪ್ತನಿಗೆ ಅಪ್ಪಣೆಯನ್ನು ಕೊಟ್ಟು ಕಳುಹಿಸಿ ತಾನು ವಿಮಾನವನ್ನೇರಿ ಗಂಧರ್ವ ಲೋಕಕ್ಕೆ ಹೊರಟುಹೋದನು.

ಆ ಬಳಿಕ ಆ ಧರ್ಮಗುಪ್ತನು ಅತ್ಯಂತ ಸಂತೋಷಭರಿತನಾಗಿ ಅಂಶುಮತಿ ಎಂಬ ಹೆಂಡತಿಯನ್ನು ಕರೆದುಕೊಂಡು ಮನೆಗೆ ಬಂದು ಆ ವೃತ್ತಾಂತವನ್ನೆಲ್ಲ ತಾಯಿಗೆ ಹೇಳಿ, ಆ ತಾಯಿ ಸಮೇತನಾಗಿ ತನ್ನ ತಂದೆಯ ರಾಜ್ಯಕ್ಕೆ ಹೋಗಿ ದುರ್ಮರ್ಷಣ ಪ್ರಮುಖರಾದ ಸಾಳ್ವರನ್ನು ಗಂಧರ್ವ ಸೇನಾಸಹಾಯದಿಂದ ಸಂಹರಿಸಿ ತನ್ನ ರಾಜ್ಯವನ್ನು ತಾನು ಸ್ವಾಧೀನಪಡಿಸಿಕೊಂಡು ಮಾತೃಗಳಿಂದಲೂ ಪುರೋಹಿತರಿಂದಲುಕೂಡಿ ವಿದ್ಯುಕ್ತಕ್ರಮದಿಂದ ಪಟ್ಟಾಭಿಷಿಕ್ತನಾಗಿ ರತ್ನ ಸಿಂಹಾಸನದಲ್ಲಿ ಕುಳಿತು ರಾಜ್ಯಪರಿಪಾಲನೆಯನ್ನು ಮಾಡುತ್ತಾ, ತನ್ನನ್ನು ಬಾಲ್ಯದಿಂದ ಸಂರಕ್ಷಿಸಿದ ಬ್ರಾಹ್ಮಣ ಸ್ತ್ರೀಯನ್ನು ಮಾತೃಭಾವನೆಯಿಂದಲೂ ಶುಚಿವ್ರತನನ್ನು ಸಹೋದರ ಭಾವದಿಂದಲೂ ಕಾಣುತ್ತ ಸುಖವಾಗಿದ್ದನು.

ಹೀಗೆ ಪ್ರದೋಷ ಪೂಜಾಪ್ರಭಾವದಿಂದ ಧರ್ಮಗುಪ್ತನು ಗಂಧರ್ವ ಕನ್ಯೆಯನ್ನು ಮದುವೆಯಾದನು. ಕೈಬಿಟ್ಟುಹೋಗಿದ್ದ ತನ್ನ ದೇಶಕ್ಕೆ ಅರಸಾದನು ಇವನಂತೆ ಇನ್ನೂ ಕೆಲವರು ಪ್ರದೋಷಕಾಲದಲ್ಲಿ ಸಕಲವಾದ ಇಷ್ಟಾರ್ಥಗಳನ್ನು ಕೊಡುವ ಶಿವಪೂಜೆಯನ್ನು ಮಾಡಿ ಅಂತ್ಯದಲ್ಲಿ ಕೈಲಾಸವನ್ನು ಸೇರಿದರು. ಈ ಪ್ರದೋಷಪೂಜೆಯು ಮಹಾ ವ್ರತವೆನಿಸಿಕೊಂಡು ಪವಿತ್ರವಾದದ್ದು ಧರ್ಮಾರ್ಥ ಕಾಮಮೋಕ್ಷಗಳಿಗೆ ಸಾಧನವಾದದ್ದು, ಯಾರು ಪ್ರದೋಷಕಾಲದಲ್ಲಿ ಈ ಶಿವಪೂಜೆಯನ್ನು ಮಾಡಿ, ಈ ಕಥೆಯನ್ನು ಕೇಳುವರೋ, ಯಾರು ಹೇಳುವರೋ, ಅವರು ಯಾವ ಜನ್ಮದಲ್ಲಿಯೂ ದರಿದ್ರರಾಗದೆ ಜ್ಞಾನೈಶ್ವರ್ಯಗಳಿಂದ ಕೂಡಿದವರಾಗಿ ಇಹದಲ್ಲಿ ಸುಖಭೋಗಗಳನ್ನು ಅನುಭವಿಸಿ ಕಡೆಯಲ್ಲಿ ಶಿವಪದವಿಯನ್ನು ಪಡೆಯುವರು. ಯಾರು ದುರ್ಲಭವಾದ ಮನುಷ್ಯ ಶರೀರವನ್ನು ಪಡೆದು ಶಿವಪೂಜೆಯನ್ನು ಮಾಡುವರೋ ಆ ಪುಣ್ಯಾತ್ಮರೆಲ್ಲ ತಮ್ಮ ಪುಣ್ಯಾತಿಶಯದಿಂದ ಮೂರು ಲೋಕವನ್ನು ಜಯಿಸಿದವರಾಗಿ ತಮ್ಮ ಪಾದ ಧೂಳಿಯಿಂದ ಲೋಕಗಳನ್ನು ಪವಿತ್ರವಾಗಿ ಮಾಡುವರು. ಯಾರು ಶನಿವಾರ

ಸಹಿತವಾದ ಈ ಶನಿಪ್ರದೋಷ ವ್ರತವನ್ನು ಮಾಡುವರೋ ಅವರ ಪುಣ್ಯವನ್ನು ಪರಮೇಶ್ವರನಿಂದಲು ನಿರೂಪಿಸಲಶಕ್ಯವೆಂದು ಸೂತಪುರಾಣಿಕನು ಶೌನಕಾದಿ ಮುನಿಗಳಿಗೆ ಹೇಳುತ್ತಿದ್ದನು.

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರ
ನರಪತಿ ಬಿರುತೆಂದೆಂಬರಗಂಡ ಶಂಖಚಕ್ರ ಮಕರ ಮತ್ಸ್ಯ ಶರಭಸಾಳ್ವ
ಗಂಡಭೇರುಂಡಾದಿ ನಾನಾಬಿರುದಾಂಕಿತ ಯಾದವಕುಲತಿಲಕ ಆತ್ರೇಯಸ
ಗೋತ್ರ ಅಶ್ವಲಾಯನ ಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರ
ರಾಜಒಡೆಯ ಪೌತ್ರ ನರಸರಾಜ ಒಡೆಯರ ಪುತ್ರ ಶ್ರೀ ಇಮ್ಮಡಿ
ಚಾಮರಾಜ ಒಡೆಯರು ಕರ್ಣಾಟಕ ಭಾಷೆಯಲ್ಲಿ ವಿರಚಿಸಿದ
ಸ್ಕಂದಪುರಾಣೋಕ್ತ ಬ್ರಹ್ಮೋತ್ತರಖಂಡದಲ್ಲಿ
ಶಾಂಡಿಲ್ಯಮುನಿಯು ಬ್ರಾಹ್ಮಣಸ್ತ್ರೀಗೆ ಬೋಧಿಸಿದ ಶನಿಪ್ರದೋಷವ್ರತ
ಮಹಿಮೆಯಲ್ಲಿ ಧರ್ಮಗುಪ್ತನಿಗೆ ಅಂಶುಮತೀ ವಿವಾಹ
ಸಶರೀರ ಕೈಲಾಸ ಪ್ರಾಪ್ತಿ ಎಂಬಿಲ್ಲಿಗೆ
೭ ನೆಯ ಅಧ್ಯಾಯಕ್ಕೆ ಮಂಗಳಮಸ್ತು.



## ಸೋಮವಾರ ಪೂಜಾ ಮಹಾತ್ಮೆ.

### ಎಂಟನೆಯ ಅಧ್ಯಾಯ.

ಅನಂತರದಲ್ಲಿ ಸೂತಪುರಾಣಿಕನು ಶೌನಕಾದಿ ಮಹಾಮುನಿಗಳನ್ನು ಕುರಿತು ಶಿವಪೂಜಾಮಹಿಮೆಯನ್ನು ಹೇಳುತ್ತಿದ್ದನು.

ಕೇಳಿರೈ ಋಷಿಗಳಿರಾ ! ನಿತ್ಯನಾದ ಆನಂದಮಯನಾದ ಶಾಂತನಾದ ನಿರ್ವಿಕಲ್ಪನಾದ ನಿರಾಮಯನಾದ ಆದ್ಯಂತರಹಿತನಾದ ಪರಶಿವನ ಸ್ವರೂಪ ವನ್ನು ಯಾರು ತಿಳಿಯುತ್ತಿದ್ದಾರೋ ಮತ್ತಾರು ಇಹ ಜನ್ಮದಲ್ಲಿ ಸ್ರಕ್ಚಂದನ ವನಿತಾದಿ ವಿಷಯಗಳಲ್ಲಿ ಆಸಕ್ತಿಯಿಲ್ಲದವರಾಗಿದ್ದುಕೊಂಡು ಶಿವನಲ್ಲಿ ಭಕ್ತಿ ಯಿಟ್ಟು ನಿರುಪಾಧಿಕವಾದ ಭೋಗ ಭಾಗ್ಯಗಳನ್ನು ಅನುಭವಿಸುವರೋ ಅವರು ಮತ್ತೊಂದು ಜನ್ಮದಲ್ಲಿ ಅವಶ್ಯಕವಾಗಿ ಶಿವಸಾಯುಜ್ಯವನ್ನೈದುವರು, ಮತ್ತು ಯಾರು ಪರಲೋಕಾಪೇಕ್ಷೆಯುಳ್ಳವರಾಗಿ ವಿಷಯಗಳನ್ನು ಪರಿಹರಿಸುವದಕ್ಕೆ ಶಕ್ತಿಯಿಲ್ಲದೆ ಭಕ್ತಿಯಿಂದ ಶಿವಪೂಜೆಯನ್ನು ಮಾಡುವರೋ ಅವರು ಈ ಲೋಕದಲ್ಲಿ ಸಕಲ ಭೋಗಂಗಳನ್ನೂ ಅನುಭವಿಸಿ ಅಂತ್ಯದಲ್ಲಿ ಶಿವಸಾನ್ನಿಧ್ಯ ವನ್ನು ಪಡೆವರು. ಯಾವ ಪ್ರಕಾರದಿಂದಲಾದರೂ ಶಿವಭಕ್ತಿಯುಕ್ತನಾದ ಮನುಷ್ಯನಿಗೆ ಎಂದಿಗೂ ಕೇಡಾಗುವುದಿಲ್ಲ. ಆದಕಾರಣ ಕಾಮಧೇನುವಿನಂತೆ

ಸಕಲಾಭೀಷ್ಟಗಳನ್ನೂ ಕೊಡುವ ಶಿವಪೂಜೆಯನ್ನು ಮಾಯಿಕವಾದ ಸಂಸಾರ ದಲ್ಲಿದ್ದುಕೊಂಡು ಮುಕ್ತಿಯನ್ನು ಬಯಸುವವನು ತಪ್ಪದೆ ಮಾಡುತ್ತಿರಬೇಕು. ಆವರಲ್ಲಿಯೂ ಪ್ರಶೇಷಯುಕ್ತವಾದ ಸೋಮವಾರದಲ್ಲಿಯಾದರೂ ಶಿವಪೂಜೆ ಯನ್ನು ಮಾಡಿದರೆ ಇಹಪರಗಳಲ್ಲಿ ಒಂದೂ ದುರ್ಲಭವಲ್ಲ. ಈ ಸೋಮವಾರ ವ್ರತವನ್ನು ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ಜಾತಿಯವರೂ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿಗಳೆಂಬ ನಾಲ್ಕು ಆಶ್ರಮದವರೂ, ಸ್ತ್ರೀಯರು, ಪುರುಷರು ಎಲ್ಲರೂ ಮಾಡಬಹುದು. ಈ ವ್ರತವನ್ನು ಮಾಡತಕ್ಕ ವರು ಸಾಯಂಕಾಲದವರೆಗೂ ಉಪವಾಸವಿದ್ದು ಸಂಜೆಯಲ್ಲಿ ಸ್ನಾನಮಾಡಿ ಪರಿಶುದ್ಧವಾದ ವಸ್ತ್ರಗಳನ್ನು ಧರಿಸಿಕೊಂಡು ನೀಚರೊಡನೆ ಸಂಭಾಷಣೆ ಮಾಡದೆ ದೃಢಚಿತ್ತರಾಗಿ ವೈದಿಕ ಮಂತ್ರಗಳಿಂದಲಾದರೂ ಆಗಮೋಕ್ತ ಮಂತ್ರ ಗಳಿಂದಲಾದರು ಶಿವಪೂಜೆಯನ್ನು ಮಾಡಬೇಕು. ಈ ಅರ್ಥದಲ್ಲಿ ಶ್ರೋತ್ರಾ ನಂದಕರವಾದ ಒಂದಾನೊಂದು ಇತಿಹಾಸವುಂಟು. ಅದನ್ನು ಹೇಳುವೆನು ಕೇಳಿ.

ಆರ್ಯಾವರ್ತ ದೇಶದಲ್ಲಿ ಧರ್ಮಿಷ್ಠನಾದ ಚಿತ್ರವರ್ಮನೆಂಬ ರಾಯನಿದ್ದನು, ಆತನು ಸಮಸ್ತ ಧರ್ಮಗಳನ್ನೂ ಮಾಡಿ, ನಂಬಿದವರಿಗೆ ಸಮಸ್ತ ಭಾಗ್ಯಗಳನ್ನೂ ಕೊಟ್ಟು ಸರ್ವ ಶತ್ರುಗಳನ್ನು ಜಯಿಸಿ ಅಶ್ವಮೇಧಾದಿ ಕ್ರತುಗಳನ್ನೂ ಸಹ ಮಾಡಿ, ಶರಣಾಗತ ಸಂರಕ್ಷಕನಾಗಿದ್ದನು. ಶಿವ ಕೇಶವರಲ್ಲಿ ಏಕರೀತಿಯಾದ ಭಕ್ತಿಯುಳ್ಳ ಈತನು ತನಗೆ ಅನುಕೂಲವತಿಯಾದ ಪಟ್ಟದ ಹೆಂಡತಿಯಲ್ಲಿ ಬಹುಮಂದಿ ಕುಮಾರರನ್ನು ಪಡೆದು ಪುತ್ರಿಯರಿಲ್ಲದಕಾರಣ ಪರಶಿವನನ್ನು ಪೂಜಿಸಿ, ಶಿವನ ಪ್ರಸಾದದಿಂದ ಒಬ್ಬ ಮಗಳನ್ನು ಪಡೆದು, ಸಫಲನಾಗಿ ಸಂತೋಷಪಡುತ್ತಿದ್ದನು. ಒಂದು ಶುಭದಿವಸ ಸುಮೂಹರ್ತದಲ್ಲಿ ಜ್ಯೋತಿ ಷ್ಕರನ್ನು ಕರೆಸಿ, ಆ ಪುತ್ರಿಯ ಜಾತಕಫಲಗಳನ್ನು ಕೇಳಲಾಗಿ ಒಬ್ಬಾನೊಬ್ಬ ಜ್ಯೋತಿಷ್ಕನು ದೊರೆಯನ್ನು ಕುರಿತು ಇಂತೆಂದನು, ಕೇಳೈ ಅರಸೇ! ಈ ಕುಮಾರಿಗೆ ಜನ್ಮನಾಮ ಸೀಮಂತಿನೀ ಎಂದು ಇವಳು ದೀರ್ಘಸುಮಂಗಲಿ ಯಾಗಿರುವಳು, ಅಲ್ಲದೆ ಸಕಲ ಸುಗುಣಗಳುಳ್ಳವಳಾಗಿ ಅಷ್ಟಪುತ್ರರನ್ನು ಪಡೆದು ಆಯುತ ವರ್ಷಗಳು ಪತಿಸಹಿತ ಸರ್ವಭೋಗಗಳನ್ನೂ ಅನುಭವಿಸಿ, ಸುಖಪಡು ವಳೆಂದು ಹೇಳಲು ರಾಜನು ಸಂತುಷ್ಟನಾಗಿ ಆ ಜ್ಯೋತಿಷ್ಕನಿಗೆ ವಸ್ತ್ರಾಭರಣ ಗಳನ್ನು ಕೊಟ್ಟು ಕಳುಹಿಸಿದನು. ಅನಂತರದಲ್ಲಿ ಮತ್ತೊಬ್ಬ ಬ್ರಾಹ್ಮಣನು ಬಂದು ರಾಜಪುತ್ರಿಯ ಜನನಕಾಲದ ಗ್ರಹಸಂಪತ್ತಿಯನ್ನು ಮಾತ್ರ ವಿಚಾರಿಸಿ ದವನಾಗಿ ನಿರ್ಭಯವಾಗಿ ಹದಿನಾಲ್ಕನೆಯ ಸಂವತ್ಸರದಲ್ಲಿ ಇವಳು ವೈಧವ್ಯ ವನ್ನು ಪಡೆಯುವಳೆಂದು ಹೇಳಲಾಗಿ, ಈ ರಾಯನು ಸ್ತಂಭೀಭೂತನಾಗಿ ಚಿಂತಾ ಖೇದದೊಡನೆ ಕೂಡಿ ಆ ಬ್ರಾಹ್ಮಣನನ್ನು ಕಳುಹಿಸಿ ಇದೆಲ್ಲ ದೈವಾಧೀನ

ದಿಂದ ಆಗುವುದು, ದುಃಖಪಡುವುದರಿಂದ ಪ್ರಯೋಜನವಿಲ್ಲ ಎಂದು ದೃಢಚಿತ್ತ ನಾಗಿದ್ದನು. ಬಳಿಕ ಆ ಸೀಮಂತಿನಿ ಬಾಲ್ಯವನ್ನು ಕಳೆದು ದಿನದಿನಕ್ಕೆ ಪ್ರವೀಣ ಳಾಗಿ ಪ್ರಸಂಗದಿಂದ ತನ್ನ ಸಖಿಯರ ಮುಂದೆ ತನಗೆ ಮುಂದೆ ಬರುವ ವೈಧವ್ಯ ವನ್ನು ಹೇಳಲು ಅವರು ಅದನ್ನು ಕೇಳಿ ಚಿಂತಾಕ್ರಾಂತರಾದರು. ಆ ಸಮಯ ದಲ್ಲಿ ಯಾಜ್ಞವಲ್ಕ್ಯ ಮಹಾಮುನಿಯ ಪತ್ನಿಯಾದ ಮೈತ್ರೇಯಿಯು ಅಕಸ್ಮಾತ್ ಅಲ್ಲಿಗೆ ಬಂದಳು ಆಕೆಯ ಮರೆಹೊಕ್ಕು, ಎಲೈ ಮೈತ್ರೇಯಿ ದೇವಿಯೇ! ನನಗೆ ವೈಧವ್ಯ ಬರುತ್ತದೆ ಎಂಬ ಮಾತನ್ನು ಕೇಳಿ ವ್ಯಸನಪಟ್ಟು ನಿನ್ನನ್ನು ಮರೆ ಹೊಕ್ಕಿರುವೆನು, ನೀನು ಆ ಭಯ ಹೋಗುವ ಉಪಾಯವನ್ನು ಹೇಳಿ ನನಗೆ ಸೌಮಾಂಗಲ್ಯವನ್ನು ಕೊಡು ನಿನ್ನ ಪಾದಕಮಲವನ್ನೇ ಆಶ್ರಯಿಸಿರುತ್ತೇನೆಂದು ಬೇಡಿಕೊಂಡಳು. ಆಗ ಮೈತ್ರೇಯಿಯು ಇಂತೆಂದಳು, ಎಲೈ ಸೀಮಂತಿನಿಯೇ ನೀನು ಸೌಮಂಗಲ್ಯವನ್ನು ಕೋರುವುದಾದರೆ ಸೋಮವಾರದಲ್ಲಿ ಪರಮೇಶ್ವರ ಸಹಿತಳಾದ ಪಾರ್ವತೀದೇವಿಯನ್ನು ಪೂಜಿಸಬೇಕು. ಅದರ ವಿಧಾನ ಹೇಗೆಂ ದರೆ ? ಆ ಸೋಮವಾರದ ದಿನ ಸಾಯಂಕಾಲದವರೆಗೂ ಉಪವಾಸವಿದ್ದು ಸ್ನಾನಮಾಡಿ, ಶುಭಪ್ರದಮಾದ ವಸ್ತುಗಳನ್ನು ತೆಗೆದುಕೊಂಡು ಶುಭಪ್ರದ ಮಾದ ಮಡಿಯನ್ನುಟ್ಟು ನೀಚರೊಡನೆ ಸಂಭಾಷಣೆ ಮಾಡದೆ ಏಕಾಗ್ರಚಿತ್ತ ದಿಂದ ರಾತ್ರಿಯಲ್ಲಿ ಪಾರ್ವತೀ ಪರಮೇಶ್ವರರಿಗೆ ವಿಭವಾನುಸಾರವಾಗಿ ಪೂಜೆ ಯನ್ನು ಮಾಡು, ಅದರ ಫಲವೇನೆಂದೊಡೆ:—

ಅಭಿಷೇಕದಿಂದ ಪಾಪಕ್ಷಯವಾಗುವುದು. ಪೀಠ ಪೂಜೆಯಿಂದ ಪುರುಷ ರಿಗೆ ರಾಜ್ಯಾಧಿಪತ್ಯವಾಗುವದು, ಸ್ತ್ರೀಯರಿಗೆ ಸೌಮಂಗಲ್ಯ ಸ್ಥಿರವಾಗುವದು, ಗಂಧ ಪುಷ್ಪಾಕ್ಷತೆಗಳ ಸಮರ್ಪಣೆಯಿಂದ ಋಣಭಯ ನಿವೃತ್ತಿಯಾಗಿ ಸೌಖ್ಯವಾ ಗುವದು, ಧೂಪ ಸಮರ್ಪಣೆಯಿಂದ ದೇಹದಲ್ಲಿ ಸುಗಂಧವುಂಟಾಗುವದು, ದೀಪ ಸಮರ್ಪಣೆಯಿಂದ ಕಾಂತಿ ಹೆಚ್ಚುವದು, ನೈವೇದ್ಯ ಸಮರ್ಪಣೆಯಿಂದ ವಸ್ತ್ರಾ ಭರಣ ಪುಷ್ಪಶಯನ ಅನ್ನಪಾನ ತಾಂಬೂಲಾದಿ ಸಕಲ ಭೋಗಭಾಗ್ಯಗಳೆಂಬಷ್ಟ ಭೋಗಗಳು ಸಿದ್ಧಿಸುವುವು, ತಾಂಬೂಲ ಸಮರ್ಪಣೆಯಿಂದ ಸಕಲೈಶ್ವರ್ಯ ಲಭಿ ಸುವದು, ನಮಸ್ಕಾರದಿಂದ ಧರ್ಮಾರ್ಥಕಾಮ ಮೋಕ್ಷಗಳುಂಟಾಗುವುವು, ಪೂಜಾನಂತರದಲ್ಲಿ ಪಂಚಾಕ್ಷರಿ ಜಪದಿಂದ ಅಣಿಮಾದ್ಯಷ್ಟೈಶ್ವರ್ಯ ಸಿದ್ಧಿಯಾಗು ವುದು, ನೈವೇದ್ಯ ಶೇಷಮಂ ಅಗ್ನಿಯಲ್ಲಿ ಮೂಲಮಂತ್ರದಿಂದ ಹೋಮವನ್ನು ಮಾಡಲು ಕೋರಿದ ಕೋರಿಕೆಗಳೆಲ್ಲಾ ಸಿದ್ಧಿಸುವುವು, ಪೂಜಾಂಗವಾದ ಬ್ರಾಹ್ಮಣ ಭೋಜನದಿಂದ ಸಮಸ್ತವಾದ ದೇವತೆಗಳು ತೃಪ್ತಿಪಡುವರು. ಹೀಗೆ ಪಾರ್ವತೀ ಪರಮೇಶ್ವರರನ್ನು ಪೂಜಿಸಿದರೆ ನಿನಗೆ ಸಕಲ ಕ್ಲೇಶಗಳು ಪರಿಹಾರವಾಗಿ ಸಕಲೇ ಷ್ಟಾರ್ಥ ಸಿದ್ಧಿಗಳಾಗುವುವೆಂದು ಮೈತ್ರೇಯಿದೇವಿಯು ಸೀಮಂತಿನಿಗೆ ಸೋಮ

ವಾರ ವ್ರತವನ್ನು ಉಪದೇಶಿಸಲು, ಆ ಸೀಮಂತಿನಿಯು ಅದೇ ರೀತಿಯಲ್ಲಿ ಸೋಮ
ವಾರ ವ್ರತವನ್ನು ಮಾಡುತ್ತಿದ್ದಳು. ಬಳಿಕ ಚಿತ್ರವರ್ಮ ಮಹಾರಾಯನು ದಮ
ಯಂತಿಗೂ ನಳಚಕ್ರವರ್ತಿಗೂ ಪೌತ್ರನಾದ ಇಂದ್ರಸೇನನಿಗೆ ಪುತ್ರನಾದ
ಚಂದ್ರಾಂಗದನನ್ನು ಕರೆಸಿ ಅತ್ಯಂತ ಸಂಭ್ರಮದಿಂದ ತನ್ನ ಪುತ್ರಿಯಾದ
ಸೀಮಂತಿನಿಯನ್ನು ಆತನಿಗೆ ಕೊಟ್ಟು ವಿಧ್ಯುಕ್ತವಾಗಿ ವಿವಾಹವನ್ನು ಮಾಡಲು
ಆ ಚಂದ್ರಾಂಗದನು ಮಾವನ ಮನೆಯಲ್ಲಿ ಕೆಲವುಕಾಲ ಸುಖದಿಂದಿದ್ದು ಒಂದಾ
ನೊಂದು ದಿನ ತನ್ನ ಸ್ನೇಹಿತರನ್ನು ಕೂಡಿಕೊಂಡು ವಿನೋದಾರ್ಥವಾಗಿ ಹಡಗು
ಹತ್ತಿ ಯಮುನಾನದಿಯನ್ನು ದಾಟುತ್ತಿರುವಾಗ, ಆ ಓಡೆಯು ದೈವಾಧೀನ
ದಿಂದ ನೀರಿನ ಸುಳಿಗೆ ಸಿಕ್ಕಿ ಅಂಬಿಗ ಸಹಿತವಾಗಿ ಮುಳಿಗಿ ಹೋಯಿತು. ಆಗ
ದಡದಲ್ಲಿ ನಿಂತು ನೋಡುತ್ತಿದ್ದ ಸೈನ್ಯದವರು ಹೋಂಕಾರದೊಡನೆ ಪ್ರಳಾಪ
ಮಾಡಿದರು ಅದು ಆಕಾಶವನ್ನು ಮುಟ್ಟಿತು, ಹೀಗೆ ಮುಳುಗಿದ ಓಡೆಯಲ್ಲಿದ್ದವ
ರಲ್ಲಿ ಕೆಲವರನ್ನು ಮೊಸಳೆಗಳು ನುಂಗಿದವು. ಉಳಿದ ಕೆಲವರು ನೀರೊಳಗೆ
ಮುಳುಗಿ ಮೃತಿಯನ್ನೈದಿದರು. ಚಂದ್ರಾಂಗದನೆ ಮೊದಲಾದವರು ಕಾಣಿ
ಸದೇ ಹೋದರು. ಈ ವೃತ್ತಾಂತವನ್ನು ಕೇಳಿ, ಚಿತ್ರವರ್ಮ ಮಹಾರಾಯನು
ಯಮುನಾನದಿಯ ತೀರಕ್ಕೆ ಬಂದು, ಅತ್ಯಂತ ದುಃಖದಿಂದ ಮೂರ್ಛಿತನಾಗಿ
ನೆಲಕ್ಕೆ ಬಿದ್ದನು. ಆಗ ಮಂತ್ರಿಗಳು ದಳಕರ್ತರು ಪುರೋಹಿತರು ಮಂಡೆ
ಯನ್ನು ಕೆದರಿಕೊಂಡು ಆ ರಾಯನ ಬಳಿಗೆ ಹೋಗಿ ಉಪಚರಿಸುತ್ತಿರುವ
ವಾರ್ತೆಯನ್ನು ಅಂತಃಪುರದಲ್ಲಿದ್ದ ಆ ಚಿತ್ರವರ್ಮರಾಯನ ರಾಣಿಯರೂ ಕೇಳಿ
ಮೂರ್ಛಿತರಾದರು. ಆಗ ಸೀಮಂತಿನಿಯು ಆ ವಾರ್ತೆಯನ್ನು ಕೇಳಿ ಮೂರ್ಛಿತ
ಳಾಗಿ ಭೂಮಿಯಮೇಲೆ ಬಿದ್ದಳು.

ಹೀಗಿರುವಲ್ಲಿ ಇಂದ್ರಸೇನನು ತನ್ನ ಮಗನ ಸಮಾಚಾರವನ್ನು ಕೇಳಿ
ರಾಣಿವಾಸದ ಸ್ತ್ರೀಯರು ಸಹಿತ ಮೂರ್ಛಿತನಾದನು. ಆತನ ಮಂತ್ರಿಗಳು
ಪುರಜನರು ಮೊದಲಾದವರು ಮಂಡೆ ಮುಖ ಎದೆಗಳನ್ನು ಹೊಡೆದುಕೊಂಡು
ಎಲೈ ರಾಜಕುಮಾರನೇ ! ಎಲ್ಲಿಗೆ ಪೋದೆ, ಎಲೈ ತಂದೆಯೇ ! ಎಲ್ಲಿ ಇದ್ದೀಯೆ?
ಎಂದು ಚಿತ್ರವರ್ಮಮಹಾರಾಯನ ಪಟ್ಟಣದ ಸಕಲ ಜನರೂ ಬಹುಪ್ರಕಾರವಾಗಿ
ದುಃಖಿಸಿದರು, ಆ ದುಃಖವನ್ನು ಹೇಳಲಸಾಧ್ಯವಾಗಿದೆ ಬಳಿಕ ಆ ಚಿತ್ರವರ್ಮ
ರಾಯನು ಹಿರಿಯರಿಂದ ಬೋಧಿಸಲ್ಪಟ್ಟವನಾಗಿ, ತನ್ನ ಮನೆಗೆ ಬಂದು ತನ್ನ
ಮಗಳಾದ ಸೀಮಂತಿನಿಯನ್ನು ಸಮಾಧಾನಪಡಿಸಿ, ಯಮುನಾನದಿಯಲ್ಲಿ ಮುಳಿ
ಗಿಹೋದ ತನ್ನ ಅಳಿಯನೆ ಮುಂತಾದವರ ಯೋಗಕ್ಷೇಮವನ್ನು ವಿಚಾರಿಸುವ
ದಕ್ಕೆ ಬಂದಿದ್ದ ಆತನ ಜ್ಞಾತಿಗಳಿಂದ ಉತ್ತರಕ್ರಿಯೆಗಳನ್ನು ಮಾಡಿಸಿದನು.
ಸೀಮಂತಿನಿಯು ಶರೀರತ್ಯಾಗವನ್ನು ಮಾಡಿ ಗಂಡನು ಹೋದ ಲೋಕಕೆ

ಹೋಗುವೆನೆಂದು ಯತ್ನೀಕರಿಸಿ ತಂದೆಯಾದ ಚಿತ್ರವರ್ಮನಿಂದ ಬೇಡವೆಂದು ತಡೆಯಲ್ಪಟ್ಟವಳಾಗಿ ವೈಧವ್ಯವನ್ನು ಅನುಭವಿಸುತ್ತಾ ಮೈತ್ರೇಯಿ ದೇವಿಯಿಂದ ತನಗೆ ಉಪದೇಶ ಮಾಡಲ್ಪಟ್ಟ ಸೋಮವಾರ ವ್ರತವನ್ನು ಆಚರಿಸುತ್ತಿದ್ದಳು.

ಹೀಗೆ ತನ್ನ ಹದಿನಾಲ್ಕನೆಯ ವರ್ಷದಲ್ಲಿ ವೈಧವ್ಯವನ್ನು ಪಡೆದು ಸೀಮಂತಿನಿಯು ಪರಮೇಶ್ವರನ ಚರಣಾರವಿಂದಗಳನ್ನು ಧ್ಯಾನಿಸುತ್ತಾ ಮೂರು ವರುಷಗಳನ್ನು ಕಳೆದಳು. ಇತ್ತ ಪುತ್ರಶೋಕದಿಂದ ವ್ಯಾಕುಲಚಿತ್ತನಾಗಿದ್ದ ಇಂದ್ರಸೇನ ಮಹಾರಾಯನ ರಾಜ್ಯವನ್ನು ದಾಯಾದಿಗಳು ಬಲಾತ್ಕಾರದಿಂದ ಆಕ್ರಮಿಸಿಕೊಂಡು ಬಂಧುಮಿತ್ರ ಕಳತ್ರಾದಿಗಳೊಡನೆ ಅವನನ್ನು ಸೆರೆಯಲ್ಲಿ ಹಾಕಿದರು. ಅನಂತರದಲ್ಲಿ ಯಮುನಾ ನದಿಯೊಳಗೆ ಮುಳುಗಿಹೋದ ಚಂದ್ರಾಂಗದನು ಪಾತಾಳಲೋಕಕ್ಕೆ ಇಳಿದು ಹೋಗುತ್ತಿರುವಾಗ ಮಾರ್ಗಮಧ್ಯದಲ್ಲಿ ಜಲಕ್ರೀಡೆಯನ್ನಾಡುತ್ತಿದ್ದ ನಾಗಕನ್ಯಕೆಯು ಅವನನ್ನು ಕಂಡು ಆಶ್ಚರ್ಯಪಟ್ಟು ಪಾತಾಳ ಲೋಕದ ತಕ್ಷಕನ ಪಟ್ಟಣಕ್ಕೆ ಕರೆದುಕೊಂಡು ಹೋದಳು. ಆಗ ಚಂದ್ರಾಂಗದನು ದೇವೇಂದ್ರನ ಅರಮನೆಯೋಪಾದಿಯಲ್ಲಿ ರಮ್ಯವಾದಂಥಾ ವಜ್ರವಿದ್ರುಮ ವೈಡೂರ್ಯಗಳಿಂದ ಕೆತ್ತಲ್ಪಟ್ಟ ಉಪ್ಪರಿಗೆಗಳುಳ್ಳ ಮಾಣಿಕ್ಯಮಯವಾದ ಊರು ಬಾಗಿಲುಗಳಿಂದ ಒಪ್ಪುತ್ತಿದ್ದ ಮುತ್ತಿನ ತೋರಣಗಳಿಂದ ಮನೋಹರವಾದ ಚಂದ್ರಕಾಂತ ಶಿಲೆಗಳಿಂದ ಘಟ್ಟಿಸಿದ ಭೂಭಾಗಗಳುಳ್ಳ ಚಿನ್ನದ ಕದಗಳುಳ್ಳ ಮನೋಹರವಾದ ರತ್ನದೀಪಗಳಿಂದ ಪ್ರಕಾಶಮಾನವಾದಂಥಾ ಆ ತಕ್ಷಕನ ಪಟ್ಟಣವನ್ನು ಪ್ರವೇಶಿಸಿ ಅಲ್ಲಿ ನವರತ್ನ ನಿರ್ಮಿತವಾದ ಸಭಾಮಂಟಪದೊಳು ಸಿಂಹಾಸನದಲ್ಲಿ ಕುಳಿತು ಸಹಸ್ರಫಣೆಗಳುಳ್ಳವನಾಗಿ ದಿವ್ಯ ವಸ್ತ್ರಗಳನ್ನು ಧರಿಸಿ ದಿವ್ಯ ಪರಿಮಳ ಗಂಧವನ್ನು ಲೇಪಿಸಿಕೊಂಡು ರತ್ನಖಚಿತವಾದ ಕಿರೀಟಕುಂಡಲಾಭರಣಗಳಿಂದ ಒಪ್ಪುತ್ತಿರುವ ಶರೀರವುಳ್ಳವನಾಗಿ ತನ್ನುತಮ್ಮ ಫಣಾಮಣಿಗಳ ಕಾಂತಿಯಿಂದ ಪ್ರಕಾಶಿಸುತ್ತಿರುವ ದೇಹಂಗಳುಳ್ಳವರಾಗಿ ಅಂಜಲಿಬದ್ಧರಾಗಿ ಉಭಯಪಾರ್ಶ್ವಗಳಲ್ಲಿಯೂ ನಿಂತು ತನ್ನನ್ನು ಓಲೈಸುತ್ತಿರುವ ಸರ್ಪಶ್ರೇಷ್ಠರಿಂದಕೂಡಿ ಸೌಂದರ್ಯದಿಂದಲೂ ಯವ್ವನದಿಂದಲೂ ವಿಲಾಸದಿಂದಲೂ ವಿಭ್ರಮಗಳಿಂದಲೂ ಮನಂಗೂಳಿಸುವ ಅನೇಕ ಕೋಟಿ ನಾಗಕನ್ಯಕೆಯರಿಂದ ಸೇವಿಸಲ್ಪಡುತ್ತ ಅಗ್ನಿಗೂ ಸೂರ್ಯನಿಗೂ ಸಮಾನವಾದ ಪ್ರಕಾಶವುಳ್ಳ ತಕ್ಷಕನೆಂಬ ನಾಗೇಶ್ವರನನ್ನು ಕಂಡು ಸಾಷ್ಟಾಂಗ ಪೂರ್ವಕವಾಗಿ ನಮುಸ್ಕರಿಸಿದನು. ಆಗ ತಕ್ಷಕನು ಚಂದ್ರಾಂಗದನನ್ನು ನೋಡಿ ಇವನು ಯಾರು, ಯಾವ ಲೋಕದವನು, ಏನುಕಾರಣ ಇಲ್ಲಿಗೆ ಬಂದನೆಂದು ನಾಗಕನ್ಯೆಯರನ್ನು ಕೇಳಿದನು. ಅದಕ್ಕೆ ಅವರು ಸ್ವಾಮಿ! ನಾವು ಯಮುನಾ ತೀರದಲ್ಲಿ ಕ್ರೀಡಿಸುತ್ತಿದ್ದಾಗ ಇವನನ್ನು ಕಂಡು ನಿನ್ನ ಸಾನ್ನಿಧ್ಯಕ್ಕೆ ಕರೆದುಕೊಂಡು ಬಂದೆವು. ಇದು ಹೊರತು ಈತನ

ಕುಲಗೋತ್ರಗಳೊಂದೂ ನಮಗೆ ತಿಳಿಯದೆಂಮ ಬಿನ್ನವಿಸಿದರು, ಆ ತಕ್ಷಕನು ಅವರ ಮಾತನ್ನು ಕೇಳಿ ಚಂದ್ರಾಂಗದನನ್ನು ಕುರಿತು ಎಲೈ ರಾಜಕುಮಾರನೇ ! ನೀನು ಯಾರು, ನಿನ್ನ ದೇಶವು ಯಾವುದು, ನಿನ್ನ ಹೆಸರೇನು, ಏನುಕಾರಣ ಇಲ್ಲಿಗೆ ಬಂದೆ, ಹೇಳು ಎನಲು, ಆ ಚಂದ್ರಾಂಗದನು ಭೋ ! ಸ್ವಾಮಿಾ ! ಭೂಲೋಕದಲ್ಲಿ ನಿಷಧವೆಂಬ ಒಂದು ದೇಶವುಂಟು ಆ ದೇಶಕ್ಕೆ ಒಡೆಯನಾದ ನಳಚಕ್ರವರ್ತಿಗೆ ದಮಯಂತಿಯಲ್ಲಿ ಇಂದ್ರಸೇನನೆಂಬ ಕುಮಾರನು ಹುಟ್ಟಿದನು ಆ ಇಂದ್ರಸೇನನಿಗೆ ನಾನು ಮಗನಾಗಬೇಕು ನನ್ನ ಹೆಸರು ಚಂದ್ರಾಂಗದನು, ನಾನು ಮದುವೆಯಾದಮೇಲೆ ಮಾವನ ಮನೆಯಲ್ಲಿದ್ದು ಒಂದಾನೊಂದು ದಿನ ವಿನೋದಾರ್ಥವಾಗಿ ಹಡಗಿನಲ್ಲಿ ಕುಳಿತು ಯಮುನಾನದಿಯಲ್ಲಿ ಕ್ರೀಡಿಸುತ್ತಿದ್ದಾಗ ದೈವವಶದಿಂದ ಆ ಹಡಗು ಮುಳುಗಿಹೋತು. ಬಳಿಕ ಅಲ್ಲಿ ಈ ನಾಗಕನ್ಯೆಯರು ನನ್ನನ್ನು ಕಂಡು ನಿನ್ನ ಸಾನ್ನಿಧ್ಯಕ್ಕೆ ಕರೆತಂದರು, ನಾನು ಬಹು ಜನ್ಮಂಗಳಲ್ಲಿ ಮಾಡಿದ ಪುಣ್ಯವಿಶೇಷದಿಂದ ನಿನ್ನನ್ನು ಕಂಡು ಕೃತಾರ್ಥನಾದೆನು. ಯಾವಕಾರಣದಿಂದ ನಾನು ನಿನ್ನ ಕೃಪಾದೃಷ್ಟಿಯಿಂದ ನೋಡಲ್ಪಟ್ಟೆನೋ ಅದರಿಂದಲೆ ನಮ್ಮ ತಂದೆತಾಯಿಗಳೂ ಕೃತಾರ್ಥರಾದರೆಂದು ಧೈರ್ಯದಿಂದ ನುಡಿದನು, ಆಗ ತಕ್ಷಕನು ಚಂದ್ರಾಂಗದನ ವಿನಯಯುಕ್ತವಾದ ಮೃದು ವಚನಗಳನ್ನು ಕೇಳಿ, ಎಲೈ ಚಂದ್ರಾಂಗದನೇ ! ನೀವು ವಂಶಾನುಕ್ರಮದಿಂದ ಯಾವ ದೇವನನ್ನು ಪೂಜಿಸುತ್ತಿದ್ದಿರಿ, ಹೇಳಿ ಎಂದು ಸಂತೋಷದಿಂದ ಕೇಳಲಾಗಿ ಆ ಚಂದ್ರಾಂಗದನು ತಕ್ಷಕನಿಗೆ ಇಂತೆಂದನು.

ಸ್ವಾಮಿ ! ಸಮಸ್ತ ದೇವತೆಗಳಲ್ಲಿಯೂ ಯಾವ ದೇವನು ಮಹಾದೇವನೆನಿಸಿಕೊಳ್ಳುವನೋ ಯಾವ ದೇವನು ತನ್ನ ಮಾಯೆಯೊಡನೆ ಕೂಡಿದ ಸಮಯದಲ್ಲಿ ಹುಟ್ಟುವ ರಾಜಸಾಂಶದಿಂದ ಜನಿಸಿದ ಬ್ರಹ್ಮನು ಚತುರ್ದಶ ಭುವನಗಳನ್ನು ನಿರ್ಮಿಸುತ್ತಿದ್ದಾನೋ, ಯಾವ ದೇವನ ತಾಮಸಾಂಶದಿಂದ ಜನಿಸಿದ ರುದ್ರನು ಪ್ರಳಯಕಾಲದಲ್ಲಿ ಆ ಜಗಗಳನ್ನು ಸಂಹರಿಸುತ್ತಿದ್ದಾನೋ, ಯಾವ ದೇವನ ಸಾತ್ವಿಕಾಂಶದಿಂದ ಹುಟ್ಟಿದ ನಾರಾಯಣನು ಆ ಪ್ರಪಂಚಗಳ ಸಂರಕ್ಷಣೆಯನ್ನು ಮಾಡುತ್ತಿದ್ದಾನೋ ಅಂಥಾ ಪರಶಿವನನ್ನು ನಾವು ಸದಾ ಪೂಜಿಸುತ್ತಿದ್ದೇವೆ. ಯಾವ ದೇವನು ಬ್ರಹ್ಮನಿಗೆ ಸೃಷ್ಟಿಕರ್ತನೋ, ವಿಷ್ಣುವಿಗೆ ಪಾಲಕನೋ, ರುದ್ರನಿಗೆ ನಾಶಕನೊ, ಸೂರ್ಯಾದಿಗಳಿಗೆ ಪ್ರಕಾಶಕನೋ ಅಂಥಾ ಪರಶಿವನನ್ನು ನಾವು ಸದಾ ಪೂಜಿಸುತ್ತಿದ್ದೇವೆ, ಯಾವ ದೇವನು ಹೃದಯ ಕಮಲದಲ್ಲಿ ದಹರಾಕಾಶದಲ್ಲಿ ಇರುವನಾದರೂ ಅಜ್ಞಾನಿಗಳಿಗೆ ದೂರವಾಗಿ ಕಾಣುತ್ತಿದ್ದಾನೋ, ಅಂಥಾ ಪರಶಿವನನ್ನು ಪೂಜಿಸುತ್ತಿದ್ದೇವೆ. ಯಾವ ದೇವನು ಭೂತ ಭವಿಷ್ಯದ್ವರ್ತಮಾನ ಕಾಲಂಗಳಿಂದ ಬಾಧಿಸಲ್ಪಡದೆ ಸರ್ವಜಗ

ದ್ವ್ಯಾಪಿಯಾಗಿ ಸಮಸ್ತ ವಸ್ತ್ವಾತ್ಮಕನಾಗಿ ದೇಶಕಾಲ ವಸ್ತುಪರಿಚ್ಛೇದ ಶೂನ್ಯವಾಗಿರುವನೋ ಅಂಥ ಪರಶಿವನನ್ನು ಪೂಜಿಸುತ್ತಿದ್ದೇವೆ ಯಾವ ದೇವನು ಪೃಥಿವ್ಯಾದಿ ಪಂಚಭೂತಗಳಲ್ಲಿ ಚೈತನ್ಯರೂಪನಾಗಿರುವನೋ ಅಂಥಾ ಪರಶಿವನನ್ನು ಪೂಜಿಸುತ್ತಿದ್ದೇವೆ. ಯಾವ ದೇವನು ಸರ್ವಸಾಕ್ಷಿಯಾಗಿ ಅಂತ ರ್ಯಾಮಿಯಾಗಿ ನಿರ್ಲೇಪನಾಗಿರುವನೋ ಅಂಥಾ ಪರಶಿವನನ್ನು ಪೂಜಿಸುತ್ತಿ ದ್ದೇವೆ. ಈ ಪ್ರಪಂಚವು ಯಾವ ದೇವನ ಅಧೀನವಾಗಿ ಯಾವ ದೇವನ ಜ್ಞಾನದಿಂದ ನಶಿಸುವದೋ ಅಂಥಾ ಪರಶಿವನನ್ನು ಪೂಜಿಸುತ್ತಿದ್ದೇವೆ. ಯಾವ ದೇವನು ಸತ್ವ ರಜಸ್ತಮೋಗುಣಗಳಿಗೆ ಭಿನ್ನವಾದ ಅಂತಃಕರಣಗಳಲ್ಲಿ ಪ್ರತಿ ಫಲಿಸಿ ಕ್ಷೇತ್ರಜ್ಞನೆಂದೂ ಕೂಟಸ್ಥನೆಂದೂ ಪುರಾಣಪುರುಷನೆಂದೂ ಕರೆಯಲ್ಪ ಡುವನೋ, ಯಾವ ದೇವನು ಜಲದಲ್ಲಿ ಪ್ರತಿಫಲಿಸಿದ ಸೂರ್ಯ ಪ್ರತಿಬಿಂಬಗಳೋ ಪಾದಿಯಲ್ಲಿ ತಾನು ಒಬ್ಬನೇ ಮಾಯಾ ಪ್ರತಿಫಲಿತನಾಗಿ ಅನೇಕವಿಧವಾಗಿ ತೋರುವನೋ ಯಾವ ದೇವನ ಸ್ವರೂಪವು ಅದ್ಯಂತ್ಯವಾಗಿ ಮನಸ್ಸಿಗೂ ವಚನ ಗಳಿಗೂ ಅವಿಷಯವಾದುದೋ ಅಂಥಾ ಪರಶಿವನನನ್ನು ಪೂಜಿಸುತ್ತಿದ್ದೇವೆ. ಯಾವ ದೇವನ ಕೃಪೆಯನ್ನು ಪಡೆದು ಸತ್ಪುರುಷರು ಕರ್ಮಬಾಧಾ ವಿಮುಕ್ತರಾಗಿ ಬ್ರಹ್ಮಾದಿದೇವತೆಗಳ ಪದವಿಯನ್ನು ಕೂಡ ಬಯಸದಿರುವರೋ ನೀಚಜಾತಿ ಯಲ್ಲಿ ಹುಟ್ಟಿದವರಾದರೂ ಯಾವ ದೇವನ ಸ್ಮರಣೆಯಿಂದ ಪಾಪಗಳನ್ನು ಪರಿ ಹರಿಸಿಕೊಂಡು ಧನ್ಯರಾಗುವರೊ ಮತ್ತು ಯಾವ ದೇವನ ಸ್ವರೂಪವನ್ನು ವೇದಗಳು ಅರಿಯದೆ ಇರುವವೋ ಅಂಥಾ ಪರಶಿವನನ್ನು ನಾವು ಪೂಜಿಸುತ್ತಿ ದ್ದೇವೆ. ಯಾವ ದೇವನ ಶಿರಸ್ಸಿನಲ್ಲಿ ಗಂಗೆಯು ಚಂದ್ರಕಳೆಯು ಇಹವೋ ಯಾವ ದೇವನು ಜಗನ್ಮಾತೆಯಾದ ಷಡ್ಗುಣೈಶ್ವರ್ಯ ಸಂಪನ್ನಳಾದ ಪಾರ್ವತೀ ದೇವಿಗೆ ಪತಿಯಾದನೋ ಯಾವ ದೇವನಿಗೆ ತಕ್ಷಕ ವಾಸುಕಿಗಳು ಕರ್ಣಕುಂಡ ಲಗಳಾದರೋ ಯಾವ ದೇವನ ಧನುಸ್ಸು ಮೇರುಪರ್ವತವೋ ಯಾವ ದೇವನ ಬಾಣವು ವಿಷ್ಣುವೋ ಯಾವ ದೇವನ ರಥವು ಭೂಮಿಯೋ ಯಾವ ದೇವನ ರಥಾಶ್ವಗಳು ವೇದಗಳೋ ಯಾವ ದೇವನ ರಥಚಕ್ರಗಳು ಸೂರ್ಯಚಂದ್ರರೋ ಯಾವ ದೇವನ ಕುದುರೆ ಹಗ್ಗಗಳು ಸಕಲ ಹಾವುಗಳೋ ಯಾವ ದೇವನ ದಾಸ್ಯದಿಂದಲೇ ವಿಷ್ಣ್ವಾದಿ ದುರ್ಜಯರಾದ ರಾಕ್ಷಸರು ಮೃತಿಯನ್ನು ಹೊಂದಿ ದರೋ ಯಾವ ದೇವನ ಪಾದಪದ್ಮಂಗಳು ಶೃತಿ ಶಿರಸ್ಸುಗಳಲ್ಲಿ ಒಪ್ಪುತ್ತಿಹವೋ ಯಾವ ದೇವನ ಪ್ರಭಾವವು ಯೋಗೀಶ್ವರರ ಸಭೆಗಳಲ್ಲಿ ಕೊಂಡಾಡಲ್ಪಡುತ್ತಿರು ವವೋ ಯಾವ ದೇವನ ತತ್ವವು ಪೃಥಿವ್ಯಾದಿ ಪಂಚಭೂತಗಳು ಶಬ್ದಸ್ಪರ್ಶ ರೂಪರಸ ಗಂಧಗಳೆಂಬ ಪಂಚತನ್ಮಾತ್ರೆಗಳು ತ್ವಕ್ಚಕ್ಷು ಶ್ರೋತ್ರ ಜಿಹ್ವಾ ಘ್ರಾಣಗಳೆಂಬ ಜ್ಞಾನೇಂದ್ರಿಯಗಳೂ ವಾಕ್ಪಾಣಿಪಾದ ಪಾಯೂಪಸ್ಥಗಳೆಂಬ

ಇಪ್ಪತ್ತುನಾಲ್ಕು ತತ್ವಗಳನ್ನು ಅತಿಕ್ರಮಿಸಿರುವ ಇಪ್ಪತ್ತೈದನೆಯದೋ ಯಾವನ ಅಷ್ಟದೇಹಗಳು ಪೃಥಿವ್ಯಪಸ್ತೇಜೋವಾಯ್ವಾಕಾಶ ಸೂರ್ಯ ಚಂದ್ರ ಸೋಮ ಯಾಜಿಗಳೆನ್ನಿಸಿಕೊಳ್ಳುವವೋ ಅಂಥಾ ಪರಶಿವನನ್ನು ಪೂಜಿಸುತ್ತಿದ್ದೇವೆ.

ಈ ಪರಮೇಶ್ವರನ ಅನುಗ್ರಹದಿಂದಲೆ ನಮ್ಮ ಪಿತಾಮಹನಾದ ನಳ ಮಹಾರಾಯನು ಚಕ್ರವರ್ತಿಯಾಗಿ ಕೀರ್ತಿಸಂಪನ್ನನಾಗಿ ಕಾಂತಿಯುಕ್ತನಾಗಿ ಸತ್ಯಪ್ರತಿಜ್ಞೆಯುಳ್ಳವನಾಗಿ ಜಿತೇಂದ್ರಿಯನಾಗಿ ಮಹಾರಸಿಕನಾಗಿಯೂ ಬಲ ವಂತರೊಳಗೆ ಶ್ರೇಷ್ಠನಾಗಿಯೂ ಕವಿಗಳಿಂದ ಸ್ತೋತ್ರಮಾಡಲ್ಪಟ್ಟವನಾಗಿ ಸರ್ವ ಲಕ್ಷಣ ಸಂಪನ್ನನಾಗಿ ಬ್ರಾಹ್ಮಣ ಪ್ರಿಯನಾಗಿ ಜ್ಞಾನವಂತನಾಗಿ ಸರ್ವ ಶಾಸ್ತ್ರಾರ್ಥ ಪಾರಂಗತನಾಗಿ ತನ್ನ ನಾಮೋಚ್ಚಾರಣದಿಂದ ಸಮಸ್ತ ಪಾಪ ಗಳನ್ನೂ ಕೆಡಿಸುವನಾಗಿ ಇರುವ ತನ್ನ ಸುಗುಣಗಳಿಗೆ ಸಮಾನಳಾದ ದಮಯಂ ತಿಯನ್ನು ವರಿಸಿ ನಮ್ಮ ತಂದೆಯಾದ ಇಂದ್ರಸೇನನನ್ನು ಪಡೆದನು. ಅಂಥಾ ಇಂದ್ರಸೇನನ ಮಗನೆ ನಾನು ಎಂದು ಹೇಳಲಾಗಿ ಆ ಚಿತ್ರಾಂಗದನ ಮಾತನ್ನು ಕೇಳಿ ತಕ್ಷಕನು ಆಶ್ಚರ್ಯಭರಿತನಾಗಿ ಪರಮೇಶ್ವರನಲ್ಲಿ ಅತ್ಯಂತ ಭಕ್ತಿಯುಳ್ಳ ಚಂದ್ರಾಂಗದನನ್ನು ಕುರಿತು ಇಂತೆಂದನು.

ಎಲೇ ಚಂದ್ರಾಂಗದನೆ! ನೀನು ಇನ್ನೂ ಬಾಲಕನಾಗಿದ್ದರೂ ಪರಶಿವ ತತ್ವವನ್ನು ಚೆನ್ನಾಗಿ ತಿಳಿದುಕೊಂಡಿರುವೆ ಆದಕಾರಣ ನಿನ್ನನ್ನು ನೋಡಿ ಸಂತೋ ಷಯುಕ್ತನಾದೆನು, ಈ ಪಾತಾಳಲೋಕದಲ್ಲಿ ಎಲ್ಲಿನೋಡಿದರೂ ರತ್ನಸಮೂಹ ಗಳು, ಎಲ್ಲಿ ನೋಡಿದರೂ ನೋಟವುಳ್ಳ ಸ್ತ್ರೀಯರು, ಎಲ್ಲಿ ನೋಡಿದರೂ ಅಮೃತ ಸರೋವರಂಗಳು ಇರುವುದರಿಂದ ಈ ಪಾತಾಳಲೋಕದಲ್ಲಿ ರೋಗಭಯವೂ ಜರಾಮರಣಗಳ ಭಯವೂ ಇಲ್ಲ. ಆದಕಾರಣ ನೀನು ನಿನಗೆ ಇಷ್ಟವಾದ ಭೋಗಗಳನ್ನು ಅನುಭವಿಸಿಕೊಂಡು ಸುಖವಾಗಿರು, ಇದಲ್ಲದೆ ನಳಚಕ್ರವರ್ತಿಗೆ ನಾನು ಆಪ್ತಸ್ನೇಹಿತನಾದಕಾರಣ ಈ ಸಮಸ್ತ ದೇಶವನ್ನೂ ನೀನು ಆಳುತ್ತಿರು ಎಂದು ಆ ತಕ್ಷಕನು ನಿರೂಪಿಸಲು, ಆ ಚಂದ್ರಾಂಗದನು ಆ ಮಾತನ್ನು ಕೇಳಿ ತಕ್ಷಕನಿಗೆ ಕೈಮುಗಿದು ಎಲೈ ಸ್ವಾಮಿ! ನಾನು ಹೊಸದಾಗಿ ಮದುವೆಯಾದ ವನು ನನ್ನ ಹೆಂಡತಿ ಮಹಾ ಪತಿವ್ರತೆಯು, ನಿತ್ಯವೂ ಶಿವಪೂಜೆಯನ್ನು ಮಾಡು ವಳು, ತನ್ನ ತಾಯಿತಂದೆಗಳಿಗೆ ತಾನೊಬ್ಬಳೆ ಮಗಳು, ನಾನು ಈ ಲೋಕಕ್ಕೆ ಬಂದದ್ದನ್ನು ಕಾಣದೆ ಮೃತನಾದೆನೆಂದು ತಿಳಿದು ದುಃಖಿಸುತ್ತಿರುವರು, ಪ್ರಾಣ ಗಳನ್ನು ಬಿಟ್ಟರೋ ಧರಿಸಿಕೊಂಡಿದ್ದಾರೋ ತಿಳಿಯದು. ಆದಕಾರಣ ನಾನು ಇಲ್ಲಿ ಬಹುಕಾಲ ಇರುವುದಕ್ಕೆ ಸಾಧ್ಯವಿಲ್ಲ, ನನ್ನಲ್ಲಿ ನಿನಗೆ ದಯೆಯುಂಟಾದರೆ ನನ್ನನ್ನು ತಂದೆತಾಯಿಗಳ ಸಮೀಪಕ್ಕೆ ಕಳುಹಿಸಿಕೊಡು ಎಂದು ಬಿನ್ನವಿಸಿದನು,

ಆಗ ತಕ್ಷಕನು ಚಂದ್ರಾಂಗದನಿಗೆ ಕಲ್ಪವೃಕ್ಷಗಳಿಂದ ಕೊಡಲ್ಪಟ್ಟ ದಿವ್ಯವಾದ ಅನ್ನಪಾನಂಗಳಿಂದ ಭೋಜನವನ್ನು ಮಾಡಿಸಿ ದಿವ್ಯವಾದ ಗಂಧ ಪುಷ್ಪಗಳಿಂದಲೂ ವಿಚಿತ್ರವಾದ ದಿವ್ಯಾಭರಣಂಗಳಿಂದಲೂ ಸತ್ಕಾರಮಾಡಿ ನೀನು ಸ್ಮರಿಸಿದಾಗ ಬಂದು ನಿನ್ನ ಕಾರ್ಯಸಿದ್ಧಿಯನ್ನು ಮಾಡುವೆನೆಂದು ನುಡಿದು, ಸಕಲ ಲೋಕಗಳಲ್ಲಿಯೂ ಸಕಲ ಸಮುದ್ರಗಳಲ್ಲಿಯೂ ಸಕಲ ದ್ವೀಪಗಳಲ್ಲಿಯೂ ಬೇಕಾದ ಕಡೆಗೆ ಸೇರಿಸುವ ಸಾಮರ್ಥ್ಯವುಳ್ಳ ಬಿಳಿಯ ಕುದುರೆಯನ್ನು, ತಾನುಕೊಟ್ಟ ವಸ್ತ್ರಗಳನ್ನೂ, ರತ್ನಾಭರಣಾದಿಗಳನ್ನೂ, ಚಂದ್ರಾಂಗದನನ್ನು ಪಟ್ಟಣವನ್ನು ಸೇರಿಸುವದಕ್ಕೆ ಒಬ್ಬ ರಾಕ್ಷಸನನ್ನೂ ಸಹಾಯಾರ್ಥವಾಗಿ ಕೊಟ್ಟು ಕಳುಹಿಸಲು, ಆ ಚಂದ್ರಾಂಗದನು ಆ ವಸ್ತುಗಳನ್ನು ರಾಕ್ಷಸನಿಂದ ಹೊರಿಸಿಕೊಂಡು ಕಾಮಚಾರಿಯಾದ ಕುದುರೆಯನ್ನೇರಿ ನಾಗಕುಮಾರ ಸಹಿತ ಕ್ಷಣಮಾತ್ರದಲ್ಲಿ ತಾನು ಬಂದ ಮಾರ್ಗದಿಂದಲೆ ಪ್ರಯಾಣಮಾಡಿ ಯಮುನಾ ನದಿಯ ತೀರಕ್ಕೆ ಬಂದನು.

ಆ ನದಿಯ ತೀರದಲ್ಲಿ ಆ ಕುದುರೆಯನ್ನು ಅತ್ತಿತ್ತ ಓಡಾಡಿಸುತ್ತಿರುವ ಸಮಯದಲ್ಲಿ ಸೀಮಂತಿನಿಯು ತನ್ನ ಸಖಿಯರೊಡನೆ ಹೊರಟು ಸ್ನಾನಕ್ಕಾಗಿ ಯಮುನಾನದಿಗೆ ಬಂದು ಅಲ್ಲಿ ಮನುಷ್ಯ ರೂಪವನ್ನು ತಾಳ್ದ ರಾಕ್ಷಸ ನಾಗಕುಮಾರರೊಡನೆ ಕ್ರೀಡಿಸುತ್ತಿದ್ದ ಹತ್ತು ಯೋಜನ ಪ್ರಕಾಶವುಳ್ಳ ದಿವ್ಯಾಭರಣಗಳನ್ನೂ ದಿವ್ಯ ವಸ್ತ್ರಗಳನ್ನೂ ಧರಿಸಿಕೊಂಡು ಹತ್ತು ಯೋಜನ ಪರಿಯಂತರ ಪರಿಮಳವನ್ನು ಬೀರುತ್ತಿರುವ ದಿವ್ಯಗಂಧ ಲೇಪಿತವಾದ ಶರೀರವುಳ್ಳವನಾಗಿ ದಿವ್ಯವಾದ ಕುದುರೆಯನ್ನು ಹತ್ತಿ ಅಪೂರ್ವವಾದ ಆಕಾರವುಳ್ಳವನಾದ ರಾಜಕುಮಾರನನ್ನು ಕಂಡು ಭ್ರಮೆಗೊಂಡವಳಂತೆ ರೆಪ್ಪೆಗಳನ್ನು ಮುಚ್ಚದೆ ಆತನಲ್ಲಿ ದೃಷ್ಟಿಯನ್ನಿರಿಸಿ ನೋಡುತ್ತಿದ್ದಳು. ಆ ರಾಜಕುಮಾರನು ಪೂರ್ವದಲ್ಲಿ ತನ್ನಿಂದ ನೋಡಲ್ಪಟ್ಟವಳಾಗಿ ಕಿವಿಗಳಲ್ಲಿ ಓಲೆಯೂ, ಕಂಠದಲ್ಲಿ ಮಂಗಳಸೂತ್ರವೂ ಕಣ್ಣುಗಳಲ್ಲಿ ಕಾಡಿಗೆಯೂ ಮುಖದಲ್ಲಿ ಅರಸಿನ ಕುಂಕುಮಗಳು ಇಲ್ಲದೆ ಇದ್ದಂಥಾ ಆ ಸೀಮಂತಿನಿಯನ್ನು ಕಂಡು ಕುದುರೆಯಿಂದಿಳಿದು, ತನ್ನ ಸಮೀಪ ಪಕ್ಕೆ ಅವಳನ್ನು ಕರೆದು ಕುಳ್ಳಿರಿಸಿಕೊಂಡು ನೀನು ಯಾರು? ಯಾರ ಹೆಂಡತಿ? ಯಾರಿಗೆ ಮಗಳು? ನಿನಗೆ ಬಾಲ್ಯದಲ್ಲಿಯೇ ಸಹಿಸುವುದಕ್ಕೆ ಅಶಕ್ಯವಾದ ಈ ವೈಧವ್ಯವು ಏನು ಕಾರಣದಿಂದ ಪ್ರಾಪ್ತವಾಯಿತು ಎಂದು ಕೇಳಲು, ಆ ಸೀಮಂತಿನಿಯು ಆ ಮಾತನ್ನು ಕೇಳಿ, ಬಿಸುಸುಯ್ದು ಕಂಬನಿಯನ್ನು ಸುರಿಸಿ ತಾನು ಬದಲು ಹೇಳುವದಕ್ಕೆ ಲಜ್ಜೆಪಡುತ್ತಿರಲಾಗಿ, ಅವಳ ಸಖಿಯರಲ್ಲೊಬ್ಬಳು ಚಂದ್ರಾಂಗದನನ್ನು ಕುರಿತು ಇಂತೆಂದಳು.

ಎಲೈ ರಾಜಕುಮಾರನೇ! ಕೇಳು ಇವಳ ಹೆಸರು ಸೀಮಂತಿನಿ, ನಿಷಧ ದೇಶಾಧೀಶ್ವರನಾದ ಇಂದ್ರಸೇನನ ಸೊಸೆ, ಚಂದ್ರಾಂಗದನ ರಾಣಿ, ಚಿತ್ರವರ್ಮ

ಮಹಾರಾಯನ ಮಗಳು, ಇವಳ ಗಂಡನು ದೈವಯೋಗದಿಂದ ಯಮುನಾ ನದಿಯಲ್ಲಿ ಮುಳುಗಿಹೋದನು ಇದುವರೆಗೂ ಬರಲೇ ಇಲ್ಲ. ಆದರಿಂದವಳು ಬಾಲ್ಯದಲ್ಲಿಯೇ ವೈಧವ್ಯವನ್ನು ಪಡೆದು ಮೂರು ವರುಷದಿಂದಲೂ ದುಃಖಪಡು ತ್ತಿದ್ದಾಳೆ. ಇವಳ ಮಾವನಾದ ಇಂದ್ರಸೇನ ಮಹಾರಾಯನು ತನ್ನ ದಾಯಾದಿ ಗಳಿಂದ ಅಪಹರಿಸಲ್ಪಟ್ಟ ರಾಜ್ಯವುಳ್ಳವನಾಗಿ ತಾನು ಸೆರೆಮನೆಯಲ್ಲಿ ಬಿದ್ದಿ ದ್ದಾನೆ. ಹೀಗಿದ್ದರೂ ಈ ಸೀಮಂತಿನಿಯು ತಪ್ಪದೆ ಪ್ರತಿಸೋಮವಾರದಲ್ಲಿಯೂ ಪಾರ್ವತೀ ಪರಮೇಶ್ವರರನ್ನು ಪೂಜಿಸುತ್ತಲೆ ಇದ್ದಾಳೆ. ಇಂದು ಸೋಮವಾರ ವಾದಕಾರಣ ಸ್ನಾನಕ್ಕಾಗಿ ಇಲ್ಲಿಗೆ ಬಂದಳೆಂದು ಸಖಿಯು ಚಂದ್ರಾಂಗದನಿಗೆ ಹೇಳಿದಬಳಿಕ ಸೀಮಂತಿನಿಯು ಆತನನ್ನು ಕುರಿತು ಇಂತೆಂದಳು.

ಎಲೈ ರಾಜಕುಮಾರನೇ ! ನೀನು ಯಾರು? ನಿನ್ನ ಜೊತೆಯಲ್ಲಿರುವ ಈ ಇಬ್ಬರು ಯಾರು ಮನುಷ್ಯರೋ ದೇವತೆಗಳೋ ಸಿದ್ಧರೋ ಗಂಧರ್ವರೋ ಹೇಳು? ಏನುಕಾರಣ ನನ್ನ ವೃತ್ತಾಂತವನ್ನು ಪ್ರೀತಿಯಿಂದ ಕೇಳುತ್ತಿದ್ದೀಯೆ ನನ್ನನ್ನು ಎಲ್ಲಿಯಾದರು ನೋಡಿದ್ದೀಯಾ ನಿನ್ನನ್ನು ನೋಡಿದರೆ ಪೂರ್ವದಲ್ಲಿ ಎಲ್ಲಿಯೋ ನೋಡಿದಹಾಗೆ ಕಾಣುತ್ತಿದೆ. ನಿಜವಾದ ಸಂಗತಿಯನ್ನು ಸತ್ಯವಾಗಿ ನನಗೆ ತಿಳಿಸು. ಲೋಕದಲ್ಲಿ ಸತ್ಪುರುಷರು ಸತ್ಯವನ್ನೇ ಹೇಳುವರಲ್ಲದೆ ಅಸತ್ಯವನ್ನು ಎಂದಿಗೂ ಹೇಳರು ಎಂದು ನುಡಿದು ಆ ಸೀಮಂತಿನಿಯು ನೆಲದಲ್ಲಿ ಬಿದ್ದು ಮೂರ್ಛೆಯನ್ನೈದಿ ಸಖಿಯರು ಮಾಡಿದ ಶೈತ್ಯೋಪಚಾರಗಳಿಂದ ಮೂರ್ಛೆ ತಿಳಿ ದಮೇಲೆಯು ಮಾತನಾಡದೆ ಇರಲು, ಚಂದ್ರಾಂಗದನು ತಾನೂ ಶೋಕದಿಂದ ಕ್ಷಣಕಾಲ ಮಾತನಾಡದೆ ಸ್ತಬ್ಧನಾಗಿದ್ದು ಅನಂತರದಲ್ಲಿ ತನ್ನ ಪ್ರಾಣಕಾಂತೆ ಯನ್ನು ಮೃದುನುಡಿಗಳಿಂದ ಸಂತೈಸಿದನು. ಅದೆಂತೆಂದರೆ,—

ಓ ಸೀಮಂತಿನೀ ! ನಾವು ಕಾಮಚಾರಿಗಳಾದ ಸಿದ್ಧಪುರುಷರು ನೀನು ಸಮಿಾಪಕ್ಕೆ ಬಾ, ರಹಸ್ಯವನ್ನು ಹೇಳುತ್ತೇನೆಂದು ಕೈಪಿಡಿದೆಳೆದು, ತನ್ನ ಸಮಿಾ ಪದಲ್ಲಿ ಕುಳ್ಳಿರಿಸಿಕೊಂಡು ಅವಳ ಕಿವಿಯಲ್ಲಿ ರಹಸ್ಯವಾಗಿ ಎಲೈ ಸೀಮಂತಿನೀ ! ಒಂದಾನೊಂದು ಕಡೆ ನಾನು ನಿನ್ನ ಪತಿಯನ್ನು ನೋಡಿದೆನು, ಅವನು ನಿನ್ನ ವ್ರತಾಚರಣೆಯಿಂದ ಸಂತುಷ್ಟನಾಗಿ ಎರಡು ಮೂರು ದಿನಗಳೊಳಗಾಗಿ ಇಲ್ಲಿಗೆ ಬಂದು ನಿನ್ನ ದುಃಖವನ್ನು ಪರಿಹರಿಸುವನು. ನಾನು ನಿನ್ನ ಪತಿಗೆ ಸಖನಾದ ಕಾರಣ ಈ ವೃತ್ತಾಂತವನ್ನು ನಿನಗೆ ಹೇಳುವುದಕ್ಕಾಗಿ ಇಲ್ಲಿಗೆ ಬಂದೆನು. ಈ ಅರ್ಥದಲ್ಲಿ ಸಂದೇಹವಿಲ್ಲ. ಶ್ವಾನೇ ಪರಮೇಶ್ವರನು ಈ ವಾರ್ತೆಯು ನಿನ್ನ ಮನಸ್ಸಿನಲ್ಲೇ ಇರಲಿ, ಯಾರಿಗೂ ಹೇಳಬೇಡವೆಂದು ಚಂದ್ರಾಂಗದನು ಹೇಳಲು ಸೀಮಂತಿನಿಯು ಅಮೃತಕ್ಕೆ ಸಮಾನವಾದ ಆತನ ವಾಕ್ಯದಿಂದ ಸಂತುಷ್ಟಳಾಗಿ, ತನ್ನ ಹಸ್ತಸ್ಪರ್ಶದಿಂದ ರೋಮಾಂಚಿತವಾದ ಆತನ ಶರೀರವನ್ನು ಅಂಗೋ

ಪಾಂಗಗಳನ್ನೂ ತಾನು ಮೊದಲು ಕಂಡಾಗ ಇದ್ದ ಲಕ್ಷಣಗಳನ್ನೂ ಸ್ವರಸಾದೃಶ್ಯ ವನ್ನು ವಯಸ್ಸಿನ ಪ್ರಮಾಣವನ್ನು ಚೆನ್ನಾಗಿ ಪರೀಕ್ಷಿಸಿ ನೋಡಿ ಈತನೇ ನನ್ನ ಪತಿಹೊರತು ಅನ್ಯನಲ್ಲ, ಆದರಿಂದಲೇ ತನ್ನ ಮನಸ್ಸು ಈತನಲ್ಲಿಯೇ ಆಸಕ್ತವಾ ಯಿತು. ಆದರೆ ತನ್ನ ಪೂರ್ವ ರೂಪವನ್ನು ಧರಿಸಿ ಪರಲೋಕದಿಂದ ಹೇಗೆ ಇಲ್ಲಿಗೆ ಬಂದನು, ಹಂಡತಿಯಾದ ನನಗೆ ಮೃತನಾದ ಪತಿಯ ದರ್ಶನವು ಹೇಗೆ ದೊರಕುವದು ಇದು ಸ್ವಪ್ನವೆಂದರೆ ಸ್ವಪ್ನವಲ್ಲ, ಭ್ರಮೆಯೆಂದರೆ ಭ್ರಮೆಯೂ ಅಲ್ಲ, ಧೂರ್ತನಾದ ಮನುಷ್ಯನಾದರೂ ಗಂಧರ್ವನಾದರೂ ನನ್ನನ್ನು ಮೋಸ ಗೊಳಿಸುತ್ತಿದ್ದಾನೋ ತಿಳಿಯದು. ಅಲ್ಲದೆ ಮೈತ್ರೇಯಿದೇವಿಯು ಆಪತ್ತಿನಲ್ಲಿಯೂ ಬಿಡಬೇಡವೆಂದು ನನಗೆ ಉಪದೇಶಮಾಡಿದ ವ್ರತಾಚರಣೆಯ ಫಲವೋ? ಹಾಗಲ್ಲದಿದ್ದರೆ ಹತ್ತುಸಾವಿರ ವರ್ಷಪರಿಯಂತರವು ತನಗೆ ಮುತ್ತೈದೆತನ ವಿದ್ದೀತೆಂದು ಹೇಳಿದ ಬ್ರಾಹ್ಮಣ ವಾಕ್ಯವು ಯಥಾರ್ಥವಾಯಿತೋ? ಈಶ್ವ ರನು ಪ್ರಸನ್ನನಾದರೆ ಅಸಾಧ್ಯವಾದದ್ದೇನಿದೆ, ದಿನ ದಿನದಲ್ಲಿಯು ಮಂಗಳಕರ ವಾದ ನಿಮಿತ್ತಂಗಳು ಆಗುತ್ತಿದ್ದಾವೆಂದು ತನ್ನಲ್ಲಿ ತಾನು ಆಲೋಚಿಸಿಕೊಂಡು ಲಜ್ಜೆಯಿಂದ ತಲೆಬಾಗಿ ನೆಲವನ್ನು ನೋಡುತ್ತಿರಲು, ಚಂದ್ರಾಂಗದನು ಆ ಸೀಮಂತಿನಿಯನ್ನು ಕುರಿತು ನಿನ್ನಕಿವಿಯಲ್ಲಿ ಈಗ ನಿನಗೆ ಹೇಳಿದ ವೃತ್ತಾಂತವನ್ನು ಚಂದ್ರಾಂಗದನ ತಂದೆತಾಯಿಗಳಿಗೆ ಹೇಳುವದಕ್ಕಾಗಿ ಹೋಗಿ ಬರುವೆನು, ಇನ್ನು ನೀನು ನಿನ್ನ ಪತಿಯನ್ನು ಸೇರುವೆಯೆಂದು ನುಡಿದು ಕುದುರೆಯನ್ನೇರಿ ರಾಕ್ಷಸ ನಾಗ ಕುಮಾರರೊಡನೆ ಹೊರಟು ಆಕ್ಷಣವೇ ತನ್ನ ಪಟ್ಟಣದ ಸಮೀಪಕ್ಕೆ ಬಂದು ಉದ್ಯಾನವನದಲ್ಲಿ ನಿಂತು ಬಲಾತ್ಕಾರದಿಂದ ತಮ್ಮ ಸಿಂಹಾಸನವನ್ನಾಕ್ರಮಿಸಿದ ದಾಯಾದಿಗಳ ಬಳಿಗೆ ನಾಗಕುಮಾರನನ್ನು ಕಳುಹಿಸಲು ಆ ನಾಗಕುಮಾರನು ಅವರ ಸಮೀಪಕ್ಕೆ ಹೋಗಿ ಇಂತೆಂದನು.

ಎಲೈ ಶತ್ರುಗಳಿರಾ! ನಮ್ಮ ಪ್ರಭುವಾದ ಇಂದ್ರಸೇನ ಮಹಾರಾಯನ ಮಗನಾದ ಚಂದ್ರಾಂಗದನ ಆಜ್ಞೆಯನ್ನು ಕೇಳಿ, ಆತನು ಯಮುನಾನದಿಯಲ್ಲಿ ಮುಳುಗಿ ಪಾತಾಳಲೋಕಕ್ಕೆ ಹೋಗಿ, ಅಲ್ಲಿ ತಕ್ಷಕನಿಂದ ಬಹುಮಾನವನ್ನು ಪಡೆದು ಆ ತಕ್ಷಕನ ಸಹಾಯದಿಂದಲೆ ಈ ಭೂಲೋಕಕ್ಕೆ ಬಂದು ಈ ಪಟ್ಟಣದ ಸಮೀಪದಲ್ಲಿರುವ ಉದ್ಯಾನವನದಲ್ಲಿ ಇಳಿದುಕೊಂಡಿದ್ದಾನೆ. ಈಗ ಇಂದ್ರ ಸೇನ ಮಹಾರಾಯನನ್ನು ಸೆರೆಯಿಂದ ಬಿಟ್ಟು ಆತನ ರಾಜ್ಯವನ್ನೂ ಆತನಿಗೆ ಕೊಡದಿದ್ದರೆ ಚಂದ್ರಾಂಗದನು ತನ್ನ ಬಾಣಗಳಿಂದ ನಿಮ್ಮ ಪ್ರಾಣಗಳನ್ನಪಹರಿ ಸದೇ ಬಿಡನು ಎಂದು ಹೇಳಲಾಗಿ, ಅದನ್ನು ಕೇಳಿ ಚಂದ್ರಾಂಗದನ ದಾಯಾದಿ ಗಳು ಆತನ ಪ್ರಭಾವವನ್ನು ಕೊಂಡಾಡಿ ಆಕ್ಷಣವೆ ಸೆರೆಮನೆಯಲ್ಲಿದ್ದ ಇಂದ್ರ ಸೇನ ಮಹಾರಾಯನ ಸಮೀಪಕ್ಕೆ ಹೋಗಿ ಎಲೈ ರಾಯನೇ! ನಿನ್ನ ಕುಮಾರ

ನಾದ ಚಂದ್ರಾಂಗದನು ಇದುವರೆಗೂ ಪಾತಾಳ ಲೋಕದಲ್ಲಿದ್ದು ಈ ಪಟ್ಟಣದ ಮುಂದುಗಡೆಯಲ್ಲಿರುವ ಉದ್ಯಾನವನಕ್ಕೆ ಬಂದಿದ್ದಾನೆಂದು ವಿಜ್ಞಾಪಿಸಿ ಆತನನ್ನು ಕರೆದುತಂದು ಸಿಂಹಾಸನದಮೇಲೆ ಕುಳ್ಳಿರಿಸಿ ತಾವು ಮಾಡಿದ ಅಪರಾಧಗಳನ್ನು ಮನ್ನಿಸಿ ಪರಿಪಾಲಿಸಬೇಕೆಂದು ಬೇಡಿಕೊಂಡು ಇನ್ನುಮೇಲೆ ತಮಗೆ ಚಂದ್ರಾಂಗದನಿಂದ ಏನು ಕಷ್ಟವುಂಟಾಗುವುದೋ ಎಂದು ಭಯಪಡುತ್ತಿದ್ದರು.

ಈ ವಾರ್ತೆಯನ್ನು ತಿಳಿದು ಆ ಪಟ್ಟಣದ ಜನರು ಎಲ್ಲರೂ ಹೊರಟು ಬಂದು ಉದ್ಯಾನವನದಲ್ಲಿದ್ದ ಚಂದ್ರಾಂಗದನನ್ನು ಕಂಡು ನಿಕ್ಷೇಪವನ್ನು ಕಂಡ ಬಡವರಂತೆ ಸಂತೋಷಪಟ್ಟು ಹಿಂದಿರುಗಿ ಪಟ್ಟಣಕ್ಕೆ ಬಂದವರಾಗಿ ಇಂದ್ರಸೇನಮಹಾರಾಯನಿಗೆ ಆ ಶುಭವಾರ್ತೆಯನ್ನು ಹೇಳಿ, ಆತನಿಂದ ವಸ್ತ್ರಾಭರಣಾದಿ ಸತ್ಕಾರಗಳನ್ನು ಪಡೆದರು. ಬಳಿಕ ಇಂದ್ರಸೇನ ಮಹಾರಾಯನು ತನ್ನ ಕುಮಾರನು ಬಂದ ಸಮಾಚಾರವನ್ನು ಕೇಳಿ ಪತ್ನಿ ಪರಿವಾರ ಸಹಿತನಾಗಿ ಆನಂದಸಮುದ್ರದಲ್ಲಿ ಮುಳುಗಿದವನಾಗಿ ಸಂತೋಷದಲ್ಲಿದ್ದನು.

ಆಗ ಮಂತ್ರಿ ಪುರೋಹಿತ ಮೊದಲಾದವರೆಲ್ಲರೂ ಒಟ್ಟಾಗಿ ಹೋಗಿ ಚಂದ್ರಾಂಗದನನ್ನು ಇದಿರ್ಗೊಂಡು ಅತ್ಯಂತ ಸಂಭ್ರಮದಿಂದ ಇಂದ್ರಸೇನ ಮಹಾರಾಯನ ಸಮೀಪಕ್ಕೆ ಕರೆದುತಂದರು. ಆಬಳಿಕ ಚಂದ್ರಾಂಗದನು ಆನಂದ ಬಾಷ್ಪ ಸಮೇತನಾಗಿ ತಂದೆತಾಯಿಗಳಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿದನು. ಅವರು ತಮ್ಮ ಮಗನನ್ನು ತಬ್ಬಿಕೊಂಡು ಆನಂದಾತಿಶಯದಿಂದ ಕ್ಷಣಮಾತ್ರ ಪರವಶರಾದರು. ಬಳಿಕ ಚಂದ್ರಾಂಗದನು ನಮಸ್ಕಾರಗಳಿಂದಲೂ ಆಲಿಂಗನದಿಂದಲೂ ಪ್ರಿಯವಚನಗಳಿಂದಲೂ ದಯಾದೃಷ್ಟಿಯಿಂದಲೂ ಪುರೋಹಿತರು ಮಂತ್ರಿಗಳು ವರ್ತಕರು ಸೇವಕರು ಮೊದಲಾದ ಸರ್ವರನ್ನೂ ಸನ್ಮಾನಿಸಿ ಸಭಾಮಧ್ಯದಲ್ಲಿ ಕುಳಿತುಕೊಂಡು ತನಗೆ ತಕ್ಷಕನು ಉಚಿತವಾಗಿ ಕೊಟ್ಟ ವಸ್ತ್ರಗಳನ್ನೂ ಆಭರಣಗಳನ್ನೂ ರತ್ನಗಳನ್ನೂ ಮುಂದಿರಿಸಿ ತನ್ನ ವೃತ್ತಾಂತವೆಲ್ಲವನ್ನೂ ತಂದೆಯಾದ ಇಂದ್ರಸೇನಮಹಾರಾಯನಿಗೆ ವಿಸ್ತರಿಸಿ ಬಿನ್ನಯಿಸಲು ಅವನು ಅದನ್ನು ಕೇಳಿ ಆಶ್ಚರ್ಯಪಟ್ಟು ಇದು ತನ್ನ ಸೊಸೆಯಾದ ಸೀಮಂತಿನಿಯ ಶಿವಪೂಜಾ ಪ್ರಭಾವವೆಂದು ನಿಶ್ಚೈಸಿ ಚಾರರನ್ನು ಕಳುಹಿಸಿ ಆ ಶುಭವಾರ್ತೆಯನ್ನು ಚಿತ್ರವರ್ಮ ಮಹಾರಾಯನಿಗೆ ಹೇಳಿ ಕಳುಹಿಸಿದನು. ಆತನು ಅತ್ಯಂತ ಸಂತೋಷದಿಂದ ಆ ಶುಭವಾರ್ತೆಯನ್ನು ಹೇಳಿದ ಚಾರರಿಗೆ ಅತಿಶಯವಾದ ವಸ್ತ್ರಭೂಷಣಂಗಳನ್ನು ಕೊಟ್ಟು ಕಳುಹಿಸಿ ತನ್ನ ಮಗಳಾದ ಸೀಮಂತಿನಿಯನ್ನು ಕರೆಸಿ ಆಲಿಂಗನ ಮಾಡಿಕೊಂಡು ಅವಳನ್ನು ವಸ್ತ್ರಾಭರಣಾದಿಗಳಿಂದಲೂ ಅರಿಶಿನ ಕುಂಕುಮಗಳಿಂದಲೂ ಗಂಧಮಾಲ್ಯಾದಿಗಳಿಂದಲೂ ಅಲಂಕಾರ ಮಾಡಿ ತನ್ನ ಪಟ್ಟಣದಲ್ಲಿಯೂ ರಾಜ್ಯದಲ್ಲಿಯೂ ಮಹತ್ತಾದ ಉತ್ಸವಗಳನ್ನು

ಮಾಡಿಸಿದನು. ಇದರಿಂದ ಸಕಲ ಜನರೂ ಆ ಸೀಮಂತಿನಿಯ ಶಿವಪೂಜಾ ಪ್ರಭಾವವನ್ನು ಸಂತೋಷದಿಂದ ಕೊಂಡಾಡಿದರು.

ಅನಂತರದಲ್ಲಿ ಚಿತ್ರವರ್ಮ ಮಹಾರಾಯನು ಚಂದ್ರಾಂಗದನನ್ನು ಕರೆಸಿ ಪುನಃ ಮದುವೆ ಮಾಡಿದಂತೆ ಅತ್ಯಂತ ಸಂಭ್ರಮದಿಂದ ಆತನಿಗೆ ಸೀಮಂತಿನಿಯನ್ನು ಕೊಡಲು, ಆ ಚಂದ್ರಾಂಗದನು ಆ ಸೀಮಂತಿನಿಗೆ ತಾನು ಪಾತಾಳ ಲೋಕದಿಂದ ತಂದ ದಿವ್ಯವಸ್ತ್ರಾಭರಣಾದಿಗಳಿಂದಲೂ ಪಾರಿಜಾತ ಪುಷ್ಪಗಳಿಂದಲೂ ಹತ್ತುಯೋಜನ ಪರಿಯಂತರವು ವ್ಯಾಪಿಸುತ್ತಿರುವ ಪರಿಮಳವುಳ್ಳ ದಿವ್ಯ ಗಂಧಗಳಿಂದಲು ಅಲಂಕಾರ ಮಾಡಿಸಿ ಅವಳೊಡನೆ ಕ್ರೀಡಿಸುತ್ತಾ ಕೆಲವು ದಿನಗಳು ಮಾವನ ಮನೆಯಲ್ಲಿದ್ದು ಬಳಿಕ ಒಳ್ಳೆಯ ಶುಭಮುಹೂರ್ತದಲ್ಲಿ, ಆತನಿಂದ ಕಳುಹಿಸಿಕೊಂಡು ಪತ್ನೀ ಸಮೇತನಾಗಿ ತನ್ನ ಪಟ್ಟಣಕ್ಕೆ ಬಂದನು. ಇಂದ್ರಸೇನ ಮಹಾರಾಯನು ಬಳಿಕ ಆ ಚಂದ್ರಾಂಗದನಿಗೆ ರಾಜ್ಯಭಾರವನ್ನು ವಹಿಸಿ ತಾನು ತಪಸ್ಸಿನಿಂದ ಶಿವನನ್ನು ಮೆಚ್ಚಿಸಿ, ಯೋಗಿಗಳೈದುವಂಥಾ ಸದ್ಗತಿಯನ್ನು ಪಡೆದನು.

ಅನಂತರದಲ್ಲಿ ಚಂದ್ರಾಂಗದನು ಹತ್ತು ಸಾವಿರ ವರ್ಷಕಾಲ ಸೀಮಂತಿನಿಯೊಡನೆ ಕ್ರೀಡಿಸುತ್ತಾ ಸಕಲ ಭೋಗ ಭಾಗ್ಯಗಳನ್ನೂ ಅನುಭವಿಸಿ ಎಂಟು ಮಂದಿ ಕುಮಾರರನ್ನೂ ಒಬ್ಬ ಕುಮಾರಿಯನ್ನೂ ಪಡೆದು ಅಂತ್ಯದಲ್ಲಿ ಸೀಮಂತಿನೀ ಸಮೇತನಾಗಿ ಕೈಲಾಸವನ್ನು ಸೇರಿದನು. ಎಲೈ ಋಷಿಗಳಿರಾ! ನಾನು ಆಶ್ಚರ್ಯಕರವಾದ ಈ ಕಥೆಯನ್ನು ನಿಮಗೆ ಹೇಳಿದೆನಲ್ಲಾ ಅದರಂತೆ ಪರಮ ಪವಿತ್ರವಾದ ಸೋಮವಾರದ ಮಹಿಮೆಯನ್ನೂ ಹೇಳುವೆನೆಂದು ಸೂತಪುರಾಣಿಕನು ಶೌನಕಾದಿ ಮುನಿಗಳಿಗೆ ನಿರೂಪಿಸಿದನು.

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮವೀರ
ನರಪತಿ ಬಿರುದೆಂತೆಂಬರ ಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ
ಗಂಡಭೇರುಂಡಾದಿ ನಾನಾ ಬಿರುದಾಂಕಿತ ಯಾದವಕುಲತಿಲಕ ಆತ್ರೇಯ
ಸಗೋತ್ರ ಅಶ್ವಲಾಯನಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರ
ರಾಜಒಡೆಯರ ಪೌತ್ರ ನರಸರಾಜಒಡೆಯರ ಪುತ್ರರಾದ ಶ್ರೀಇಮ್ಮಡಿ
ಚಾಮರಾಜ ಒಡೆಯರವರು ಕರ್ಣಾಟಕ ಭಾಷೆಯಲ್ಲಿ ವಿರಚಿಸಿದ
ಸ್ಕಾಂದಪುರಾಣೋಕ್ತಮಾದ ಬ್ರಹ್ಮೋತ್ತರಖಂಡದಲ್ಲಿ,
ಸೋಮವಾರ ವ್ರತ ಮಹಿಮೆಯಿಂದ ಸೀಮಂತಿನಿಯು ಯಮುನಾ
ನದಿಯಲ್ಲಿ ಮುಳುಗಿಹೋಗಿದ್ದ ಪತಿಯನ್ನು ಪುನಃ ಪಡೆದು ಸಕಲ ಸೌಖ್ಯವನ್ನು
ಅನುಭವಿಸಿ ಅಂತ್ಯದಲ್ಲಿ ಕೈಲಾಸವನ್ನು ಸೇರಿದಳೆಂಬಿಲ್ಲಿಗೆ
೮ನೆಯ ಅಧ್ಯಾಯಕ್ಕೆ ಮಂಗಳಮಸ್ತು.

## ಸೋಮವಾರ ಪೂಜಾ ಮಹಿಮೆ.

ಒಂಭತ್ತನೆಯ ಅಧ್ಯಾಯ.

ಅನಂತರದಲ್ಲಿ ಶೌನಕಾದಿ ಮಹಾಋಷಿಗಳು ಸೂತಪುರಾಣಿಕನನ್ನು ಕುರಿತು ಇಂತೆಂದರು.

ಎಲೈ ಸೂತಪುರಾಣಿಕನೇ ! ನೀನು ಹೇಳಿದ ಕಥೆಯು ಬಹಳ ಶ್ರೇಯಸ್ಕರವಾದದು. ಸೋಮವಾರ ವ್ರತ ಮಾಹಾತ್ಮ್ಯೆಯನ್ನು ಪ್ರತಿಪಾದಿಸುವ ಇನ್ನೊಂದು ಕಥೆಯನ್ನು ಹೇಳುತ್ತೇನೆ ಎಂದೆಯಲ್ಲ ಅದನ್ನು ವಿವರಿಸಬೇಕೆಂದು ಋಷಿಗಳು ಕೇಳಲಾಗಿ ಸೂತಪುರಾಣಿಕನು ಋಷಿಗಳನ್ನು ಕುರಿತು ಆಶ್ಚರ್ಯಕರವಾದ ಮತ್ತೊಂದು ಕಥೆಯನ್ನು ಹೇಳತೊಡಗಿದನು. ಅದೆಂತೆಂದರೆ—

ಕೇಳಿರೈ ಋಷಿಗಳಿರಾ ವಿದರ್ಭದೇಶದಲ್ಲಿ ವೇದಶಾಸ್ತ್ರ ಸಂಪನ್ನನಾದ ದೇವಮಿತ್ರನೆಂಬ ಒಬ್ಬ ಬ್ರಾಹ್ಮಣನಿದ್ದನು. ಅಲ್ಲಿ ಆತನಿಗೆ ಸ್ನೇಹಿತನಾದ ಸಾರಸ್ವತನೆಂಬ ಮತ್ತೊಬ್ಬ ಬ್ರಾಹ್ಮಣನೂ ಇದ್ದನು ದೇವಮಿತ್ರನಿಗೆ ಸುಮೇಧನೆಂಬ ಒಬ್ಬ ಮಗನೂ ಇದ್ದನು, ಸಾರಸ್ವತನಿಗೆ ಸಾವಂತನಾಯನೆಂಬ ಕುಮಾರನೂ ಜನಿಸಿದನು. ಅವರಿಬ್ಬರೂ ಅಣ್ಣತಮ್ಮಂದಿರಂತೆ ಸದಾ ಸ್ನೇಹಿತರಾಗಿ ಸಮಾನವಾದ ವಯಸ್ಸುಳ್ಳವರಾಗಿ ಏಕ ಕಾಲದಲ್ಲಿ ಉಪನೀತರಾಗಿ ನಾಲ್ಕು ವೇದಂಗಳೂ ತರ್ಕ ವ್ಯಾಕರಣ ವೇದಾಂತ ಮೀಮಾಂಸ ಧರ್ಮಶಾಸ್ತ್ರ ಪುರಾಣ ಜ್ಯೋತಿಷಾದಿ ಸಕಲ ವಿದ್ಯೆಗಳನ್ನು ಕಲಿತವರಾಗಿ ಸಮಾನವಾದ ಬುದ್ಧಿಯುಳ್ಳವರಾಗಿ ತಮ್ಮ ಜನನೀಜನಕರ ಮನಸ್ಸಿಗೆ ಸಂತೋಷವನ್ನುಂಟುಮಾಡುತ್ತಿದ್ದರು. ಆಗ ದೇವಮಿತ್ರ ಸಾರಸ್ವತರು ಆ ಕುಮಾರರನ್ನು ಕರೆದು ಎಲೈ ಬಾಲಕರಿರಾ ! ನೀವು ಬಾಲ್ಯದಲ್ಲಿ ಸಮಸ್ತ ವಿದ್ಯಾಪ್ರವೀಣರಾಗಿ ತೇಜಸ್ಸುಳ್ಳವರಾಗಿ ಇದ್ದೀರಿ, ನಿಮಗೆ ವಿವಾಹ ಕಾಲವು ಪ್ರಾಪ್ತವಾಯಿತು. ಇನ್ನು ನೀವು ವಿದರ್ಭರಾಯನನ್ನು ಕಾಣಿಸಿಕೊಂಡು ನಿಮ್ಮ ವಿದ್ಯದಿಂದ ಆತನನ್ನು ಮೆಚ್ಚಿಸಿ, ಆತನಿಂದ ಧನವನ್ನು ತೆಗೆದುಕೊಂಡು ಬಂದು ಮದುವೆಯಾಗುವಿರಂತೆ ಎಂದು ಹೇಳಲಾಗಿ ಆ ಸುಮೇಧನು ಸಾವಂತನು ವಿದರ್ಭರಾಯನ ಸಾನ್ನಿಧ್ಯಕ್ಕೆ ಹೋಗಿ ತಮ್ಮ ವಿದ್ಯಗಳಿಂದ ಅವನನ್ನು ಮೆಚ್ಚಿಸಿ, ನಮಗೆ ವಿವಾಹವಾಗಬೇಕು. ಅದಕ್ಕಾಗಿ ನೀನು ದ್ರವ್ಯವನ್ನು ಕೊಡಿಸಬೇಕೆಂದುಕೇಳಲು ಆ ವಿಧರ್ಭರಾಯನು ಮುಗುಳುನಗೆಯನ್ನು ನಕ್ಕು, ವಿನೋದದಿಂದಲೂ ಲೋಕ ಸ್ಥಿತಿಯನ್ನು ತಿಳಿಸಬೇಕೆಂಬ ಅರಿಕೆಯಿಂದಲೂ ಅವರಿಗೆ ಇಂತೆಂದನು.

ಎಲೈ ಬ್ರಾಹ್ಮಣ ಕುಮಾರರುಗಳಿರಾ ! ಚಂದ್ರಾಂಗದನ ಪತ್ನಿಯಾದ ಸೀಮಂತಿನಿಯು ನಿಷಧನಗರದಲ್ಲಿ ಪ್ರತಿ ಸೋಮವಾರವೂ ಶಿವಪೂಜೆಯನ್ನು ಮಾಡಿ ಆದಿನ ಪತ್ನಿ ಸಮೇತರಾಗಿ ಬಂದ ಬ್ರಾಹ್ಮಣರಿಗೆ ಬಹಳವಾಗಿ ಧನವನ್ನು

ದಾನಮಾಡುತ್ತಿದ್ದಾಳೆ. ಆದಕಾರಣ ನಿಮ್ಮ ಇಬ್ಬರೊಳಗೆ ಒಬ್ಬನು ಸ್ತ್ರೀಯಾಗಿ ಒಬ್ಬನು ಪುರುಷನಾಗಿ ಸೀಮಂತಿನಿಯ ಮನೆಗೆ ಹೋಗಿ ಆ ಸೀಮಂತಿನಿಯಿಂದ ದ್ರವ್ಯವನ್ನು ತೆಗೆದುಕೊಂಡು ನನ್ನ ಸಮೀಪಕ್ಕೆ ಬಂದರೆ ನಾನೂ ಬಹಳವಾದ ಧನವನ್ನು ಕೊಡುವೆನು, ಎಂದು ಹೇಳಲಾಗಿ ಬ್ರಾಹ್ಮಣ ಕುಮಾರರಿಬ್ಬರು ಆತ ನನ್ನು ಕುರಿತು ಇಂತೆಂದರು. ಎಲೈ ರಾಜೇಂದ್ರನೇ ! ಈ ಕಪಟೋಪಾಯವನ್ನು ಮಾಡುವದಕ್ಕೆ ನಮಗೆ ಭಯವಾಗುತ್ತದೆ, ಏಕೆಂದರೆ ದೇವತೆಗಳಲ್ಲಿಯೂ, ಗುರು ಗಳಲ್ಲಿಯೂ, ತಂದೆತಾಯಿಗಳಲ್ಲಿಯೂ, ಅರಸುಗಳಲ್ಲಿಯೂ ಕಪಟಯುಕ್ತಿಯನ್ನು ಮಾಡಿದವರು ಆಕ್ಷಣದಲ್ಲಿಯೇ ಕೆಟ್ಟುಹೋಗುವರು. ಇದಲ್ಲದೆ ಕಪಟವನ್ನು ಮಾಡಿದವರಿಗೆ ಪರಲೋಕಹಾನಿಯೂ, ಅಪಕೀರ್ತಿಯೂ, ಪ್ರಾಣಹಾನಿಯೂ, ಉಂಟಾಗಿ ಸಕಲ ಜನ ದ್ವೇಷವು ಪ್ರಾಪ್ತವಾಗುವದು ಇನ್ನೂ ವೇದಶಾಸ್ತ್ರಂಗ ಳನ್ನು ಓದಿ ಸದಾಚಾರ ಸಂಪನ್ನರಾಗಿದ್ದು ಪೂರ್ವದಲ್ಲಿ ಸಂಪಾದಿಸಿದ ಸದ್ಗುಣ ಗಳನ್ನೂ ಕಳೆದುಕೊಂಡು ಕಪಟ ತಂತ್ರವನ್ನು ಮಾಡಿದರೆ ತಕ್ಷಣವೇ ನಷ್ಟವುಂಟಾ ಗುವುದು, ಆದರಿಂದಲೇ ಸತ್ಪುರುಷರು ಇಂಥಾ ಪ್ರಾಣಹಾನಿಕರವಾದ ಕೆಲ ಸವನ್ನು ಮಾಡಬಾರದೆಂದು ಆ ಬ್ರಾಹ್ಮಣ ಕುಮಾರರು ಪ್ರತ್ಯುತ್ತರವನ್ನು ಹೇಳಲು, ಆ ರಾಯನು ಅವರನ್ನು ಕುರಿತು ಎಲೈ ಬ್ರಾಹ್ಮಣ ಕುಮಾರರುಗಳಿರಾ ದೇವತೆಗಳ ಆಜ್ಞೆಯನ್ನೂ ಗುರುಗಳ ಅಪ್ಪಣೆಯನ್ನೂ ಮೀರಬಾರದು, ಮತ್ತು ಅವರಿಗೆ ಪ್ರತ್ಯುತ್ತರವನ್ನೂ ಹೇಳಬಾರದು, ಅವರು ಹೇಳಿದ ಹಾಗೆ ಮಾಡ ಬೇಕು ದೊರೆಗಳ ಆಜ್ಞೆಯನ್ನು ಮೀರಿ ನಡೆದರೆ ಶ್ರೇಯಸ್ಸಾಗುವುದಿಲ್ಲ ನಾವು ದೊರೆಗಳು ನೀವು ನಮ್ಮ ರಾಜ್ಯದ ಪ್ರಜೆಗಳು ನಮ್ಮ ಆಜ್ಞೆಯನ್ನು ನೀವು ಹೇಗೆ ಮೀರುವಿರಿ ಎಂದು ನಯಭಯಗಳಿಂದ ಅವರನ್ನು ಒಡಂಬಡಿಸಿ ಸಾರಸ್ವತನ ಮಗನಾದ ಸಾಮಂತನಿಗೆ ಕಣ್ಣುಕಪ್ಪು ಕೈಬಳೆ ಓಲೆ ಶೀರೆ ಕುಪ್ಪಸ ಅರಿಸಿನ ಕುಂಕುಮ ಮಂಗಳಸೂತ್ರ ತುರುಬು ಕುಚಂಗಳು ಮೊದಲಾದ ಹೆಣ್ಣು ವೇಷದ ಚಿಹ್ನೆಗಳನ್ನು ಧರಿಸಿ ಸುಮೇಧನೊಡನೆ ಕಳುಹಿಸಿಕೊಡಲು ಅವರಿಬ್ಬರೂ ಆ ರಾಯನ ಭಯದಿಂದ ಒಡಂಬಟ್ಟು ಕಪಟ ದಂಪತಿಗಳಾಗಿ ನಿಷಧ ನಗರಕ್ಕೆ ಹೋಗಿ ಒಂದಾನೊಂದು ಸೋಮವಾರದ ದಿನ ಬಹುಮಂದಿ ಬ್ರಾಹಣರ ದಂಪತಿಗಳೊಡನೆ ಆ ಸೀಮಂತಿನಿಯ ಅರಮನೆಯನ್ನು ಹೊಕ್ಕರು.

ಅನಂತರದಲ್ಲಿ ಆ ಸೀಮಂತಿನಿಯು ದಂಪತಿಗಳಿಗೆ ಅರ್ಘ್ಯಪಾದ್ಯಾಚಮ ನಂಗಳನ್ನು ಕೊಟ್ಟು ಸುವರ್ಣಮಯವಾದ ಪೀಠಂಗಳಲ್ಲಿ ಕುಳ್ಳಿರಿಸಿ ಪ್ರತ್ಯೇಕ ಪ್ರತ್ಯೇಕವಾಗಿ ದಂಪತಿ ಪೂಜೆಯನ್ನು ಮಾಡುತ್ತಾ ಆ ಸುಮೇಧ ಸಾಮಂತರ ಸಮೀಪಕ್ಕೆ ಬಂದು ಅವರ ಕೃತ್ರಿಮ ಚರ್ಯವನ್ನು ತಿಳಿದು ಕಪಟ ದಂಪತಿಗಳೆಂದ ರಿತು ಮುಗುಳು ನಗೆಯನ್ನು ನಕ್ಕು ಅವರನ್ನು ಪಾರ್ವತೀಪರಮೇಶ್ವರರೆಂದೇ

ಭಾವಿಸಿ ಗಂಧ ಪುಷ್ಪಾಕ್ಷತೆ ಧೂಪ ದೀಪ ಮೊದಲಾದ ಉಪಚಾರಂಗಳಿಂದ ಪೂಜಿಸಿ ನಮಸ್ಕರಿಸಿ ಚಿನ್ನದ ಹರಿವಾಣಗಳಲ್ಲಿ ಬಹುಬಗೆಯಾದ ಶಾಕಪಾಕಗಳನ್ನೂ ಶಾಲ್ಯಾನ್ನ, ಚಿತ್ರಾನ್ನ, ಘೃತಸೂಪ, ಕಡುಬು, ಕರ್ಜಿಕಾಯಿ, ಚಕ್ಕುಲಿ, ಮುಚ್ಚೋರೆ, ತೇಂಗೊಳಲು, ಗೋಸೆ, ಎಳ್ಳುಂಡೆ, ಒತ್ತೆ, ಲಡ್ಡಿಗೆ, ಚಿರೋಟಿ, ಪೇಣಿ, ಜೇನುತುಪ್ಪ, ತುಪ್ಪ, ಹಾಲು, ಮೊಸರು, ಯಳನೀರು, ಮಜ್ಜಿಗೆ ಮೊದಲಾದ ಸಕಲ ಪದಾರ್ಥಗಳನ್ನು ಬಡಿಸಿ ಭೋಜನ ಮಾಡಿಸಿ ದಕ್ಷಿಣೆ ತಾಂಬೂಲಾದಿಗಳನ್ನು ಕೊಟ್ಟು ಅವರವರ ಯೋಗ್ಯತೆಯನ್ನರಿತು ಗೋದಾನ ವಸ್ತ್ರದಾನ ರತ್ನಾಭರಣಗಳ ದಾನವನ್ನು ಕೊಟ್ಟು ಕನ್ಯಾದಾನಗಳನ್ನೂ ಮಾಡಿ ಕಳುಹಿಸಿಕೊಟ್ಟಳು.

ಹೀಗೆ ಆ ಸೀಮಂತಿನಿಯಿಂದ ಪಾರ್ವತಿಯೆಂದು ಭಾವಿಸಿ ಪೂಜಿಸಲ್ಪಟ್ಟ ಆ ಸಾಮಂತನು ತನ್ನ ಪುರುಷಲಕ್ಷಣಗಳನ್ನು ಕಳೆದುಕೊಂಡು ಯಥಾರ್ಥವಾದ ಸ್ತ್ರೀರೂಪವನ್ನೇ ಧರಿಸಿದನು, ಅದಲ್ಲದೆ ತಿರಿಗಿ ತನ್ನ ದೇಶಕ್ಕೆ ಬರುತ್ತಾ ಮಾರ್ಗಮಧ್ಯದಲ್ಲಿ ಮನ್ಮಥೋದ್ರೇಕದಿಂದ ಸುಮೇಧನನ್ನು ಕುರಿತು ವಿಶಾಲವಾದ ಕಣ್ಣುಗಳುಳ್ಳಂಥಾ ಸೌಂದರ್ಯ ಸಂಪನ್ನನಾದ ಎಲೇ ಪ್ರಾಣಕಾಂನೇ! ನಿಲ್ಲು ನಿಲ್ಲು, ಎಲ್ಲಿಗೆ ಹೋಗುತ್ತಿದ್ದೀಯೆ ನಿನ್ನ ಪ್ರಾಣಕಾಂತೆಯಾದ ನನ್ನ ಸೌಂದರ್ಯವನ್ನು ನೋಡು, ಈ ಮುಂದುಗಡೆಯಲ್ಲಿ ಮನೋಹರವಾದ ಉದ್ಯಾನವನವು ಕಾಣುತ್ತಿದೆ. ನಾನು ಆ ವನದಲ್ಲಿ ನಿನ್ನೊಡನೆ ಕ್ರೀಡಿಸಬೇಕೆಂದು ಇಚ್ಛೈಸುತ್ತೇನೆ ಎನಲು, ಸುಮೇಧನು ಇದು ಹಾಸ್ಯವಾಕ್ಯವೆಂದು ತಿಳಿದು ಮೊದಲಿನಂತೆ ಹಿಂದಿರುಗದೆ ಹೋಗುತ್ತಿರಲು ಆ ಸಾಮಂತಿನಿಯು ಕಾಮ ಬಾಧೆಯನ್ನು ಸಹಿಸಲಾರದೆ ಪುನಃ ಇಂತೆಂದಳು.

ಎಲೈ ಪ್ರಾಣಕಾಂತನೇ ! ಸೈರಿಸುವದಕ್ಕೆ ಅಶಕ್ಯವಾದ ಈ ಮನ್ಮಥಾವಸ್ಥೆಗೆ ಸಿಕ್ಕಿದ ನನ್ನನ್ನು ಉಪೇಕ್ಷಿಸಿ ಹೇಗೆ ಹೋಗುತ್ತಿದ್ದೀಯೆ. ಆಲಿಂಗನಾದಿಗಳನ್ನು ಕೊಟ್ಟು ಅಧರಾಮೃತ ಪಾನವನ್ನು ಮಾಡಿ, ನನ್ನನ್ನು ತೃಪ್ತಿಪಡಿಸು ನಾನು ಅನಂಗ ಬಾಧೆಯಿಂದ ಕುಗ್ಗಿ ನಡೆಯುವದಕ್ಕೆ ಸಾಮರ್ಥ್ಯವಿಲ್ಲದವಳಾಗಿದ್ದೇನೆ ಎಂದು ನುಡಿಯಲು ಆ ಸುಮೇಧನು ಅಪೂರ್ವವಾದ ಅವಳ ಮಾತುಗಳನ್ನು ಕೇಳಿ ಸಂದೇಹಪಟ್ಟು ಹಿಂದಿರುಗಿ ನೋಡಿ ಕಮಲದಳಗಳಂತೆ ಕಣ್ಣುಗಳುಳ್ಳ ಸ್ಥೂಲವಾದ ಸ್ತನಂಗಳುಳ್ಳ ಸೂಕ್ಷ್ಮವಾದ ಮಧ್ಯಪ್ರದೇಶವುಳ್ಳ ಬೃಹತ್ಕಟಿಪಶ್ಚಾದ್ಭಾಗವುಳ್ಳವಳಾಗಿ ಹೊಸ ಚಿಗುರಿನಂತೆ ಮೃದುವಾದ ಅವಯವಂಗಳುಳ್ಳ ಆ ಸಾಮಂತಿನಿಯನ್ನು ಕಂಡು ಇವಳಾರು ? ಹೇಗೋ ಎಂದು ಯೋಚಿಸಿಕೊಂಡು ಅವಳನ್ನು ಕುರಿತು ಇಂತೆಂದನು.

ಎಲೀ ಸಾಮಂತಿನಿ ! ರೂಪಿನಿಂದಲೂ ಗುಣದಿಂದಲೂ ಮತ್ತನಂತೆ ಕಾಣಿಸುತ್ತಿದ್ದೀಯೋ ಯವ್ವನ ಮದದಿಂದ ಸೊಕ್ಕಿದ ಸ್ತ್ರೀಯರಂತೆ ಅಪೂರ್ವವಾದ ವಾಕ್ಯಗಳನ್ನು ಆಡುತ್ತಿದ್ದೀಯೋ, ನೀನು ಸಾರಸ್ವತನ ಮಗನಾದ ಸಾಮಂತನು ವೇದಶಾಸ್ತ್ರ ಸಂಪನ್ನನು, ಜಿತೇಂದ್ರಿಯನು, ಬ್ರಹ್ಮಚಾರಿಯಾದವನು ನಿನ್ನ ಸ್ವರೂಪವನ್ನು ನೀನೇ ಚೆನ್ನಾಗಿ ವಿಚಾರಿಸಿ ನೋಡು ಇಂಥಾ ದುರ್ವಾಕ್ಯಗಳನ್ನು ಆಡಬೇಡವೆಂದು ಹೇಳಲು ಅವಳು ಸುಮೇಧನನ್ನು ಕುರಿತು ಪ್ರಿಯನೇ ನಾನು ಪುರುಷನಲ್ಲ, ನಿನಗೆ ರತಿಸೌಖ್ಯವನ್ನು ಕೊಡಲು ಬಂದಿರುವ ಸಾಮಂತಿನಿಯೆಂಬ ಸ್ತ್ರೀ ಆಹುದೋ ಅಲ್ಲವೋ ಎಂಬ ಸಂಶಯವಿದ್ದರೆ ನನ್ನ ಅವಯವಗಳನ್ನು ಪರೀಕ್ಷಿಸಿ ನೋಡು ಎನಲು, ಆ ಸುಮೇಧನನು ಏಕಾಂತದಲ್ಲಿ ತೊಟ್ಟಿದ್ದ ಕಂಚುಕಾದಿಗಳನ್ನು ಬಿಚ್ಚಿ ಕಚಕುಚ ಜಘನಾದಿಗಳನ್ನು ಕಂಡು ಮನ್ಮಥ ಬಾಣಂಗಳಿಂದ ಪೀಡಿಸಲ್ಪಟ್ಟವನಾಗಿ ವಿವೇಕವನ್ನು ತಂದುಕೊಂಡು ಮನೋನಿಗ್ರಹವನ್ನು ಮಾಡಿ ಆಶ್ಚರ್ಯಪಟ್ಟು ಒಂದು ಕ್ಷಣಕಾಲ ಸುಮ್ಮನಿರಲು, ಸಾಮಂತಿನಿ ಅವನನ್ನು ಕುರಿತು ಇಂತೆಂದಳು. ಎಲೈ ಪ್ರಾಣಕಾಂತನೇ ! ಇನ್ನಾದರೂ ಸಂಶಯವನ್ನು ಬಿಟ್ಟು ನನ್ನೊಡನೆ ಕ್ರೀಡಿಸು, ಇಲ್ಲಿ ಮನ್ಮಥ ಕೇಳಿಗೆ ಅನುಕೂಲವಾದ ನಾನಾವೃಕ್ಷ ಪೂರಿತವಾದ ನಂದನ ವನವು ಕಾಣಿಸುತ್ತಿದೆ ಅಲ್ಲಿಗೆ ನಡೆಯೆಂದು ನುಡಿಯಲು, ಸುಮೇಧನು ಇಂತೆಂದನು.

ಎಲೈ ಸಾಮಂತನೇ ! ಪಾನಮಾಡಿದವನೋಪಾದಿಯಲ್ಲಿ ಕೆಟ್ಟ ಮಾತುಗಳನ್ನು ಆಡಬೇಡ, ಸತ್ಕುಲದಲ್ಲಿ ಜನಿಸಿ ವೇದಶಾಸ್ತ್ರಂಗಳನ್ನೋದಿ ಆರ್ಜಿಸಿದ ನಿನ್ನ ವಿವೇಕವು ಈಗ ಎಲ್ಲಿ ಹೋಯಿತು, ನೀನು ಸ್ತ್ರೀಯಲ್ಲ, ನಿನ್ನಲ್ಲಿ ನೀನೆ ತಿಳಿದು ವಿಚಾರಿಸಿಕೊ, ನಾವಿಬ್ಬರು ತಂದೆ ತಾಯಿಗಳಿಗೆ ಹೇಳದೆ ಧೂರ್ತನಾದ ವಿದರ್ಭರಾಯನ ಮಾತುಗಳನ್ನು ಕೇಳಿ ಮಾಡಬಾರದ ಕಾರ್ಯವನ್ನು ಮಾಡಿದೆವು, ಆದರಿಂದ ನಮಗೆ ಈ ದುರವಸ್ಥೆಯು ಪ್ರಾಪ್ತವಾಯಿತು, ಇನ್ನಾದರೂ ವಿವೇಕವಂತನಾಗಿ ಸುಮ್ಮನೆ ಮನೆಗೆ ಬಾ, ನಿನಗೆ ಈ ಸ್ತ್ರೀತ್ವವು ಬ್ರಾಹ್ಮಣಾನುಗ್ರಹದಿಂದ ಪರಿಹಾರವಾದೀತು, ಹಾಗಿಲ್ಲದ ಪಕ್ಷಕ್ಕೆ ನಿಮ್ಮ ತಂದೆಯಿಂದ ಕೊಡಲ್ಪಟ್ಟವಳಾಗಿ ನನ್ನನ್ನು ಮದುವೆಯಾಗಿ ನನ್ನೊಡನೆ ಕ್ರೀಡಿಸುವೆಯಂತೆ, ಶಿವಶಿವಾ ಆ ಸೀಮಂತಿನಿ ನಮ್ಮಿಬ್ಬರನ್ನೂ ದಂಪತಿಗಳೆಂದು ಭಾವಿಸಿ ಮಾಡಿದ ಪೂಜೆ ನಿಜವಾಯಿತಲ್ಲವೆ ಆಕೆಯ ಪೂಜಾಪ್ರಭಾವವನ್ನು ಏನು ಹೇಳಲಿ ! ಎಂದು ಎಷ್ಟು ಬಗೆಯಿಂದ ಹೇಳಿದರೂ ಕೇಳದೆ ಬಹಳವಾದ ಮನ್ಮಥ ಬಾಧೆಯಿಂದ ಪೀಡಿಸಲ್ಪಟ್ಟವಳಾಗಿ ಆ ಸಾಮಂತಿನಿಯು ಆ ಸುಮೇಧನನ್ನು ಬಲಾತ್ಕಾರದಿಂದ ಆಲಿಂಗನ ಮಾಡಿಕೊಂಡು ಪುರುಷಾಯತವನ್ನು ಮಾಡಲುಪಕ್ರಮಿಸಿ ಅಧರ ಪಾನವನ್ನು ಮಾಡಲು ಅದಕ್ಕೂ ಒಳಗಾಗದೆ ಧೈರ್ಯೋಪಾಯಗಳಿಂದ

ಅವಳನ್ನು ಮನೆಗೆ ಕರೆದುತಂದು ನಡೆದ ವೃತ್ತಾಂತವೆಲ್ಲವನ್ನು ಆ ಮನೆಯವರ ಸಂಗಡ ಹೇಳಲು, ಅದನ್ನು ಕೇಳಿ ದೇವವ್ರತ ಸಾರಸ್ವತರು ಕೋಪಾಕ್ರಾಂತ ರಾಗಿ ತಮ್ಮ ಕುಮಾರರು ಇಬ್ಬರನ್ನು ಕರೆದುಕೊಂಡು ಧೂರ್ತನಾದ ವಿದರ್ಭ ರಾಯನ ಸಮೀಪಕ್ಕೆ ಬಂದರು. ಆಗ ಸಾರಸ್ವತನು ಆ ರಾಯನನ್ನು ಕುರಿತು ಇಂತೆಂದನು.

ಎಲೈ ವಿದರ್ಭರಾಯನೇ ! ನನ್ನ ಕುಮಾರನು ನಿನ್ನಾಜ್ಞೆಯನ್ನು ಮೀರ ಲಾರದೆ ನಿಂದಿತವಾದ ಸ್ತ್ರೀರೂಪವನ್ನು ಧರಿಸಿ ಸೀಮಂತಿನಿಯ ಶಿವಪೂಜಾ ಪ್ರಭಾವದಿಂದ ನಿಜವಾದ ಸ್ತ್ರೀಯಾಗಿರುವನು ಇದರಿಂದ ನನ್ನ ವಂಶವು ಕೆಟ್ಟು ಹೋಯಿತು ಜಪತಪಾದ್ಯನುಷ್ಠಾನಗಳನ್ನು ಬಿಟ್ಟು ಈ ಸ್ತ್ರೀತ್ವವನ್ನು ಪಡೆದ ನನ್ನ ಮಗನ ಗತಿ ಏನು ? ಎಂದು ಪ್ರಲಾಪಿಸುತ್ತಿರುವ ಆ ಬ್ರಾಹ್ಮಣನ ವಚನ ಗಳನ್ನು ಕೇಳಿ ಆಶ್ಚರ್ಯಪಟ್ಟು ಸೀಮಂತಿನಿಯ ಪೂಜಾಪ್ರಭಾವವನ್ನು ಏನು ಹೇಳಲಿ ಬುದ್ಧಿಹೀನನಾಗಿ ಅಯುಕ್ತವಾದ ಕಾರ್ಯವನ್ನು ಮಾಡಿದೆನಲ್ಲ ಎಂದು ಖಿನ್ನನಾಗಿ ಸಕಲ ಋಷಿಗಳನ್ನೂ ಕರೆಸಿ ಅವರನ್ನು ಪೂಜೆಮಾಡಿ ಎಲೈ ಋಷಿ ಗಳಿರಾ ! ಇವರಿಗೆ ದ್ರವ್ಯ ಸಂಪಾದನೋಪಾಯಕ್ಕಾಗಿ ಹೇಳಿದೆನಲ್ಲದೆ ವಂಚನೆ ಯನ್ನು ಮಾಡಿದವನಲ್ಲ ಇವನಿಗೆ ಜನ್ಮಾಂತರ ಕರ್ಮದಿಂದ ಸ್ತ್ರೀತ್ವ ಪ್ರಾಪ್ತ ವಾದರೆ ನನಗೇನು ಪಾಪವುಂಟು ನನ್ನನ್ನು ಏತಕ್ಕೆ ದೂರುತ್ತಿರಬೇಕು ನೀವು ಹೇಗಾದರೂ ಇವನ ಸ್ತ್ರೀತ್ವವನ್ನು ಪರಿಹರಿಸಿ ನನಗೆ ಅಪಕೀರ್ತಿಯಿಲ್ಲದ ಹಾಗೆ ಮಾಡಬೇಕು ಅದಕ್ಕೆ ಆಗಬೇಕಾದ ಸಹಾಯವನ್ನು ನಾನು ಮಾಡುವೆನೆಂದು ಹೇಳಲಾಗಿ ಆ ಋಷಿಗಳು ಇಂತೆಂದರು.

ಎಲೈ ರಾಯನೇ ! ಲೋಕದಲ್ಲಿ ಜನಗಳು ಯಾರ ಪ್ರೇರಣೆಯಿಂದ ಯಾವ ಯಾವ ಸುಕೃತ ದುಷ್ಕೃತಗಳನ್ನು ಮಾಡುವರೋ ಅದರಿಂದುಂಟಾಗುವ ಪುಣ್ಯ ಪಾಪ ಫಲಗಳೆರಡೂ ಮಾಡಿಸಿದವನಿಗಲ್ಲದೆ ಮಾಡಿದವನಿಗಲ್ಲ. ಪಾರ್ವತೀ ಪರ ಮೇಶ್ವರರಾದರೂ ಅವರ ಭಕ್ತರಿಂದ ಮಾಡಿದ ಕಾರ್ಯವನ್ನು ತಿರಿಗಿಸುವದಕ್ಕೆ ಸಮರ್ಥರಲ್ಲವೆಂದು ನಿರ್ದಾಕ್ಷಿಣ್ಯದಿಂದ ಹೇಳಲು, ಅದನ್ನು ಕೇಳಿ ವಿದರ್ಭಾಧಿ ಪತಿಯು ಮಾತನಾಡದೆ ಕ್ಷಣಮಾತ್ರ ಚಿಂತಾಕ್ರಾಂತನಾಗಿದ್ದು ಬಳಿಕ ಗೌರೀ ದೇವಿಯನ್ನು ಪೂಜಿಸಿ ಆ ಜಗಜ್ಜನನಿಯನುಗ್ರಹದಿಂದ ಇವನ ಸ್ತ್ರೀತ್ವವನ್ನು ಪರಿಹರಿಸುವೆನೆಂದು ಧೈರ್ಯವನ್ನು ತಂದುಕೊಂಡವನಾಗಿ ಭರದ್ವಾಜ ಮುನಿಯಿಂದ ಪೂಜಾವಿಧಾನವನ್ನು ತಿಳಿದುಕೊಂಡು ಆ ದೇವವ್ರತ ಸಾರಸ್ವತರನ್ನೂ ಅವರ ಕುಮಾರರಾದ ಸುಮೇಧ ಸಾಮಂತರನ್ನೂ ಕರೆದುಕೊಂಡು ಪಾರ್ವತೀದೇವಿಯ ಗುಡಿಗೆ ಬಂದು ಹಗಲಿರುಳು ಭೋಜನ ಮಾಡದೆ ಮೂರು ದಿನ ಜಪ ಹೋಮ ಸ್ತೋತ್ರ ಷೋಡಶೋಪಚಾರಂಗಳಿಂದ ಪೂಜಿಸಿ ಆ ಪಾರ್ವತೀದೇವಿಯನ್ನು

ಸಂತೋಷಪಡಿಸಲು; ದೇವಿಯು ಪ್ರಸನ್ನಳಾಗಿ ಭಕ್ತನಾದ ವಿದರ್ಭರಾಯನಿಗೆ ಕೋಟಿ ಚಂದ್ರ ಪ್ರಕಾಶಮಾನವಾದ ತನ್ನ ಸ್ವಸ್ವರೂಪವನ್ನು ತೋರಿಸಿ ಎಲೈ ರಾಯನೇ ! ನೀನು ಏತಕ್ಕಾಗಿ ನನ್ನನ್ನು ಪೂಜಿಸಿದೆ ? ಹೇಳು ಎಂದು ಆಜ್ಞಾಪಿಸಲು ವಿದರ್ಭರಾಯನು ಎಲೈ ಮಹಾದೇವಿಯೇ ! ನಿನ್ನಿಂದ ಇವನಿಗೆ ಪುರುಷತ್ವವನ್ನು ಕೊಡಿಸುವುದಕ್ಕಾಗಿ ನಾನು ನಿನ್ನನ್ನು ಪೂಜಿಸಿದೆ ಎಂದು ಹೇಳಲಾಗಿ ಪಾರ್ವತೀ ದೇವಿಯು ಇಂತೆಂದಳು.

ಎಲೈ ರಾಯನೇ ! ನನ್ನ ಭಕ್ತರು ಮಾಡಿದ ಕೆಲಸವನ್ನು ನಾನು ಎಂದಿಗೂ ಕೆಡಿಸುವಳಲ್ಲ ಈ ಸಾರಸ್ವತನಿಗೆ ಮೊದಲಿನ ಕುಮಾರನೋಪಾದಿಯಲ್ಲಿ ಸಕಲ ಶಾಸ್ತ್ರಸಂಪನ್ನನಾದ ಮತ್ತೊಬ್ಬ ಕುಮಾರನನ್ನು ಕೊಡುವೆನು. ಸಾಮಂತಿನಿ ಎಂಬ ಈ ಕುಮಾರಿಯನ್ನು ಸುಮೇಧನಿಗೆ ಕೊಟ್ಟು ವಿವಾಹವನ್ನು ಮಾಡಿಸು ಎಂದು ಆಜ್ಞಾಪಿಸಿ ಅಂತರ್ಧಾನಳಾದಳು.

ಬಳಿಕ ವಿದರ್ಭರಾಯನು ದೇವವ್ರತ ಸಾರಸ್ವತ ಮೊದಲಾದವರೆಲ್ಲರು ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು. ಕೆಲವು ದಿನದಮೇಲೆ ಸಾರಸ್ವತನು ತನ್ನ ಪತ್ನಿಯಲ್ಲಿ ದೀರ್ಘಾಯುಷ್ಮಂತನಾದ ಮತ್ತೊಬ್ಬ ಮಗನನ್ನು ಪಡೆದನು ಸಾಮಂತಿನಿಯನ್ನು ಸುಮೇಧನಿಗೆ ಕೊಟ್ಟು ಮದುವೆ ಮಾಡಲು, ಅವರಿಬ್ಬರೂ ದಂಪತಿಗಳಾಗಿ ಸುಖದಿಂದಿದ್ದರು. ಹೀಗೆ ಆಶ್ಚರ್ಯಕರವಾದ ಶಿವಪೂಜಾ ಮಹಿಮೆಯನ್ನು ಹೇಳಿದನೆಂದು ಸೂತಪುರಾಣಿಕನು ಶೌನಕಾದಿ ಮಹರ್ಷಿಗಳಿಗೆ ಹೇಳಿದವನಾದನು.

ಇದು ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರ ನರಪತಿ ಬಿರುತೆಂದೆಂಬರಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡಾದಿ ನಾನಾ ಬಿರುದಾಂಕಿತ ಯಾದವಕುಲತಿಲಕ ಆತ್ರೇಯಸಗೋತ್ರ ಅಶ್ವಲಾಯನ ಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರ ರಾಜಒಡೆಯರ ಪೌತ್ರ ನರಸರಾಜ ಒಡೆಯರ ಪುತ್ರ ಶ್ರೀ ಇಮ್ಮಡಿ ಚಾಮರಾಜ ಒಡೆಯರು ಕರ್ಣಾಟಕ ಭಾಷೆಯಲ್ಲಿ ವಿರಚಿಸಿದ ಸ್ಕಂದಪುರಾಣೋಕ್ತ ಬ್ರಹ್ಮೋತ್ತರಖಂಡದಲ್ಲಿ ಸೋಮವಾರ ಪೂಜಾ ಮಹಿಮೆಯಿಂದ ಸೀಮಂತಿನಿಯು ಕಪಟ ವೇಷಧಾರಿಗಳಾಗಿ ಬಂದ ಬ್ರಾಹ್ಮಣ ದಂಪತಿಗಳನ್ನು ಪಾರ್ವತೀ ಪರಮೇಶ್ವರರೆಂದು ಪೂಜಿಸಿದ ಮಾತ್ರದಿಂದಲೇ ಪುರುಷನಿಗೆ ಸ್ತ್ರೀತ್ವ ಪ್ರಾಪ್ತವಾಗಿ ಬಳಿಕ ಅವರೀರ್ವರಿಗೂ ವಿವಾಹವಾಗಿ ವಿದರ್ಭರಾಯನ ಪೂಜಾಪ್ರಭಾವದಿಂದ ಪಾರ್ವತೀದೇವಿಯು ಪ್ರಸನ್ನಳಾಗಿ ಅನುಗ್ರಹಿಸಿದಂತೆ ಸಾರಸ್ವತನೆಂಬ ಬ್ರಾಹ್ಮಣನು ಮತ್ತೊಬ್ಬ ಕುಮಾರನನ್ನು ಪಡೆದನೆಂಬಲ್ಲಿಗೆ,

೯ ನೆಯ ಅಧ್ಯಾಯಕ್ಕೆ ಮಂಗಳಮಸ್ತು.

# ಋಷಭಯೋಗಿಯ ಮಹಿಮೆ.

## ಹತ್ತನೆಯ ಅಧ್ಯಾಯ.

ಅನಂತರದಲ್ಲಿ ಸೂತಪುರಾಣಿಕನು ಶೌನಕಾದಿ ಮಹಾಮುನಿಗಳನ್ನು ನೋಡಿ ಮತ್ತೆ ಇಂತೆಂದನು:—

ಕೇಳಿರೈ ಋಷಿಗಳಿರಾ! ಶಿವನ ಸೃಷ್ಟಿಕ್ರಮವೂ ಶಿವನ ಚರಿತ್ರೆಯೂ ಶಿವನ ಮಹಿಮೆಯೂ ಶಿವಭಕ್ತಿಪ್ರಭಾವವೂ ಬಹು ಆಶ್ಚರ್ಯಕರಗಳಾಗಿ ಸ್ವರ್ಗ ಮೋಕ್ಷಗಳಿಗೆ ಸಾಧನವಾಗಿವೆ. ಅದರಲ್ಲಿ ಶ್ರೇಷ್ಠವಾದ ಶಿವಭಕ್ತನೊಬ್ಬನ ಮಹಿಮೆಯನ್ನು ಈಗ ಹೇಳುವೆನು ಕೇಳಿ.

ಅವಂತೀ ದೇಶದಲ್ಲಿ ಮಂದರನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಸ್ರಕ್ಚಂದನ ವನಿತಾದಿ ವಿಷಯಸುಖಗಳಲ್ಲಿಯು ಧನ ಸಂಗ್ರಹದಲ್ಲಿಯೂ ಬಹು ಆಸಕ್ತಿಯುಳ್ಳವನಾಗಿ ಸ್ನಾನ ಸಂಧ್ಯಾವಂದನೆ ಜಪತಪ ಹೋಮಾದಿ ನಿತ್ಯ ಕರ್ಮಗಳನ್ನು ಮಾಡದೆ ನೀಚಸ್ತ್ರೀಸಂಭೋಗಕ್ಕೆ ಹಿಂದೆಗೆಯದೆ ಪಿಂಗಳೆ ಎಂಬ ಒಬ್ಬ ವೇಶ್ಯಾಸ್ತ್ರೀಯೊಡನೆ ದಿವಾರಾತ್ರಿಯಲ್ಲಿಯೂ ಕ್ರೀಡಿಸುತ್ತಾ ಅವಳ ಮನೆಯಲ್ಲಿಯೇ ಭೋಜನ ಮಜ್ಜನಾದಿಗಳನ್ನು ಮಾಡಿಕೊಂಡು ಬಹುಕಾಲ ಇರುತ್ತಿದ್ದನು. ಒಂದಾನೊಂದು ದಿನ ಧರ್ಮಾತ್ಮನಾದ ಋಷಭನೆಂಬ ಶಿವಯೋಗಿಯೊಬ್ಬನು ದೈವಯೋಗದಿಂದ ಆ ವೇಶ್ಯಾಸ್ತ್ರೀಯ ಮನೆಗೆ ಬಂದನು.

ಆಗ ಮಂದರನೆಂಬ ಬ್ರಾಹ್ಮಣನೂ ವೇಶ್ಯೆಯೂ ಸಹ ನಾವು ಪೂರ್ವಜನ್ಮದಲ್ಲಿ ಮಾಡಿದ ಸುಕೃತ ವಿಶೇಷವೇ ಈ ಶಿವಯೋಗಿಯ ಆಕಾರವನ್ನು ಧರಿಸಿ, ಬಂದಿರಬಹುದೆಂದು ತಿಳಿದು ಆ ಶಿವಯೋಗಿಯನ್ನು ಸುವರ್ಣಮಯವಾದ ರತ್ನ ಪೀಠದಲ್ಲಿ ಕುಳ್ಳಿರಿಸಿ ಕುಶಲಪ್ರಶ್ನೆಯನ್ನು ಮಾಡಿ ಪಾದಪ್ರಕ್ಷಾಳನವನ್ನು ಮಾಡಿ, ಆ ಉದಕವನ್ನು ಭಕ್ತಿಯಿಂದ ಶಿರಸ್ಸಿನಲ್ಲಿ ಧರಿಸಿ, ಗಂಧ ಪುಷ್ಪಾಕ್ಷತೆಗಳಿಂದ ಪೂಜಿಸಿ ಭೋಜನಮಾಡಿಸಿ, ಮೃದುವಾದ ಸುಪ್ಪತ್ತಿಗೆಯಲ್ಲಿ ಮಂಚದ ಮೇಲೆ ಕುಳ್ಳಿರಿಸಿ ತಾಂಬೂಲವನ್ನು ಕೊಟ್ಟು ಪಾದಸೇವೆಯನ್ನು ಮಾಡುತ್ತಾ ಆತನನ್ನು ಸಂತೋಷಪಡಿಸಿದರು. ಈ ಪ್ರಕಾರದಲ್ಲಿ ಋಷಭಯೋಗಿಯು ಅವರಿಂದ ಪೂಜಿಸಲ್ಪಟ್ಟವನಾಗಿ ಒಂದು ರಾತ್ರಿಯಲ್ಲಿ ಅವಳ ಮನೆಯಲ್ಲಿದ್ದು ಪ್ರಾತಃಕಾಲಕ್ಕೆ ಎದ್ದು ಹೊರಟುಹೋದನು.

ಕೆಲವು ಕಾಲದಮೇಲೆ ಆ ಬ್ರಾಹ್ಮಣನು, ವೇಶ್ಯಾಸ್ತ್ರೀಯು ಮೃತಿಯನ್ನೈದಿದರು. ಬಳಿಕಾ ಬ್ರಾಹ್ಮಣನು ದಶಾರ್ಣದೇಶಕ್ಕೆ ಒಡೆಯನಾದ ವಜ್ರಬಾಹು

ವೆಂಬ ರಾಯನ ಪತ್ನಿಯಾದ ಸುಮತಿಯ ಗರ್ಭವನ್ನು ಪ್ರವೇಶಿಸಿದನು. ಸವತಿಯರು ಅವಳ ಗರ್ಭಚಿಹ್ನೆಗಳನ್ನು ಕಂಡು ಸಹಿಸಲಾರದೆ ಕಪಟದಿಂದ ವಿಷವನ್ನಿಕ್ಕಿದರು. ಆ ಸುಮತಿ ವಿಷವನ್ನು ಭಕ್ಷಿಸಿದರೂ ದೈವಯೋಗದಿಂದ ಸಾಯದೆ ಬದುಕಿಕೊಂಡು ಮರಣಕ್ಕಿಂತಲೂ ಅಧಿಕವಾದ ವೇದನೆಯನ್ನು ಪಡುತ್ತಿದ್ದು ನವಮಾಸ ತುಂಬಿದಮೇಲೆ ಬಹು ಪ್ರಯಾಸದಿಂದ ವ್ರಣಮಯವಾದ ಶರೀರವುಳ್ಳವಳಾಗಿ ದುಃಖಿಸುತ್ತಾ ಇದ್ದು, ಗಂಡು ಮಗನನ್ನು ಹಡೆದಳು. ಗರ್ಭದಲ್ಲಿರುವಾಗಲೆ ವಿಷಸ್ಪರ್ಶವಾದಕಾರಣ ಆ ಮಗುವು ವ್ರಣಮಯವಾದ ಶರೀರದಿಂದ ಕೂಡಿ ದುಃಖಿಸುತ್ತಿದ್ದಿತು.

ಹೀಗೆ ಆ ತಾಯಿ ಮಕ್ಕಳಿಬ್ಬರೂ ಯಾವ ಔಷಧಿಗಳಿಂದಲೂ ಆರೋಗ್ಯವಾಗದೆ ಹಗಲಿರುಳು ನಿದ್ರಾಹಾರಗಳಿಲ್ಲದೆ ಬಾಧೆಪಡುತ್ತಿದ್ದರು. ಈ ಪ್ರಕಾರ ಸತ್ತೂ ಸಾಯದವರ ಹಾಗೆ ರೋಗಪೀಡಿತರಾಗಿ ಅಳುತ್ತಿರಲು ರಾತ್ರಿಯಲ್ಲಿ ಇವರ ದುಃಖದಿಂದ ನಿದ್ರೆ ಕೆಟ್ಟವರೆಲ್ಲರೂ ನರಕದಿಂದ ಬಂದವರಂತೆ ಕಾಂತಿಹೀನರಾಗಿ ಕಾಣುತ್ತಿದ್ದರು. ಅದನ್ನು ನೋಡಿ ಆ ರಾಜನು ಹೀಗೆ ಅನುಭವಿಸುವರು, ಕುರೂಪಿಯಾದವನು ರೋಗಿಯಾದವನು ಸದಾ ಮಾಸಿದ ವಸ್ತ್ರವನ್ನು ಧರಿಸುವನು, ನಿಂದಿತವಾದ ಅನ್ನವನ್ನು ಭಕ್ಷಿಸುವನು, ಹೀನಜಾತಿಯ ಸ್ತ್ರೀಯರಲ್ಲಿ ಆಸಕ್ತನಾದವನು, ಇನ್ನು ಬಹಳ ವಿಧವಾದ ಪಾಪಮಾಡಿದವನು ಇವರೆಲ್ಲರು ನರಕದಲ್ಲಿ ಬಿದ್ದು ಅಲ್ಲಿ ದುಃಖವನ್ನನುಭವಿಸಿ ತಿರುಗಿ ಭೂಮಿಯಲ್ಲಿ ಹುಟ್ಟಿ ಈ ಮಗನೋಪಾದಿಯಲ್ಲಿ ಬಾಲ್ಯದಲ್ಲಿಯೇ ರೋಗವುಳ್ಳವರಾಗುವರು ಬಾಲ್ಯದಲ್ಲಿಯೇ ವಿಧವೆಯರಾಗುವರು ಮತ್ತು ನನ್ನ ಹೆಂಡತಿಯಂತೆ ದುರ್ಗಂಧಮಯವಾದ ಶರೀರವುಳ್ಳವಳು, ಬಹಳ ಬಗೆಯ ರೋಗಂಗಳುಳ್ಳವಳು ಸದಾಕಾಲದಲ್ಲಿಯೂ ದುಃಪಡುವಳು ನರಕವನ್ನನುಭವಿಸಿ ಈ ಭೂಮಿಯಲ್ಲಿ ಹುಟ್ಟಿದವಳೆಂದು ಶಾಸ್ತ್ರಜ್ಞರು ಹೇಳುವರು ನಿಶ್ಚಯವಾಗಿ ಹಾಗೆಯೇ ನನಗೂ ತೋರುತ್ತಿದೆ. ಆದಕಾರಣ ದೇವಬ್ರಾಹ್ಮಣರಲ್ಲಿ ದ್ವೇಷವುಳ್ಳವರನ್ನು ಪುತ್ರಮಿತ್ರ ಕಳತ್ರಾದಿಗಳಲ್ಲಿ ವೈರವುಳ್ಳವರನ್ನು ದಾರಿದ್ರ್ಯ ಉಳ್ಳವರನ್ನು ಅಂಗಹೀನರಾದವರನ್ನು ಮಕ್ಕಳಿಲ್ಲದೆ ಇರುವವರನ್ನು ಅತ್ಯಂತ ಗಿಡ್ಡಾಗಿ ಹುಟ್ಟುವವರನ್ನು ನೆಂಟರಿಷ್ಟರು ಬಿಟ್ಟುಬಿಡುವರು. ಈ ಅರ್ಥದಲ್ಲಿ ಸಂದೇಹವಿಲ್ಲವೆಂದು ತಿಳಿದು ಆ ರಾಯನು ಸಾರಥಿಯನ್ನು ಕರೆದು ನರಕದಿಂದ ಬಂದಿರುವ ಇವರಿಬ್ಬರನ್ನೂ ರಥದ ಮೇಲೆ ಕೂರಿಸಿಕೊಂಡು ಹೋಗಿ ಕಾಡಿನಲ್ಲಿ ಬಿಟ್ಟು ಬಾಯೆಂದು ಆಜ್ಞಾಪಿಸಲು, ಆ ಸಾರಥಿಯು ಇವರಿಬ್ಬರನ್ನೂ ಕರೆದುಕೊಂಡು ಹೊಗೀ ಮನುಷ್ಯ ಸಂಚಾರವಿಲ್ಲದ ಗೊಂಡಾರಣ್ಯದಲ್ಲಿ ಬಿಟ್ಟು ಬಂದನು.

ಬಳಿಕ ಆ ರಾಜಪತ್ನಿಯು ಅನ್ನೋದಕಗಳಿಲ್ಲದೆ ಹಸಿವಿನಿಂದಲು, ಬಾಯಾರಿಕೆಯಿಂದಲು ಕಂಗೆಟ್ಟವಳಾಗಿ ತನ್ನ ಕುಮಾರನನ್ನು ಎತ್ತಿಕೊಂಡು ಹೆಜ್ಜೆಹೆಜ್ಜೆಗೆ ಬೀಳುತ್ತಾ ಏಳುತ್ತಾ ತಾನು ಮಾಡಿದ ಪಾಪಕರ್ಮಗಳನ್ನು ನಿಂದಿಸಿ ನಿಟ್ಟುಸುರು ಬಿಡುತ್ತಾ ಕೆಲವು ಸ್ಥಳಗಳಲ್ಲಿ ಮುಳ್ಳು ಮೊನೆಗಳಿಂದ ಸೋಂಕಿದ ಶರೀರವುಳ್ಳವನಾಗಿ, ಹೆಬ್ಬುಲಿಗಳ ಧ್ವನಿಗಳಿಂದಲು ಅಟ್ಟಿಕೊಂಡು ಬರುವ ಸರ್ಪಗಳಿಂದಲು, ಪಿಶಾಚ ಭೂತ ಭೇತಾಳಗಳಿಂದಲು ಅಂಜಿಸಲ್ಪಟ್ಟ ವಳಾಗಿ, ಅಲ್ಲಲ್ಲಿ ಕಲ್ಲುಗಳು ತಾಕಿ ಒಡೆದುಹೋದ ಕಾಲುಗಳುಳ್ಳವಳಾಗಿ ಘೋರವಾದ ಅರಣ್ಯದಲ್ಲಿ ತಿರುಗುತ್ತಾ ದೈವಯೋಗದಿಂದ ಕುದುರೆ, ಮನುಷ್ಯರು, ಎತ್ತುಗಳು ತಿರುಗಾಡುತ್ತಿದ್ದ ದಾರಿಯನ್ನು ಕಂಡು ಆ ದಾರಿಯಲ್ಲಿ ನಡೆದು ಬಂದು ಅಲ್ಲಿ ಒಂದು ಪಟ್ಟಣವನ್ನು ಕಂಡು ಅಲ್ಲಿಗೆ ಬರುತ್ತಿದ್ದಳು- ಆ ಪಟ್ಟಣಕ್ಕೆ ಒಡೆಯನಾದ ಧನಿಕನಾದಂಥಾ ಪದ್ಮಾಕರನೆಂಬ ವೈಶ್ಯನ ಗೃಹದಲ್ಲಿದ್ದ ಒಬ್ಬ ದಾದಿಯು ಈ ಸುಮತಿಯೆಂಬ ರಾಜಪತ್ನಿಯನ್ನು ಕಂಡು ಅವಳ ವೃತ್ತಾಂತವನ್ನು ಕೇಳಿ ದುಃಖಪಟ್ಟು ಅವರನ್ನು ಕರೆದುಕೊಂಡು ಹೋಗಿ ಆ ಪದ್ಮಾಕರನ ಮನೆಯಲ್ಲಿ ಬಿಟ್ಟಳು. ಆ ಪದ್ಮಾಕರನು ರೋಗಪೀಡಿತರಾದ ತಾಯಿ ಮಕ್ಕಳ ಸ್ಥಿತಿಯನ್ನು ಕಂಡು ಅವರ ವೃತ್ತಾಂತವನ್ನು ಏಕಾಂತದಲ್ಲಿ ಕೇಳಿ ತಿಳಿದುಕೊಂಡು ಶಿವಶಿವಾ ಎಂದು ಬಿಸುಸುಯ್ದು ಅರಮನೆಯೋಪಾದಿಯಲ್ಲಿದ್ದ ತನ್ನ ಮನೆಯಲ್ಲಿ ಸ್ಥಳವನ್ನು ಕೊಡಿಸಿ, ಆ ಸುಮತಿಯನ್ನು ಪುತ್ರನನ್ನು ಅನ್ನವಸ್ತ್ರಗಳಿಂದಲೂ ನಾನಾ ಪ್ರಕಾರವಾದ ಚಿಕಿತ್ಸೆಗಳಿಂದಲೂ ಹೆತ್ತ ತಾಯಿತಂದೆಗಳಂತೆ ಪೋಷಿಸುತ್ತಿದ್ದನು. ಈ ಪ್ರಕಾರ ಆ ಸುಮತಿಯು ಆ ಪದ್ಮಾಕರನಿಂದ ಪೋಷಿಸಲ್ಪಟ್ಟವಳಾದರೂ ವ್ರಣ ಕ್ಷಯ ಮೊದಲಾದ ರೋಗಗಳಿಂದ ಬಿಡುಗಡೆಯಾಗಲಿಲ್ಲ. ಕೆಲವು ದಿನಗಳಮೇಲೆ ಅವಳ ಕುಮಾರನು ವೈದ್ಯರ ಚಿಕಿತ್ಸೆಗೆ ಸಾಧ್ಯವಾಗದಂಥ ಕುಷ್ಠರೋಗದಿಂದಲೇ ಮೃತನಾದನು.

ಆ ಸುಮತಿಯು ಪುತ್ರಶೋಕದಿಂದ ಮೂರ್ಛಿತಳಾಗಿ ಆನೆಯಿಂದ ಖಂಡಿಸಲ್ಪಟ್ಟ ಲತೆಯೋಪಾದಿಯಲ್ಲಿ ನೆಲದಮೇಲೆ ಬಿದ್ದು ಬಳಿಕ ಮೂರ್ಛೆಯನ್ನು ತಿಳಿದು ಕಣ್ಣೀರಿನಿಂದ ನೆನೆದ ಕುಚಗಳುಳ್ಳವಳಾಗಿ ವೈಶ್ಯ ಸ್ತ್ರೀಯರು ಎಷ್ಟು ಬಗೆಯಿಂದ ದುಃಖಪಡಬೇಡವೆಂದು ಹೇಳುತ್ತಿದ್ದರೂ ಕೇಳದೇ ಎಲೈ ಕುಮಾರನೇ! ಎಲೈ ತಂದೆಯೇ! ಎಲೈ ಪ್ರಾಣರಕ್ಷಕನೇ! ಎಲೈ ರಾಜಕುಲ ಜಲಧಿ ಪೂರ್ಣಚಂದ್ರನೇ! ದಿಕ್ಕಿಲದೆ ದೀನೆಯಾಗಿದ್ದ ನನ್ನನ್ನು ಹೀಗೆ ದುಃಖಕ್ಕೊಳಗುಮಾಡಿ ಏಕೆ ಮೃತನಾದೆ ನನ್ನನ್ನು ಇಲ್ಲಿಯೇ ಬಿಟ್ಟು ನೀನು ಮಾತ್ರ ಎಲ್ಲಿಗೆ ಹೋದೆ ಎಂದು ದೈನ್ಯೋಕ್ತಿಗಳಿಂದ ಶೋಕಿಸುತ್ತಿದ್ದಳು. ಆ ಸಮಯದಲ್ಲಿ ದುಃಖವೆಂಬ

ರೋಗಕ್ಕೆ ವೈದ್ಯನಾದಂಥಾ ಋಷಭಯೋಗಿಯು ಆ ರಾಜಪತ್ನಿಯ ಸಮೀಪಕ್ಕೆ ಬಂದು ಅವಳಿಗೆ ತತ್ವೋಪದೇಶವನ್ನು ಮಾಡುತ್ತಿದ್ದನು. ಹೇಗೆಂದರೆ—ಎಲೈ ಮಗಳೇ ! ಅಜ್ಞಾನದಿಂದ ಆವೃತಳಾಗಿ ಏಕೆ ಹೀಗೆ ದುಃಖಿಸುತ್ತಿದ್ದೀಯೆ ? ಲೋಕದಲ್ಲಿ ಜೀವನಿಗೆ ಜನನ ಮರಣಗಳೇ ಇಲ್ಲ ದೇಹೇಂದ್ರಿಯಗಳಾದರೋ ನೀರು ಗುಳ್ಳೆಗಳಂತೆ ಒಂದು ಪ್ರದೇಶದಲ್ಲಿ ಕಾಣಿಸಿಕೊಳ್ಳುವವು, ಮತ್ತೊಂದು ಪ್ರದೇಶದಲ್ಲಿ ಬೆಳೆಯುತ್ತಿರುವವು, ಇನ್ನೊಂದು ಪ್ರದೇಶದಲ್ಲಿ ನಾಶವಾಗುತ್ತಿರುವವು, ಇಂಥ ಅನಿತ್ಯವಾದ ಶರೀರಗಳು ಮೃತವಾದರೆ ವಿವೇಕಿಗಳು ಎಂದಿಗೂ ದುಃಖಪಡುವುದಿಲ್ಲ, ಅವಿವೇಕಿಗಳಾದರೆ ವ್ಯಸನಪಡುತ್ತಾರೆ. ಆದಿಯಲ್ಲಿ ಮಾಯೆಯ ಶಕ್ತಿಯಿಂದ ಸತ್ವರಜಸ್ತಮೋಗುಣಗಳು ಹುಟ್ಟಿದವು, ಆ ತ್ರಿಗುಣಗಳಿಂದ ದೇವ ತಿರ್ಯಙ್ಮನುಷ್ಯ ದೇಹಗಳುಂಟಾದವು. ಅದರಲ್ಲಿ ಈ ಸತ್ವಗುಣದಿಂದ ದೇವ ಶರೀರವು, ರಜೋಗುಣದಿಂದ ಮನುಷ್ಯ ದೇಹವು, ತಮೋಗುಣದಿಂದ ತಿರ್ಯಗ್ದೇಹವು ಉಂಟಾಗುವವು. ಈ ಮೂರು ಬಗೆಯ ದೇಹಗಳು ಜೀವಿಗಳಿಗೆ ಅವರವರು ಮಾಡಿದ ಕರ್ಮಾನುಸಾರವಾಗಿ ಚಿತ್ರ ವಿಚಿತ್ರವಾದ ಸುಖದುಃಖಂಗಳನ್ನು ಭೋಗವನ್ನು ಕೊಟ್ಟು ಆ ಕರ್ಮಗಳು ತೀರಿದಮೇಲೆ ಮಾಯೆಯೊಳಗೆ ಲೀನವಾಗುವುವು. ಇಂಥ ದೇಹಗಳು ಜರಾವ್ಯಾಧಿಗಳಿಗೂ ಸಹ ಶಕ್ಯವಲ್ಲದಂಥಾ ಸಮಸ್ತ ವಿಪತ್ತುಗಳಿಗೂ ಆಶ್ರಯವಾಗುತ್ತಿರುವಾಗ ಇತರ ಜೀವಿಗಳಿಗೆ ದೇಹವು ಅನಿತ್ಯವೆನ್ನುವುದರಲ್ಲಿ ಆಶ್ಚರ್ಯವೇನು! ಆದುದರಿಂದ ವಿವೇಕಿಗಳು ಮಾಯೆಯಲ್ಲಿ ಹುಟ್ಟಿ ಕೆಲವು ಕಾಲ ಬೆಳೆದು ಆ ಮೇಲೆ ಆ ಮಾಯೆಯಲ್ಲಿಯೇ ಲೀನವಾಗುವ ನೀರುಗುಳ್ಳೆಗಳಿಗೆ ಸಮಾನವಾದ ದೇಹಗಳು ಹುಟ್ಟಿತೆಂದು ಸಂತೋಷಪಡರು, ನಷ್ಟವಾಯಿತೆಂದು ದುಃಖಪಡರು, ದೇಹಿಗಳು ತಾಯಿಯ ಗರ್ಭಪ್ರವೇಶವನ್ನು ಮಾಡಿದಾಗಲೇ ಅವರಿಗೆ ಮರಣವು ಸಿದ್ಧವಾಗಿರುವುದು. ಆದರೆ ಅವರವರ ಕರ್ಮಾನುಸಾರವಾಗಿ ಕೆಲವರು ಗರ್ಭದಲ್ಲಿಯೇ ಮೃತರಾಗುವರು, ಕೆಲವರು ಹುಟ್ಟಿದಾಗಲೇ ಮೃತರಾಗುವರು, ಕೆಲವರು ಹುಟ್ಟಿ ಕೆಲವು ಕಾಲದಮೇಲೆ ಮೃತರಾಗುವರು, ಕೆಲವರು ಯೌವನದಲ್ಲಿ ಮೃತರಾಗುವರು. ಸ್ತ್ರೀ ಪುರುಷರು ಮನ್ಮಥಬಾಣದಿಂದ ಪೀಡಿತರಾಗಿ ಕ್ರೀಡಿಸಲು, ಸ್ತ್ರೀ ಪುರುಷ ನಪುಂಸಕರೆಂಬ ಮೂರು ಬಗೆಯಾದ ಪ್ರಾಣಿಗಳು ಹುಟ್ಟುವರು. ಹುಟ್ಟಿದ ಕ್ಷಣವೇ ಬ್ರಹ್ಮದೇವನು ಅವರವರ ಲಲಾಟದಲ್ಲಿ ಪುಣ್ಯ ಪಾಪಗಳನ್ನೂ ಸುಖ ದುಃಖಗಳನ್ನು ಆಯುಷ್ಯವನ್ನು ವಿದ್ಯೆಯನ್ನು ಧನವನ್ನು ಅವರವರ ಕರ್ಮಾನುಸಾರವಾಗಿ ಬರೆದು ಬಿಡುವನು. ಅದರಿಂದ ಎಂಥವರಿಗೂ ಕಾಲಕರ್ಮಗಳನ್ನು ಅತಿಕ್ರಮಿಸಲು ಶಕ್ಯವಲ್ಲದುದರಿಂದಲೂ ಶರೀರವು ಅನಿತ್ಯವಾದುದರಿಂದಲೂ ನೀನು ದುಃಖಪಡಬೇಡ.

ಈ ದೇಹವು ಸ್ವಪ್ನದಲ್ಲಿ ನೋಡಿದ ಪದಾರ್ಥದಂತೆ ಅಥವ ಇಂದ್ರ ಜಾಲದ ವಸ್ತುವಿನಂತೆ ಅಸತ್ಯವಾದುದು. ಶರತ್ಕಾಲದ ಮೇಘದೋಪಾದಿ ಯಲ್ಲಿ ಅಸ್ಥಿರವಾದುದು. ಹಿಂದಕ್ಕೆ ನೀನು ಈ ಬಗೆಯಾದ ಅನೇಕ ಕೋಟಿ ಜನ್ಮಗಳನ್ನು ಎತ್ತಿ ಆರಾರಿಗೆ ಮಗಳಾದೆ, ಆರಾರಿಗೆ ತಾಯಿಯಾದೆ, ಆರಾರಿಗೆ ಹೆಂಡತಿಯಾದೆ, ಎನ್ನುವುದನ್ನು ತಿಳಿಯದೆ ಏತಕ್ಕೆ ದುಃಖಪಡುತ್ತೀಯೆ ? ಪಂಚ ಭೂತಗಳಿಂದಲೂ ಚರ್ಮಾಸ್ಥಿ ಮಾಂಸಗಳಿಂದಲೂ ಮಲ ಮೂತ್ರಗಳಿಂದಲೂ ಶ್ಲೇಷ್ಮದಿಂದಲೂ ಹೇಯವಾದ ಈ ಶರೀರಕ್ಕಾಗಿ ದುಃಖಪಡಬೇಡ. ಈ ಪ್ರಪಂಚದಲ್ಲಿ ಒಬ್ಬನಾದರೂ ತನ್ನ ಪ್ರಯತ್ನದಿಂದ ಕಿಂಚಿತ್ತಾದರೂ ಮೃತ್ಯು ವನ್ನು ಗೆಲ್ಲುವುದಕ್ಕೆ ಸಮರ್ಥನಾಗುವನೆ ! ಆದರೆ ಪೂರ್ವದವರೆಲ್ಲರೂ ಏನು ಕಾರಣ ಮೃತರಾದರು ತಪದಿಂದಲಾದರೂ ಜಪದಿಂದಲಾದರೂ ವಿದ್ಯೆಯಿಂ ದಲಾದರೂ ಬುದ್ಧಿಯಿಂದಲಾದರೂ ಮಂತ್ರೌಷಧ ರಸಾಯನಗಳಿಂದಲಾದರೂ ಮೃತ್ಯುವನ್ನು ಮೀರುವುದಕ್ಕೆ ಅಶಕ್ಯವಾಗಿದೆ. ಇಂದೊಬ್ಬನು ಮೃತನಾದರೆ ನಾಳೆ ಇನ್ನೊಬ್ಬನು ಮೃತನಾಗುವನು. ಆದಕಾರಣ ಅನಿತ್ಯವಾದ ಈ ಮಗನ ಶರೀರ ಕ್ಕಾಗಿ ನೀನು ದುಃಖಪಡಬೇಡ, ಯಾವಾಗಲು ಮೃತ್ಯುವು ಸನ್ನಿಹಿತವಾಗಿರಲು ದೇಹಧಾರಿಗಳಿಗೆ ಸುಖವಾಗುವುದು ಹೇಗೆ ? ಸಮೀಪದಲ್ಲಿ ಹೆಬ್ಬುಲಿ ನಿಂತಿರಲು ಪಶುಗಳಿಗೆ ಮೇವು ರುಚಿಸುವುದೇ ಎಂದಿಗೂ ಇಲ್ಲ ಅದರಂತೆ ನೀನು ಜನನ ಮರಣಗಳನ್ನತಿಕ್ರಮಿಸುವುದಕ್ಕೆ ಇಚ್ಛೈಸುವೆಯಾ ? ಹಾಗಾದರೆ ಸಕಲಕ್ಕೂ ಒಡೆಯನಾದ ಮೃತ್ಯುಂಜಯನಾದ ಪರಮೇಶ್ವರನನ್ನು ಮೊರೆಹೊಗು, ಲೋಕ ದಲ್ಲಿ ಮನುಷ್ಯನು ಯಾವಪರಿಯಂತರ ಶಿವನನ್ನು ಮೊರೆಹೊಗದೇ ಇರುವನೋ ಆ ಪರಿಯಂತರ ಅವನಿಗೆ ಜನನ ಮರಣಗಳ ಭಯವುಂಟು. ಅತಿ ಭಯಂಕರ ವಾದ ಸಂಸಾರ ದುಃಖವನ್ನನುಭವಿಸಿ ಯಾವಾಗ ಮನಸ್ಸಿಗೆ ವಿರಕ್ತಿ ಉಂಟಾಗು ವದೋ ಆಗಲೆ ಶಿವಧ್ಯಾನವನ್ನು ಮಾಡಬೇಕು. ಮನಸ್ಸಿನಿಂದ ಶಿವಧ್ಯಾನವೆಂಬ ಅಮೃತವನ್ನು ಪಾನಮಾಡುವಂಥವನಿಗೆ ಈ ಸಂಸಾರದಲ್ಲಿರುವ ಸ್ರಕ್ಚಂದನ .ವನಿ ತಾದಿ ವಿಷಯಗಳಲ್ಲಿ ಆಸೆ ಹುಟ್ಟುವದೇ ಇಲ್ಲ ಇದನ್ನು ತಿಳಿದು ಸಂಸಾರರಹಿತ ನಾಗಿ ವೈರಾಗ್ಯಸಂಪನ್ನನಾಗಿ ಶಿವಧ್ಯಾನವನ್ನು ಮಾಡುವ ಪುರುಷನಿಗೆ ಪುನರ್ಜನ್ಮ ವಿಲ್ಲ ಆದಕಾರಣ ಶಿವಧ್ಯಾನಕ್ಕೆ ಯೋಗ್ಯವಾದ ಮನಸ್ಸನ್ನು ಶೋಕ ಮೋಹಂಗ ಳಿಂದ ಕೆಡಿಸಬೇಡ. ಸದಾ ಶಿವಧ್ಯಾನವನ್ನು ಮಾಡು ಎಂದು ಋಷಭಯೋಗಿಯು ನಿರೂಪಿಸಲು ಆ ರಾಜಪತ್ನಿ ಆತಂಗೆ ನಮಸ್ಕರಿಸಿ ಎಲೈ ಷಡ್ಗುಣೈಶ್ವರ್ಯ ಸಂಪ ನ್ನನಾದ ಋಷಭಯೋಗಿಯೇ ! ಪತಿಯಿಂದಲೂ ಬಂಧುಗಳಿಂದಲೂ ಬಿಡಲ್ಪಟ್ಟ ವಳಾಗಿ ವ್ಯಾಧಿಯಿಂದ ಕಂಗೆಟ್ಟವಳಾಗಿ ಪುತ್ರ ಮರಣದಿಂದ ದುಃಖಪಡುವಂಥಾ

ನನಗೆ ಮರಣ ಹೊರತು ಮತ್ತೊಂದು ಗತಿಯಿಲ್ಲ, ಆದಕಾರಣ ಈ ಶಿಶುವಿನೊಡನೆ ನಾನೂ ಮೃತಿಯನ್ನೈದುವೆನೆಂದು ದುಃಖಿಸುತ್ತ ನನ್ನ ಮರಣಕಾಲದಲ್ಲಿ ನಿನ್ನ ಪಾದಕಮಲವನ್ನು ನೋಡಿದುದರಿಂದ ನಾನು ಕೃತಾರ್ಥಳಾದೆನೆಂದು ಬಿನ್ನವಿಸಲು ಋಷಭಯೋಗಿಯು ಆ ರಾಜಪತ್ನಿಯ ವಾಕ್ಯವನ್ನು ಕೇಳಿ ಆವಳಲ್ಲಿ ದಯೆಯುಳ್ಳವನಾಗಿ ಆ ಶಿಶುವಿನಿಂದ ತಾನು ಪೂರ್ವ್ವಜನ್ಮದಲ್ಲಿ ಭಕ್ತಿ ಸಹಿತವಾಗಿ ಪೂಜೆಗೊಂಡವನಾಗಿದ್ದಕಾರಣ ಸತ್ತಿದ್ದ ಆ ಮಗುವಿನ ಸಮೀಪಕ್ಕೆ ಹೋಗಿ ಶಿವ ಪಂಚಾಕ್ಷರಿಯಿಂದ ಅಭಿಮಂತ್ರಿತವಾದ ವಿಭೂತಿಯನ್ನು ಆ ಶಿಶುವಿನ ಬಾಯಿಗೆ ಹಾಕಲು ಆ ಮಗುವು ಆ ಭಸ್ಮ ಪ್ರಭಾವದಿಂದ ಬದುಕಿ ಕಣ್ಣು ತೆರೆದು ಸ್ತನ್ಯ ಪಾನಾರ್ಥವಾಗಿ ರೋದನ ಮಾಡಿತು. ಅದನ್ನು ಕಂಡು ಆ ಪದ್ಮಕರ ಮೊದಲಾದವರೂ ಆಶ್ಚರ್ಯಪಟ್ಟು ಸಂತುಷ್ಟರಾದರು.

ಅನಂತರದಲ್ಲಿ ಆ ಸುಮತಿಯು ತನ್ನ ಮಗನನ್ನು ತಬ್ಬಿಕೊಂಡು ಆನಂದ ಬಾಷ್ಪಗಳಿಂದ ಸಂಪೂರ್ಣವಾದ ಕಣ್ಣುಗಳುಳ್ಳವಳಾಗಿ ಸಂತೋಷಾತಿಶಯದಿಂದ ಕ್ಷಣಮಾತ್ರ ನಿದ್ರೆಗೈದವಳಂತೆ ಈ ಪ್ರಪಂಚವನ್ನೆ ಅರಿಯದಿದ್ದಳು. ಆಗ ಆ ಋಷಭಯೋಗೀಶ್ವರನು ವಿಷವ್ರಣಗಳಿಂದ ಹೇಯವಾದ ತಾಯಿ ಮಕ್ಕಳ ದೇಹಗಳನ್ನು ಅಭಿಮಂತ್ರಿತವಾದ ವಿಭೂತಿಯಿಂದ ತೊಳೆಯಲು ಅವರಿಬ್ಬರು ಕಾಂತಿಯುಕ್ತವಾದ ದಿವ್ಯ ದೇಹಗಳನ್ನು ಪಡೆದವರಾಗಿ ಪುಣ್ಯ ಕರ್ಮದಿಂದ ಸ್ವರ್ಗವನ್ನು ಸೇರಿದವರ ಆನಂದಕ್ಕಿಂತಲೂ ಶತಗುಣವಾದ ಆನಂದವನ್ನು ಪಡೆದರು. ಬಳಿಕ ಅದನ್ನು ಕಂಡು ಸಂತೋಷಯುಕ್ತನಾಗಿ ಆ ಋಷಭಯೋಗಿಗೆ ನಮಸ್ಕಾರ ಮಾಡಿ ಸಂತೋಷದಲ್ಲಿ ನಿಂತುಕೊಂಡು ಇರುವ ಸುಮತಿಗೆ ಋಷಭಯೋಗೀಶ್ವರನು ಮರಳಿ ಇಂತೆಂದನು. ಎಲೈ ಸುಮತಿ ಮಹಾರಾಣಿಯೆ ! ಇಂದು ಮೊದಲಾಗಿ ಎಷ್ಟುಕಾಲದವರೆಗೆ ನೀನು ಬದುಕಿರುವೆಯೊ ಅಷ್ಟುಕಾಲದವರೆಗೆ ಮುಪ್ಪಿಲ್ಲದವಳಾಗಿ ಅನೇಕ ಸೌಖ್ಯಂಗಳನ್ನು ಪಡೆದು ಬಾಳು. ಈ ನಿನ್ನ ಕುಮಾರನು ಭದ್ರಾಯುವೆಂಬ ಹೆಸರುಳ್ಳವನಾಗಿ ಲೋಕದಲ್ಲಿ ಪ್ರಸಿದ್ಧನಾಗಿ ತನ್ನ ರಾಜ್ಯವನ್ನು ಪಡೆಯುವನು. ಈ ಕುಮಾರನು ಸಮಸ್ತ ವಿದ್ಯೆಗಳನ್ನೂ ಕಲಿತು ಪ್ರೌಢನಾಗುವನು, ಅದುವರೆಗೆ ನೀನು ಈ ಪದ್ಮಕರನ ಆಶ್ರಮದಲ್ಲಿಯೇ ಇರು ಎಂದು ಹೇಳಿ ಲೋಕಸಂಚಾರಕ್ಕಾಗಿ ತೆರಳಿದನೆಂದು ಸೂತಪುರಾಣಿಕನು ಶೌನಕಾದಿ ಮಹಾಮುನಿಗಳಿಗೆ ನಿರೂಪಿಸಿದನು.

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರನರಪತಿ ಬಿರುದೆಂತೆಂಬರಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ

ಗಂಡಭೇರುಂಡಾದಿ ನಾನಾ ಬಿರುದಾಂಕಿತ ಯಾದವ ಕುಲತಿಲಕ ಆತ್ರೇಯ
ಸಗೋತ್ರ ಆಶ್ವಲಾಯನ ಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರ
ರಾಜಒಡೆಯರವರ ಪೌತ್ರ ನರಸಭೂಪಾಲಕರ ಪುತ್ರ ಶ್ರೀ ಇಮ್ಮಡಿ
ಚಾಮರಾಜ ಒಡೆಯರವರು ಕರ್ಣಾಟಕ ಭಾಷೆಯಲ್ಲಿ ವಿರಚಿಸಿದ
ಸ್ಕಾಂದಪುರಾಣೋಕ್ತಮಾದ ಬ್ರಹ್ಮೋತ್ತರಖಂಡದಲ್ಲಿ ಋಷಭ
ಯೋಗಿಯ ಮಹಿಮೆಯಿಂದ ಮಹಾರೋಗ ಪೀಡಿತಳಾಗಿದ್ದ
ಸುಮತಿಯೆಂಬ ರಾಜಪತ್ನಿಗೆ ಸತ್ತ ಮಗನು ಮತ್ತೆ
ಬದುಕಿ ಸಕಲ ಸೌಖ್ಯಗಳನ್ನು ಪಡೆದನೆಂಬಿಲ್ಲಿಗೆ
ಹತ್ತನೆಯ ಅಧ್ಯಾಯಕ್ಕೆ ಮಂಗಳಮಸ್ತು.



## ಸದಾಚಾರ ಮಹಿಮೆ.

### ಹನ್ನೊಂದನೆಯ ಅಧ್ಯಾಯ.

ಅನಂತರದಲ್ಲಿ ಸೂತಪುರಾಣಿಕನು ಶೌನಕಾದಿ ಮಹಾಮುನಿಗಳನ್ನು ಕುರಿತು ಮತ್ತೆ ಇಂತೆಂದನು.

ಎಲೈ ಋಷಿಗಳಿರಾ ! ಕೇಳಿರಿ ! ನಾನು ಮೊದಲು ಹೇಳಿದ ಪಿಂಗಳೆ ಎಂಬ ವೇಶ್ಯೆಯು ಶಿವಭಕ್ತಿ ಸಂಪನ್ನನಾದ ಋಷಭಯೋಗೀಶ್ವರನನ್ನು ಪೂಜಿಸಿದಕಾರಣ ಆ ಪುಣ್ಯಾತಿಶಯದಿಂದ ಎರಡನೆಯ ಜನ್ಮದಲ್ಲಿ ಸದಾಚಾರ ಸಂಪನ್ನೆಯಾಗಿ ಸೌಂದರ್ಯವತಿಯಾಗಿ ಕೀರ್ತಿಮಾಲಿನಿಯೆಂಬ ಹೆಸರಿನಿಂದ ಚಂದ್ರಾಂಗದನ ಹೆಂಡತಿಯಾದ ಸೀಮಂತಿನಿಯ ಹೊಟ್ಟೆಯಲ್ಲಿ ಹುಟ್ಟಿದಳು.

ಹೀಗಿರುವಲ್ಲಿ ಭದ್ರಾಯುವೆಂಬ ರಾಜಕುಮಾರನು ಪದ್ಮಾಕರನ ಪಟ್ಟಣದಲ್ಲಿದ್ದುಕೊಂಡು ಗ್ರೀಷ್ಮಕಾಲದ ಸೂರ್ಯನಂತೆ ದಿನದಿನಕ್ಕೆ ಹೆಚ್ಚಾದ ತೇಜಸ್ಸುಳ್ಳವನಾಗಿ ಬೆಳೆಯುತ್ತಾ ಪದ್ಮಾಕರನ ಮಗನಾದ ಸುನಯನನಿಗೆ ಸಖನಾಗಿ ತಾನೂ ಅವನ ಹಾಗೆ ರತ್ನಾಭರಣಗಳನ್ನು ಧರಿಸಿಕೊಂಡು ಲೀಲೆಯಿಂದ ಕ್ರೀಡಿಸುತ್ತಿದ್ದನು. ಆ ಪದ್ಮಾಕರನಾದರೊ ತನ್ನ ಮಗನಿಗೂ ಆ ರಾಜಕುಮಾರನಿಗೂ ಕಾಲ ಕಾಲದಲ್ಲಿ ಆಗಬೇಕಾದ ಚೌಲೋಪನಯನಾದಿ ಸಂಸ್ಕಾರಗಳನ್ನು ಬ್ರಾಹ್ಮಣರಿಂದ ಮಾಡಿಸಿ ಗುರುಮುಖದಿಂದ ಅವರಿಬ್ಬರಿಗೂ ಸಕಲ ವಿದ್ಯಾಭ್ಯಾಸಗಳನ್ನು ಮಾಡಿಸಿದನು. ಬಳಿಕ ಭದ್ರಾಯುವಿಗೆ ಹದಿನಾರು ವರುಷವಾಯಿತು, ಆಗ ಯೋಗೀಶ್ವರನು ಭದ್ರಾಯುವಿನ ಮನೆಗೆ ಬಂದನು.

ಅನಂತರದಲ್ಲಿ ಭದ್ರಾಯುವು ತಾಯಿಯೊಡನೆ ಆತನಿಗೆ ನಮಸ್ಕಾರ ಮಾಡಿ ನಿಂತಿರಲು ಶಿವಯೋಗಿಯು ಭದ್ರಾಯುವನ್ನು ಕಂಡು ಸಂತೋಷಯುಕ್ತನಾಗಿ ಅವನೊಡನೆ ಇಂತೆಂದನು.

ಎಲೈ ರಾಜಕುಮಾರನೇ ! ನೀನು ಕ್ಷೇಮವೇ ? ನಿನ್ನ ತಾಯಿ ವ್ಯಾಧಿಯಿಲ್ಲದೆ ಚೆನ್ನಾಗಿದ್ದಾಳೆಯೇ ? ನೀನು ಯಾವ ಯಾವ ವಿದ್ಯವನ್ನು ಅಭ್ಯಾಸಮಾಡಿದ್ದೀಯೆ ಗುರು ಶುಶ್ರೂಷೆಯನ್ನು ಚೆನ್ನಾಗಿ ಮಾಡುತ್ತಿದ್ದೀಯೋ ನಿನ್ನ ಪ್ರಾಣಸಖನಾದ ವೈಶ್ಯಕುಮಾರನು ಚೆನ್ನಾಗಿದ್ದಾನೆಯೆ ಯಾವಾಗಲಾದರು ನನ್ನನ್ನು ಸ್ಮರಣೆಮಾಡುವೆಯಾ ಎಂದು ಕೇಳಿದನು. ಸೀಮಂತಿನಿ ವಿನಯ ಸಂಪನ್ನನಾದ ತನ್ನ ಕುಮಾರನಿಂದ ಆ ಋಷಭಯೋಗಿಗೆ ನಮಸ್ಕಾರವನ್ನು ಮಾಡಿಸಿ ಎಲೈ ಸ್ವಾಮಿಯೇ ! ನಿನ್ನ ಕೃಪಾಕಟಾಕ್ಷದಿಂದ ನಾವು ಚೆನ್ನಾಗಿದ್ದೇವೆ. ನೀನು ಈ ಭದ್ರಾಯುವಿಗೆ ಪ್ರಾಣದಾನ ಮಾಡಿದವನಾದಕಾರಣ ತಂದೆಗಿಂತಲು ಹೆಚ್ಚು, ನೆಂಟರಿಷ್ಟರಿಲ್ಲದ ಅನಾಥನಾದ ಈ ಬಾಲಕನನ್ನು ನಿನ್ನ ಶಿಷ್ಯನನ್ನಾಗಿ ಮಾಡಿಕೊಂಡು ಇವನಿಗೆ ಸಮಸ್ತವಾದ ಧರ್ಮಗಳನ್ನುಪದೇಶಮಾಡಿ ರಕ್ಷಿಸಬೇಕು. ಎಂದು ವಿಜ್ಞಾಪಿಸಿದಳು, ಆ ಋಷಭಯೋಗಿಯು ಆ ಸುಮತಿಯ ವಾಕ್ಯವನ್ನು ಕೇಳಿ ಸಂತೋಷಪಟ್ಟು ಭದ್ರಾಯುವಿಗೆ ಸಕಲ ಧರ್ಮ ರಹಸ್ಯಗಳನ್ನು ಉಪದೇಶ ಮಾಡಿದನು. ಹೇಗೆಂದರೆ:—

ಎಲೈ ಭದ್ರಾಯುವೇ ಕೇಳು ! ಶ್ರುತಿ, ಸ್ಮೃತಿ, ಪುರಾಣಗಳಲ್ಲಿ ಹೇಳಲ್ಪಟ್ಟ ಧರ್ಮಗಳಲ್ಲಿ ನಿನ್ನ ಜಾತಿಗೂ ನಿನ್ನಾಶ್ರಮಕ್ಕೂ ಯೋಗ್ಯವಾದ ಧರ್ಮಗಳನ್ನೇ ಆಚರಿಸು ಅನ್ಯಜಾತಿಯ ಧರ್ಮಗಳನ್ನು ಆಶ್ರಮಾಂತರ ಧರ್ಮಗಳನ್ನು ಬಿಡು, ಅದರಲ್ಲಿಯೂ ಸನ್ಮಾರ್ಗದಲ್ಲಿದ್ದುಕೊಂಡು ಸತ್ಪುರುಷರು ಆಚರಿಸುವಂಥ ಧರ್ಮವನ್ನೇ ಹಿಡಿ. ಗೋಬ್ರಾಹ್ಮಣರಲ್ಲಿಯೂ, ಗುರುಗಳಲ್ಲಿಯೂ, ದೇವತೆಗಳಲ್ಲಿಯೂ, ಭಕ್ತಿಯಿಡು, ಅವರನ್ನು ಯಾವಾಗಲೂ ಎಂದಿಗೂ ತಿರಸ್ಕರಿಸಬೇಡ, ಅವರ ಆಜ್ಞೆಯನ್ನು ಮೀರಬೇಡ. ಅತಿಥಿಯಾಗಿ ಬಂದವನು ಚಂಡಾಲನಾದರು ಅವನಿಗೆ ಅನ್ನವನ್ನಿಕ್ಕಿಸು, ಪ್ರಾಣಸಂಕಟ ಬಂದರೂ ಸತ್ಯವನ್ನು ಬಿಡಬೇಡ. ಗೋಬ್ರಾಹ್ಮಣರಿಗೆ ಉಪದ್ರವ ಬಂದ ಸಮಯದಲ್ಲಿ ಅಬದ್ಧವನ್ನಾದರು ಹೇಳಿ ಅವರನ್ನು ಸಂರಕ್ಷಿಸು. ವಿವಾಹಕಾಲದಲ್ಲಿಯೂ, ಸ್ತ್ರೀಸಂಭೋಗದಲ್ಲಿಯೂ, ಪ್ರಾಣಸಂಕಟದಲ್ಲಿಯೂ, ಸಮಸ್ತ ದ್ರವ್ಯವು ಹೋಗುವ ಸಮಯದಲ್ಲಿಯೂ, ಬ್ರಾಹ್ಮಣರಿಗೆ ಆಪತ್ತು ಬಂದಾಗಲೂ ಹುಸಿಯನ್ನಾಡಿದರೂ ದೋಷವಿಲ್ಲ. ಪರಸ್ತ್ರೀಯರಲ್ಲಿಯೂ, ಪರದ್ರವ್ಯದಲ್ಲಿಯೂ, ದೇವಸ್ವ ಬ್ರಹ್ಮಸ್ವಗಳಲ್ಲಿಯೂ ನಿನಗೆ ಅಸಾಧ್ಯವಾದ ವಸ್ತುವಿನಲ್ಲಿಯೂ ಆಸೆಪಡಬೇಡ. ಪುಣ್ಯ ಕಥಾಶ್ರವಣದಲ್ಲಿಯೂ,

ಸದಾಚಾರದಲ್ಲಿಯೂ ಸಜ್ಜನರ ಸಹವಾಸದಲ್ಲಿಯೂ ಧರ್ಮ ಸಂಗ್ರಹದಲ್ಲಿಯೂ ಸದಾ ಆಸಕ್ತಿಯುಳ್ಳವನಾಗಿರು. ಸ್ನಾನ, ಸಂಧ್ಯಾವಂದನೆ, ಜಪ, ಹೋಮ, ವೇದಾಧ್ಯಯನ, ಪಿತೃತರ್ಪಣ, ದೇವ ಬ್ರಾಹ್ಮಣ ಪೂಜೆ, ಅತಿಥಿ ಸತ್ಕಾರಗಳನ್ನು ಭಕ್ತಿಯಿಂದ ಮಾಡು. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಾದಿಗಳನ್ನು ದೂರಮಾಡು. ಮಿತ್ರತ್ವ ಶತ್ರುತ್ವಗಳನ್ನು, ವೈಷಮ್ಯವನ್ನೂ, ಭಯವನ್ನು ದುರ್ಜನಸಂಗವನ್ನೂ ಕಪಟವನ್ನು ಪ್ರಯತ್ನಪೂರ್ವಕವಾಗಿ ಪರಿಹರಿಸಿಕೊ ಸರ್ವಪ್ರಕಾರದಲ್ಲಿಯೂ ಸತ್ಯವನ್ನೂ ಧರ್ಮವನ್ನು ಬಿಡಬೇಡ. ಯಾವ ಕಾರಣದಿಂದಲೂ ಬ್ರಾಹ್ಮಣ ಹಿಂಸೆಯನ್ನು ಮಾಡಬೇಡ ವ್ಯರ್ಥವಾಗಿ ಒಬ್ಬರಲ್ಲಿ ದ್ವೇಷವನ್ನು ಕಟ್ಟಿಕೊಳ್ಳಬೇಡ. ಇಲ್ಲದ ದೋಷವನ್ನು ಯಾರಲ್ಲಿಯೂ ಆರೋಪಿಸಬೇಡ. ಬೇಟೆ, ಜೂಜು, ಮಧ್ಯಪಾನ, ಸ್ತ್ರೀಗೋಷ್ಠಿ, ವಿಟಸಂಸರ್ಗಗಳಲ್ಲಿ ಅತಿಪ್ರೀತಿಯನ್ನು ಮಾಡಬೇಡ. ಧನಿಕರಾಗಿ ಸುಖಿಗಳಾಗಿದ್ದವರಲ್ಲಿ ಸ್ನೇಹವನ್ನು ಮಾಡು. ದುರ್ಜನರಲ್ಲಿ ಉದಾಸೀನ ಬುದ್ಧಿಯನ್ನೇ ಮಾಡು. ಅತ್ಯಾಹಾರ, ಅತಿನಿದ್ರೆ, ಅತಿಕ್ರೋಧ, ಅತಿಬಳಲಿಕೆ, ಅತಿ ಸಂಭಾಷಣೆ, ಅತಿ ಸಂಭೋಗಗಳನ್ನು ದೂರಮಾಡು. ಅತಿ ವಿದ್ಯೆಯನ್ನು, ಅತಿ ಭಕ್ತಿಯನ್ನು, ಅತಿ ವಿಶ್ವಾಸವನ್ನು, ಅತಿ ಪುಣ್ಯವನ್ನು, ಅತ್ಯುತ್ಸಾಹಗಳನ್ನು, ಅತಿ ಜ್ಞಾನವನ್ನು, ಅತಿ ಸಹನೆಯನ್ನು, ಅತಿ ಧೈರ್ಯವನ್ನು, ಬಹು ಕೀರ್ತಿಯನ್ನು ಬಿಡದೆ ಸಂಪಾದಿಸು, ಸ್ವಸ್ತ್ರೀಯಲ್ಲಿ ಕಾಮವನ್ನು ಮಾಡು. ಕಪಟಿಗಳಲ್ಲಿ ಕ್ರೋಧವನ್ನು ತೋರಿಸು, ಪಾಪಾರ್ಜನೆಯಲ್ಲಿ ಲೋಭಿಯಾಗಿರು, ಪಾಪಿಗಳಲ್ಲಿ ಭೀತಿಯುಳ್ಳವನಾಗು, ಪಾಷಂಡಿಗಳಲ್ಲಿ ದ್ವೇಷಿಯಾಗಿರು, ಸಜ್ಜನರಲ್ಲಿ ಪ್ರೀತಿಗೆ ಪಾತ್ರನಾಗು, ದುಷ್ಟಮಂತ್ರಾಲೋಚನೆಯಲ್ಲಿ ಏನೂ ತಿಳಿಯದವನಹಾಗಿರು, ಚಾಡಿಕಾರರ ವಾಕ್ಯಗಳನ್ನು ಕೇಳುವಾಗ ಕಿವುಡನಾಗಿರು, ಧೂರ್ತರನ್ನು, ಭಂಡರನ್ನು, ಕ್ರೂರರನ್ನು, ಚಪಲರನ್ನು, ಪತಿತರನ್ನು, ನಾಸ್ತಿಕರನ್ನು, ಜಾರರನ್ನು ದೂರದಲ್ಲಿಯೇ ತ್ಯಜಿಸು. ನಿನ್ನನ್ನು ನೀನೇ ಹೊಗಳಿಕೊಳ್ಳಬೇಡ, ಪರಲೋಕಚಿಂತೆಯನ್ನು ಎಂದಿಗೂ ಬಿಡಬೇಡ. ಸ್ತ್ರೀಯರಲ್ಲಿಯೂ ಪುತ್ರರಲ್ಲಿಯೂ ದ್ರವ್ಯದಲ್ಲಿಯೂ ಅತಿಪ್ರೀತಿಯನ್ನು ಮಾಡಬೇಡ. ಪತಿವ್ರತೆಯಾದ ಪತ್ನಿಯ ವಾಕ್ಯದಲ್ಲಿಯೂ ಅತ್ತೆಮಾವಂದಿರ ವಾಕ್ಯದಲ್ಲಿಯೂ ಗುರುಗಳ ವಾಕ್ಯದಲ್ಲಿಯೂ ಹಿರಿಯರ ವಾಕ್ಯದಲ್ಲಿಯೂ ವಿಶ್ವಾಸವನ್ನಿಡು. ಸಾವಧಾನದಿಂದ ನಿನ್ನ ಶರೀರ ಸಂರಕ್ಷಣೆಯನ್ನು ಮಾಡಿಕೋ. ಭೃತ್ಯರಲ್ಲಿಯೂ, ದೀನರಲ್ಲಿಯೂ, ವಿಶ್ವಾಸವನ್ನು ತೋರಿಸು. ಕಳ್ಳನನ್ನಾದರು ನಂಬಿಸಿ ಕೊಲ್ಲಬೇಡ. ಕಪಟರಹಿತರಲ್ಲಿ ಸಂದೇಹಪಡಬೇಡ. ಅನಾಥರನ್ನು ಕೃಪಣರನ್ನು ವೃದ್ಧರನ್ನು ಸ್ತ್ರೀಯರನ್ನು ಬಾಲಕರನ್ನು ನಿರಪರಾಧಿಗಳನ್ನು ಉಪಾಯದಿಂದಲೂ ಸಾಮರ್ಥ್ಯದಿಂದಲೂ ಧನದಿಂದಲೂ ಸಂರಕ್ಷಿಸು.

ಸಂಹರಿಸತಕ್ಕಂಥ ಶತ್ರುವಾದರೂ ಶರಣಾಗತನಾದರೆ ಅವನನ್ನು ಕೆಡಿಸಬೇಡ. ಯೋಗ್ಯನಾದರೂ, ಅಯೋಗ್ಯನಾದರೂ, ನೀಚನಾದರೂ, ಉತ್ತಮನಾದರೂ, ದೇಹಿಯೆಂದರೆ ನಾಸ್ತಿಯೆನ್ನಬೇಡ. ಅವರಿಗೆ ಶಿರಸ್ಸಾದರೂ ಕೊಡು. ಅತಿ ಪ್ರಯತ್ನದಿಂದ ಕೀರ್ತಿಯನ್ನೇ ಸಂಪಾದಿಸು ಅರಸುಗಳಿಗೂ ವಿದ್ವಾಂಸರಿಗೂ ಕೀರ್ತಿಯೇ ಭೂಷಣವಾದುದು. ಕೀರ್ತಿಯಿಂದಲೇ ಐಶ್ವರ್ಯ ಉಂಟಾಗುವದು. ಕೀರ್ತಿಯಿಂದಲೇ ಪುಣ್ಯವುಂಟಾಗುವುದು. ಚಂದ್ರನು ಹೇಗೆ ಬೆಳದಿಂಗಳಿಂದ ಪ್ರಕಾಶಿಸುವನೋ ಹಾಗೆ ಕೀರ್ತಿಯಿಂದಲೇ ಪುರುಷನಾದವನು ಪ್ರಕಾಶಿಸು ವನು. ಆನೆಗಳನ್ನೂ ಕುದುರೆಗಳನ್ನೂ ರಥಗಳನ್ನೂ ಕಾಲ್ಬಲಗಳನ್ನೂ ರತ್ನಗ ಳನ್ನೂ ಅಪಕೀರ್ತಿ ಬಾರದಹಾಗೆ ಸಂಪಾದಿಸು. ಅಪಕೀರ್ತಿ ಬರುವಹಾ ಗಿದ್ದರೆ ಅದೆಲ್ಲವನ್ನು ತೃಣಕ್ಕೆ ಸಮಾನವೆಂದು ತಿಳಿದು ಬಿಟ್ಟುಬಿಡು. ತಂದೆ ತಾಯಿ ಗುರು ಸ್ನೇಹಿತರು ಮಕ್ಕಳು ಹೆಂಗಸರು ಬ್ರಾಹ್ಮಣರು ಮಾಡಿದ ಕೋಪ ಗಳನ್ನು ಸಹಿಸು. ಧರ್ಮಾರ್ಥವಾಗಿ ಧನವನ್ನು ಕೊಟ್ಟು ಆ ಮೇಲೆ ಸಂಕಟ ಪಡಬೇಡ. ಬ್ರಾಹ್ಮಣರು ಹೇಗೆ ಸಂತುಷ್ಟರಾಗುವರೊ ಹಾಗೆ ಅವರಿಗೆ ಹಿತ ವನ್ನೆ ಮಾಡು. ಆಪತ್ತಿಗೆ ಒಳಗಾದ ಅರಸುಗಳನ್ನು ಬ್ರಾಹ್ಮಣರನ್ನು ಕಡೆ ಹಾಯಿಸು. ಆಯುಸ್ಸು, ಕೀರ್ತಿ, ಸೌಖ್ಯ, ಧನ, ಪುಣ್ಯ, ಸಂತಾನಾಭಿವೃಧಿ ಮೊದಲಾದವು ಯಾವ ಧರ್ಮವನ್ನು ಮಾಡಿದರೆ ಲಭಿಸುವವೋ ಅಂಥ ಧರ್ಮ ವನ್ನೇ ಬಿಡದೆ ಮಾಡುತ್ತಿರು. ನಹುಷ, ಕಾರ್ತವೀರ್ಯ ಮೊದಲಾದ ಅರಸುಗಳು ಮಾಡಿದ ಪ್ರಮಾದದಿಂದ ಅಗಸ್ತ್ಯ ಜಮದಗ್ನಿ ಮೊದಲಾದ ಮುನಿಗಳ ಕೋಪ ದಿಂದ ನಷ್ಟರಾಗಿ ಹೋದಕಾರಣ ಐಶ್ವರ್ಯಾಭಿವೃದ್ಧಿಯನ್ನು ಬಯಸುವಂಥವರು ಪ್ರಮಾದದಿಂದಲಾದರು ಉತ್ತಮರಾದ ಬ್ರಾಹ್ಮಣರನ್ನು ಉದಾಸೀನ ಮಾಡ ಬಾರದು. ಆದಕಾರಣ ನೀನು ಬ್ರಾಹ್ಮಣರನ್ನು ಉದಾಸೀನ ಮಾಡಬೇಡ. ಯಾವ ಕಾರ್ಯವನ್ನು ಮಾಡಬೇಕಾದರೂ ದೇಶ ಕಾಲ ಸಾಮರ್ಥ್ಯ ಸಾಧ್ಯಾ ಸಾಧ್ಯಗಳನ್ನು ವಿಚಾರಿಸಿ ಮಾಡು, ಬಾಧೆ ಪಡುವವರನ್ನು ಕಂಡರೆ ಅವರ ಬಾಧೆ ಯನ್ನು ಪರಿಹರಿಸಿ ಕಾಪಾಡು. ನೀನು ಒಬ್ಬನಿಗಾದರೂ ಬಾಧೆ ಕೊಡಬೇಡ. ನಿನ್ನ ಸರ್ವ ಶಕ್ತಿಯಿಂದ ಕಳ್ಳರನ್ನು ದುರ್ಜನರನ್ನು ನಿಗ್ರಹಿಸು. ಸ್ನಾನ ಜಪ ಹೋಮಗಳಲ್ಲಿ ತ್ವರೆಯನ್ನು ಮಾಡಬೇಡ. ಭೋಜನವನ್ನು ನಿದ್ರೆಯನ್ನು ಶೀಘ್ರದಲ್ಲಿ ತೀರಿಸಿಕೋ ಎಲೈ ಬುದ್ಧಿವಂತನಾದ ಭದ್ರಾಯುವೇ! ದಾಕ್ಷಿಣ್ಯ ಯುಕ್ತವಾದ ಸತ್ಯವಾದ ಅಲ್ಪಾಕ್ಷರವಾದ ಅರ್ಥಗರ್ಭಿತವಾದ ವಾಕ್ಯವನ್ನೇ ನುಡಿ. ಶತ್ರುಗಳಲ್ಲಿಯೂ ಆಪತ್ಕಾಲದಲ್ಲಿಯೂ ಪಾಪಕರ್ಮಗಳಲ್ಲಿಯೂ ಭಯ ವುಳ್ಳವನಾಗಿರು. ದಾಯಾದಿಗಳಲ್ಲಿಯೂ ಬಂಧುಗಳಲ್ಲಿಯೂ ಮಿತ್ರರಲ್ಲಿಯೂ ಪತ್ನಿಯರಲ್ಲಿಯೂ ಮಕ್ಕಳಲ್ಲಿಯೂ ನಿನ್ನ ಜೊತೆಯಲ್ಲಿ ಕುಳಿತು ಭೋಜನ

ಮಾಡುವವರಲ್ಲಿಯೂ ಪಕ್ಷಪಾತವಿಲ್ಲದೆ ಸಮಾನಬುದ್ಧಿಯುಳ್ಳವನಾಗಿರು. ವಿದ್ವಾ ಗೋಷ್ಠಿಯಲ್ಲಿಯೂ ಮಹಾತ್ಮರು ಮಾಡುವ ಉಪದೇಶಗಳಲ್ಲಿಯೂ ಅನಾ ದಾರಣೆ ಮಾಡಬೇಡ. ಪುಣ್ಯಕ್ಷೇತ್ರದಲ್ಲಿಯೂ ಪುಣ್ಯನದೀ ತೀರದಲ್ಲಿಯೂ ಮಹಾತ್ಮರಿರುವ ಪ್ರದೇಶದಲ್ಲಿಯೂ, ಶಿವಾಲಯವಿರುವ ಸ್ಥಳದಲ್ಲಿಯೂ ವಾಸ ಮಾಡು. ಜಗತ್ಪತಿಯಾದ ಪರಮೇಶ್ವರನಲ್ಲಿಯೇ ಭಕ್ತಿಯನ್ನಿಡು. ಜಾರೆ ಯರು ವೇಶ್ಯಾಸ್ತ್ರೀಯರು ನೀಚರೂ ಕೆಡುಕರೂ ಇರುವ ಕಡೆಯಲ್ಲಿಯೂ ಕಂಟಕ ಕೀಟಕ ಪ್ರದೇಶದಲ್ಲಿಯೂ ಎಂದಿಗೂ ಇರಬೇಡ. ಜಗತ್ಪತಿಯಾದ ಪರಮೇ ಶ್ವರನೊಬ್ಬನಲ್ಲಿಯೇ ನಿಶ್ಚಲವಾದ ಭಕ್ತಿಯುಳ್ಳವನಾಗಿರು. ಮಿಕ್ಕಾದ ದೇವತೆ ಗಳಲ್ಲಿಯೂ ಸಾಧಾರಣವಾದ ಸಮಾನ ಭಕ್ತಿಯುಳ್ಳವನಾಗಿರು. ಯಾವ ದೇವ ರನ್ನೂ ದೂಷಿಸದೆ ಉತ್ಸವಗಳನ್ನು ಕಂಡರೆ ಸಂತೋಷಪಡು. ಸರ್ವಕಾಲದ ಲ್ಲಿಯೂ ಶುಚಿರ್ಭೂತನಾಗಿ ಶಿವಧ್ಯಾನ ಪಾರಾಯಣನಾಗಿ ಶಾಂತನಾಗಿ ಸಮ ರ್ಥನಾಗಿ ದೃಢಚಿತ್ತನಾಗಿ ಸಹನೆಯುಳ್ಳವನಾಗಿರು.

ವೇದಶಾಸ್ತ್ರಜ್ಞರಾದ ಬ್ರಾಹ್ಮಣರೊಡಗೂಡಿ ಅನೇಕ ಯಾಗಗಳನ್ನು ಮಾಡಿಸು. ಅಶ್ವಮೇಧ ರಾಜಸೂಯ ಮೊದಲಾದ ಕ್ರತುಗಳನ್ನು ನೀನೆ ಮಾಡು ಅಶ್ವತ್ಥ ಮೊದಲಾದ ಪುಣ್ಯ ವೃಕ್ಷಗಳನ್ನು ಗಂಗೆ ಮೊದಲಾದ ಪುಣ್ಯ ನದಿಗಳನ್ನು ಸ್ಫಟಿಕ ಸರೋವರ ಮೊದಲಾದ ಪುಣ್ಯ ತೀರ್ಥಗಳನ್ನು ಹಸುಗಳನ್ನು ವೃಷಭಗ ಳನ್ನು ಪತಿವ್ರತಾ ಸ್ತ್ರೀಯರನ್ನು ಅನರ್ಘ್ಯವಾದ ರತ್ನಗಳನ್ನು ನಿನ್ನ ಕುಲದೈವ ವನ್ನು ಕಂಡ ಕ್ಷಣವೆ ನಮಸ್ಕರಿಸಿ ವಂದಿಸು. ಬೆಳಗಿನಜಾವದಲ್ಲಿ ಎದ್ದು ಶುದ್ಧಾ ಚಮನವನ್ನು ಮಾಡಿ, ನಿರ್ಮಲವಾದ ಮನಸ್ಸಿನಿಂದ ಗುರುವಿಗೆ ನಮಸ್ಕರಿಸಿ ಸಕಲ ಜಗತ್ತುಗಳಿಗೂ ಒಡೆಯನಾದ ಪರಮೇಶ್ವರನನ್ನು ದಹರಾಕಾಶ ಮಧ್ಯ ದಲ್ಲಿ ಧ್ಯಾನಿಸು, ಮಣಿಪೂರಕದಲ್ಲಿ ಲಕ್ಷ್ಮೀಪತಿಯಾದ ವಿಷ್ಣುವನ್ನು ಧ್ಯಾನಮಾಡು ಅದೇ ಪ್ರಕಾರ ಅನಾಹತ ಚಕ್ರದಲ್ಲಿ ಬ್ರಹ್ಮದೇವರನ್ನು ಭಜಿಸು, ಆಧಾರಚಕ್ರ ದಲ್ಲಿ ವಿಘ್ನೇಶ್ವರ ಕುಮಾರಸ್ವಾಮಿಗಳನ್ನು ಪ್ರಾರ್ಥನೆಮಾಡು, ಕಾತ್ಯಾಯನಿ ಸರ ಸ್ವತಿಯರನ್ನು, ಇಂದ್ರ, ಅಗ್ನಿ, ಯಮ, ನಿರಋತಿ, ವರುಣ, ವಾಯು, ಕುಬೇರ, ಈಶಾನರೆಂಬ ಅಷ್ಟದಿಕ್ಪಾಲಕರನ್ನು ಪುಣ್ಯಾತ್ಮರಾದಂಥ ರಾಯರುಗಳನ್ನುಹೊಗಳಿ ನಮಸ್ಕರಿಸಿ ಉದಯಿಸುವ ಸೂರ್ಯನಿಗೆ ನಮಸ್ಕಾರ ಮಾಡು. ಗಂಧ ಪುಷ್ಪ ಫಲ ತಾಂಬೂಲ ಮೊದಲಾದ ವಸ್ತುಗಳನ್ನು ಪರಮೇಶ್ವರನಿಗೆ ಸಮರ್ಪಣೆ ಮಾಡದೆ ಎಂದಿಗೂ, ನೀನೆ ಅನುಭವಿಸಬೇಡ. ಸ್ನಾನ, ಜಪ, ಹೋಮ, ದಾನ, ಮೊದಲಾದ ನಿತ್ಯಕರ್ಮಗಳನ್ನು ಮಾಡಿ, ಪರಮೇಶ್ವರನಿಗೆ ಆತ್ಮ ಸಮರ್ಪಣೆ ಯನ್ನು ಮಾಡು. ಊಟಮಾಡುವಾಗಲು ತಿರುಗಾಡುವಾಗಲು ಕುಳಿತಿರುವಾಗಲು ನಿಂತಿದ್ದಾಗಲೂ ಮಲಗಿರುವಾಗಲೂ ಕ್ರೀಡಿಸುವಾಗಲೂ ನೋಡುವಾಗಲೂ

ನುಡಿಯುವಾಗಲು ಕೇಳುವಾಗಲು ಉಳಿದ ಸರ್ವ ಕಾಲದಲ್ಲಿಯೂ ಶಿವಸ್ಮರಣೆಯನ್ನು ಮಾಡು. ಯಾವಾಗಲೂ ಕಂಠದಲ್ಲಿ ರುದ್ರಾಕ್ಷಿಯ ಸರಗಳು, ಹಣೆಯಲ್ಲಿ ವಿಭೂತಿ ತ್ರಿಪುಂಡ್ರ ಮುಖದಲ್ಲಿ ಪಂಚಾಕ್ಷರೀ ಮಂತ್ರಗಳನ್ನು ಅಲಂಕರಿಸಿಕೊಂಡು ಪರಮೇಶ್ವರನ ಪಾದಕಮಲವನ್ನು ಸ್ಮರಣೆಮಾಡುತ್ತಾ ಸದಾಶಿವನನ್ನು ಧ್ಯಾನಿಸು. ಎಲೈ ಭದ್ರಾಯುವೇ! ಇತರ ಪುರಾಣಗಳಲ್ಲಿ ವಿಸ್ತಾರವಾಗಿ ಹೇಳಿದಂಥಾ ಧರ್ಮರಹಸ್ಯಗಳನ್ನು ಈಗ ನಾನು ನಿನಗೆ ಸಂಕ್ಷೇಪವಾಗಿ ಹೇಳಿದೆನು. ಇನ್ನೂ ಸಕಲ ಪುರಾಣಗಳ ಸಾರಭೂತವಾದ ಸಕಲ ಪಾಪ ಪರಿಹಾರಕವಾದ ಪರಿಸುವರ್ಗ ಜಯಪ್ರದವಾದ ಸಮಸ್ತ ವಿಪತ್ತುಗಳನ್ನು ತೊಲಗಿಸುವಂಥ ಶಿವಕವಚ ಮಹಿಮೆಯನ್ನು ಹೇಳುವೆನೆಂದು ಋಷಭಯೋಗೀಶ್ವರನು ಭದ್ರಾಯುವಿಗೆ ನಿರೂಪಿಸಿದನೆಂಬ ಕಥೆಯನ್ನು ಸೂತಪುರಾಣೀಕನು ಶೌನಕಾದಿ ಋಷಿಗಳಿಗೆ ವಿವರಿಸಿ ಹೇಳಿದನು.

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರನರಪತಿ ಬಿರುದೆಂತೆಂಬರ ಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ ಗಂಡಬೇರುಂಡಾದಿ ನಾನಾ ಬಿರುದಾಂಕಿತ ಯಾದವಕುಲ ತಿಲಕ ಆತ್ರೇಯಸಗೋತ್ರ ಅಶ್ವಲಾಯನ ಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರ ರಾಜಒಡೆಯರ ಪೌತ್ರ ನರಸ ಭೂಪಾಲಕರ ಪುತ್ರ ಶ್ರೀ ಚಾಮರಾಜ ಒಡೆಯರವರು ಕರ್ಣಾಟಕ ಭಾಷೆಯಲ್ಲಿ ರಚಿಸಿದ ಸ್ಕಂದಪುರಾಣೋಕ್ತ ಬ್ರಹ್ಮೋತ್ತರಖಂಡದಲ್ಲಿ ಋಷಭಯೋಗಿಯು ಭದ್ರಾಯುವಿಗೆ ಸದಾಚಾರ ಮಹಿಮೆಯನ್ನು ಕುರಿತು ಧರ್ಮೋಪದೇಶ ಮಾಡಿದನೆಂಬಲ್ಲಿಗೆ,

೧೧ನೆಯ ಅಧ್ಯಾಯಕ್ಕೆ ಮಂಗಳಮಸ್ತು.

## ಶಿವಕವಚ ಪ್ರಭಾವ.

### ಹನ್ನೆರಡನೆಯ ಅಧ್ಯಾಯ.

ಅನಂತರದಲ್ಲಿ ಸೂತಪುರಾಣಿಕನು ಶೌನಕಾದಿ ಮಹಾ ಮುನಿಗಳನ್ನು ಕುರಿತು ಮರಳಿ ಇಂತೆಂದನು:—

ಎಲೈ ಋಷಿಗಳಿರಾ! ಕೇಳಿ. ಹೀಗೆ ಆ ಋಷಭಯೋಗೀಶ್ವರನು ಭದ್ರಾಯುವಿಗೆ ಧರ್ಮೋಪದೇಶವನ್ನು ಮಾಡಿದ ಬಳಿಕ ಮರಳಿ ಆ ಭದ್ರಾಯುವಿಗೆ ಶಿವಕವಚ ಪ್ರಭಾವವನ್ನು ಹೇಳತೊಡಗಿದನು. ಹೇಗೆಂದರೆ ಎಲೈ ಭದ್ರಾಯುವೆ! ಸಮಸ್ತ ದೇವತೆಗಳಲ್ಲಿಯೂ ಮಹಾದೇವನೆನಿಸಿಕೊಂಡಿರುವ ಸಕಲ ಜಗದ್ವ್ಯಾಪಿ

ಪಕನಾದ ಪರಮೇಶ್ವರನಿಗೆ ನಮಸ್ಕರಿಸಿ ಸಕಲ ದೇಶದಲ್ಲಿಯೂ ಸಕಲ ಕಾಲ ದಲ್ಲಿಯೂ ಸಮಸ್ತೋಪದ್ರವಗಳನ್ನು ಪರಿಹರಿಸಿ ಮನುಷ್ಯರಿಗೆ ಶರೀರ ಸಂರಕ್ಷಣ ಕರವಾದಕಾರಣ ಕವಚದಂತಿರುವ ಈ ಶಿವಕವಚ ಸ್ತೋತ್ರವನ್ನು ವಿಧಿಪೂರ್ವಕ ವಾಗಿ ನಿನಗೆ ಉಪದೇಶ ಮಾಡುವೆನು; ಈ ಕವಚವನ್ನು ಜಪಿಸುವಂಥವನು ಪರಿಶುದ್ಧವಾದ ಪ್ರದೇಶದಲ್ಲಿ ವ್ಯಾಘ್ರಚರ್ಮ ಮೊದಲಾದ ಆಸನದಲ್ಲಿ ಕುಳಿತು ಜಿತೇಂದ್ರಿಯನಾಗಿ ಇಂದ್ರಿಯಗಳಿಗೆ ಅಗೋಚರನಾದ ನಿರವಯವನಾದ ಅಪರಿ ಚ್ಛಿನ್ನನಾದ ಜ್ಞಾನಾನಂದ ಸ್ವರೂಪನಾದ ಭಕ್ತಾನುಗ್ರಹಾರ್ಥವಾಗಿ ಮಾಯಾ ಕಲ್ಪಿತವಾದ ಇಂದ್ರಿಯಗಳಿಂದ ಗಮ್ಯವಾದ ಅಪರಿಚ್ಛಿನ್ನನಾದ ಕೋಟಿಸೂರ್ಯ ಪ್ರಕಾಶಮಾನವಾದ ದಿವ್ಯ ಮಂಗಳ ವಿಗ್ರಹವನ್ನು ಧರಿಸಿದ ಪುರಾಣ ಪುರುಷ ನಾದ ಪರಮೇಶ್ವರನನ್ನು ಹೃದಯ ಕಮಲದಲ್ಲಿ ನೆಲೆಗೊಳಿಸಿ, ಬಾಹ್ಯವ್ಯಾಪಾರ ಗಳನ್ನು ಮರೆತು ಆ ಸಚ್ಚಿದಾನಂದ ಸ್ವರೂಪನಾದ ಪರಮೇಶ್ವರನಲ್ಲಿಯೇ ಅಳ ವಟ್ಟು ಪರವಶನಾಗಿ ಮುಹೂರ್ತಮಾತ್ರವಾದರು ನಿಶ್ಚಲನಾಗಿರಬೇಕು.

ಆ ಬಳಿಕ ಸಮಾಹಿತಚಿತ್ತನಾಗಿ ವಿಧ್ಯುಕ್ತಪ್ರಕಾರದಿಂದ ತತ್ತದವಯ ವಗಳಲ್ಲಿ ಶಿವಷಡಕ್ಷರೀ ಮಂತ್ರದ ನ್ಯಾಸವನ್ನು ಮಾಡಿ ಶಿವಕವಚಧಾರಣೆಯಿಂದ ಶರೀರ ಸಂರಕ್ಷಣೆಯನ್ನು ಮಾಡಿಕೊಳ್ಳುವುದು, ಹೇಗೆಂದರೆ:—ಸಕಲ ದೇವಾತ್ಮ ಕನಾದ ಜ್ಯೋತಿರ್ಮಯನಾದ ಪರಮೇಶ್ವರನು ಅಗಾಧವಾದ ಸಂಸಾರಕೂಪ ದಲ್ಲಿ ಬಿದ್ದಿರುವ ನನ್ನನ್ನು ರಕ್ಷಿಸಲಿ. ಮಂತ್ರಮೂಲವಾದ ಪರಮೇಶ್ವರನ ದಿವ್ಯ ನಾಮವು ನನ್ನ ಹೃದಯದಲ್ಲಿ ಇರುವಂಥಾ ಸಕಲ ಪಾಪಗಳನ್ನು ಹೋಗಲಾಡಿ ಸಲಿ! ಜ್ಞಾನಾನಂದಾತ್ಮಕನಾದ ತೇಜೋಮಯನಾದ ವಿಶ್ವಮೂರ್ತಿಯಾದ ಪರಶಿವನು ಸಕಲ ಪ್ರದೇಶಗಳಲ್ಲಿಯೂ ನನ್ನನ್ನು ಕಾಪಾಡಲಿ. ಸೂಕ್ಷ್ಮಕ್ಕಿಂ ತಲೂ ಸೂಕ್ಷ್ಮನಾದ ಅತ್ಯಂತ ಸಾಮರ್ಥ್ಯ ಉಳ್ಳವನಾದ ಅದ್ವಿತೀಯನಾದ ಈಶ್ವರನು ಸಮಸ್ತ ವಿಧ ಭಯಗಳ ದೆಸೆಯಿಂದ ನನ್ನನ್ನು ರಕ್ಷಿಸಲಿ. ಯಾವನು ಭೂ ರೂಪಮಂ ಧರಿಸಿ ಸಕಲವನ್ನೂ ಹೊತ್ತಿರುವನೋ ಅಂಥಾ ಶಿವನು ಭೂಮಿ ಯಲ್ಲಿ ನನ್ನನ್ನು ರಕ್ಷಿಸಲಿ. ಯಾವನು ಉದಕ ಸ್ವರೂಪವನ್ನು ತಾಳಿ ಸಕಲಪ್ರಾಣಿ ಗಳಿಗೂ ಜೀವನವನ್ನು ಕಲ್ಪಿಸುತ್ತಿರುವನೋ ಆ ಪರಮೇಶ್ವರನು ಉದಕಗಳ ದೆಸೆಯಿಂದ ನನ್ನನ್ನು ಸಂರಕ್ಷಿಸಲಿ. ಯಾವನು ಮಹಾ ಪ್ರಳಯಕಾಲದಲ್ಲಿ ಸಮಸ್ತಲೋಕಗಳನ್ನೂ ದಹಿಸಿ ಅತ್ಯಂತ ವಿಲಾಸದಿಂದ ತಾಂಡವ ಮೂರ್ತಿಯಾ ಗಿರುವನೋ ಆ ಕಾಲಾಗ್ನಿ ರುದ್ರನು ಕಾಳ್ಗಿಚ್ಚಿನ ದೆಸೆಯಿಂದಲೂ ಸುಳಿಗಾಳಿಗ ಳಿಂದ ಪ್ರಾಪ್ತವಾದ ಭಯಗಳ ದೆಸೆಯಿಂದಲೂ ಜ್ವರಾದಿ ತಾಪಗಳ ದೆಸೆಯಿಂ ದಲೂ ನನ್ನನ್ನು ಸಂರಕ್ಷಿಸಲಿ. ಥಳಥಳಿಸುವ ಮಿಂಚಿನ ಕಾಂತಿಗೂ ಚಿನ್ನದ ಕಾಂತಿಗೂ ಸಮಾನವಾದ ಕಾಂತಿಯುಳ್ಳ ಜ್ಞಾನ ಮುದ್ರೆಯನ್ನು ವರದ ಮುದ್ರೆ

ಯನ್ನು ಅಭಯದ ಮುದ್ರೆಯನ್ನು ಕುಠಾರವನ್ನು ಹಸ್ತಗಳಲ್ಲಿ ಧರಿಸಿದಂಥಾ ಚತುರ್ಮುಖನಾದಂಥ ತ್ರಿಣೇತ್ರನಾದಂಥ ತತ್ಪುರುಷಮೂರ್ತಿಯು ಪೂರ್ವ ದಿಕ್ಕಿನಲ್ಲಿ ನನ್ನನ್ನು ರಕ್ಷಿಸಲಿ. ಕುಠಾರವನ್ನು ಜ್ಞಾನಮುದ್ರೆಯನ್ನು ಅಂಕುಶವನ್ನು ಪಾಶವನ್ನು ಕಪಾಲವನ್ನು ಢಕ್ಕೆಯನ್ನು ಅಭಯ ಮುದ್ರೆಯನ್ನು ತ್ರಿಶೂಲವನ್ನು ಹಸ್ತಗಳಲ್ಲಿ ಧರಿಸಿದ ಚತುರ್ಮುಖನಾದಂಥ ತ್ರಿಣೇತ್ರನಾದಂಥ ನೀಲವರ್ಣನಾದಂಥ ಅಘೋರಮೂರ್ತಿಯು ದಕ್ಷಿಣದಿಕ್ಕಿನಲ್ಲಿ ನನ್ನನ್ನು ಸಂರಕ್ಷಿಸಲಿ. ಮೊಲ್ಲೆ ಮಲ್ಲಿಗೆ ಹಾಲುಗಳಿಂದಲೂ ಚಂದ್ರನಿಗೂ ಸ್ಫಟಿಕ ಶಂಖಗಳಿಗೂ ಸಮಾನವಾದ ಕಾಂತಿಯುಳ್ಳಂಥಾ ಜ್ಞಾನಮುದ್ರೆಯನ್ನು ಜಪಮಾಲೆಯನ್ನು ಅಭಯ ಮುದ್ರೆಯನ್ನು ವರದ ಮುದ್ರೆಯನ್ನು ಧರಿಸಿದಂಥಾ ತ್ರಿಣೇತ್ರನಾದ ಚತುರ್ಮುಖನಾದ ದೀರ್ಘಬಾಹುವಾದ ಸದ್ಯೋಜಾತಮೂರ್ತಿಯು ಪಶ್ಚಿಮದಿಕ್ಕಿನಲ್ಲಿ ನನ್ನನ್ನು ಸಂರಕ್ಷಿಸಲಿ. ವರದಮುದ್ರೆಯನ್ನು ಜಪಮಾಲೆಯನ್ನು ಅಭಯ ಮುದ್ರೆಯನ್ನು ಟಂಕವನ್ನು ದರಿಸಿದಂಥಾ ಪದ್ಮಕ್ಕೆ ಸಮಾನವಾದ ಕಾಂತಿಯುಳ್ಳಂಥ ಮುಕ್ಕಣ್ಣನಾದಂಥ ವಾಮದೇವ ಮೂರ್ತಿಯು ಉತ್ತರ ದಿಕ್ಕಿನಲ್ಲಿ ನನ್ನನ್ನು ಸಂರಕ್ಷಿಸಲಿ ಜ್ಞಾನಮುದ್ರೆಯನ್ನು ವರದಮುದ್ರೆಯನ್ನು ಅಭಯದ ಮುದ್ರೆಯನ್ನು ಟಂಕವನ್ನು ಅಂಕುಶವನ್ನು ಪಾಶವನ್ನು ಕಪಾಲವನ್ನು ಢಕ್ಕೆಯನ್ನು ಜಪಮಾಲೆಯನ್ನು ತ್ರಿಶೂಲವನ್ನು ಕೈಗಳಲ್ಲಿ ಧರಸಿದ ಶುಭ್ರವರ್ಣನಾದ ಐದು ಮುಖಗಳುಳ್ಳ ಮಹತ್ತಾದ ತೇಜಸ್ಸುಳ್ಳ ಈಶಾನ್ಯಮೂರ್ತಿಯು ಊರ್ಧ್ವದಿಕ್ಕಿನಲ್ಲಿ ನನ್ನನ್ನು ರಕ್ಷಿಸಲಿ. ಚಂದ್ರಶೇಖರನು ಶಿರಸ್ಸನ್ನು ರಕ್ಷಿಸಲಿ, ಫಾಲನೇತ್ರನು ಹಣೆಯನ್ನು ರಕ್ಷಿಸಲಿ, ಭಗನೆಂಬ ಹೆಸರುಳ್ಳ ಸೂರ್ಯನ ನೇತ್ರಗಳನ್ನು ಮಾರಿದವನು ನನ್ನ ನೇತ್ರಗಳನ್ನು ರಕ್ಷಿಸಲಿ. ವಿಶ್ವನಾಥನು ನನ್ನ ಪ್ರಾಣಗಳನ್ನು ರಕ್ಷಿಸಲಿ. ವೇದಗಳಿಂದ ಸ್ತುತಿಸಲ್ಪಟ್ಟ ಕೀರ್ತಿಯುಳ್ಳಂಥ ಶಿವನು ನನ್ನ ಕಿವಿಗಳನ್ನು ರಕ್ಷಿಸಲಿ. ಬ್ರಹ್ಮಕಪಾಲಧಾರಿಯಾದ ಪರಶಿವನು ನನ್ನ ಕಪಾಲಗಳನ್ನು ರಕ್ಷಿಸಲಿ, ಪಂಚಮುಖ ಮೂರ್ತಿಯು ನನ್ನ ಮುಖವನ್ನು ರಕ್ಷಿಸಲಿ. ವೇದಗಳೇ ಜಿಹ್ವೆಯಾಗಿ ಉಳ್ಳಂಥಾವನು ನನ್ನ ನಾಲಿಗೆಯನ್ನು ರಕ್ಷಿಸಲಿ. ನೀಲಕಂಠನು ನನ್ನ ಕಂಠವನ್ನು ರಕ್ಷಿಸಲಿ, ಪಿನಾಕಹಸ್ತನು ನನ್ನ ಹಸ್ತಗಳನ್ನು ರಕ್ಷಿಸಲಿ. ಧರ್ಮಮಯವಾದ ಬಾಹುಗಳನ್ನು ರಕ್ಷಿಸಲಿ. ದಕ್ಷಾಧ್ವರಧ್ವಂಸಿಯು ನನ್ನ ವಕ್ಷಸ್ಥಳವನ್ನು ರಕ್ಷಿಸಲಿ. ಮೇರುವೇ ಧನುಸ್ಸಾದವನು ನನ್ನ ಕುಕ್ಷಿಯನ್ನು ರಕ್ಷಿಸಲಿ. ಮನ್ಮಥನಿಗೂ ಯಮನಿಗೂ ಶತ್ರುವಾದವನು ನಡುವನ್ನು ರಕ್ಷಿಸಲಿ. ವಿಘ್ನೇಶ್ವರನ ಜನಕನು ನನ್ನ ನಾಭಿಯನ್ನು ರಕ್ಷಿಸಲಿ. ಧೂರ್ಜಟಿಯೆಂಬ ಹೆಸರುಳ್ಳ ಈಶ್ವರನು ನನ್ನ ಕಟಿ ಪ್ರದೇಶವನ್ನು ರಕ್ಷಿಸಲಿ. ಜಗತ್ತುಗಳಿಗೆ ಒಡೆಯನಾದವನು ನನ್ನ ಮೊಣಕಾಲುಗಳನ್ನು ರಕ್ಷಿಸಲಿ. ವೃಷಭಧ್ವಜನು ನನ್ನ ಜಂಘೆಗಳನ್ನು ರಕ್ಷಿಸಲಿ ದೇವ

ತೆಗಳಿಂದ ನಮಸ್ಕರಿಸಿಕೊಳ್ಳುವ ಪಾದವುಳ್ಳವನು ನನ್ನ ಪಾದಗಳನ್ನು ರಕ್ಷಿಸಲಿ. ಪ್ರಥಮಯಾಮದಲ್ಲಿ ಮಹೇಶ್ವರನೂ, ದ್ವಿತೀಯ ಯಾಮದಲ್ಲಿ ವಾಮದೇವನೂ ತೃತೀಯ ಯಾಮದಲ್ಲಿ ತ್ರಿಯಂಬಕನೂ, ಚತುರ್ಥ ಯಾಮದಲ್ಲಿ ವೃಷಧ್ವಜನೂ, ನನ್ನನ್ನು ಸಂರಕ್ಷಿಸಲಿ. ರಾತ್ರಿಯ ಪ್ರಥಮಭಾಗದಲ್ಲಿ ಚಂದ್ರಶೇಖರನೂ ಮಧ್ಯ ಭಾಗದಲ್ಲಿ ಗಂಗಾಧರನೂ, ರಾತ್ರಿಯ ಅಂತ್ಯಭಾಗದಲ್ಲಿ ಗೌರೀಪತಿಯೂ ನನ್ನನ್ನು ಸಲಹಲಿ. ಮೃತ್ಯುಂಜಯನಾದವನು ಸರ್ವಕಾಲದಲ್ಲಿಯೂ ನನ್ನನ್ನು ಕಾಪಾಡಲಿ. ಮನೆಯಲ್ಲಿ ಶಂಕರನು ಮನೆಯ ಹೊರಗೆ ಸ್ಥಾಣುವೂ ಕಡೆಯ ಸ್ಥಳದಲ್ಲಿ ಪಶುಪತಿಯೂ ಸಕಲ ಪ್ರದೇಶದಲ್ಲಿಯೂ ಸದಾಶಿವನೂ, ನನ್ನನ್ನು ರಕ್ಷಿಸಲಿ. ಉಳಿದ ಸ್ಥಳದಲ್ಲಿ ಜಗತ್ಪತಿಯು ರಕ್ಷಿಸಲಿ. ನಡೆಯುವಾಗ ಪ್ರಮಥ ಪತಿಯೂ, ಕುಳಿತಿರುವಾಗ ವೇದಾಂತವೇದ್ಯನೂ, ಮಲಗಿರುವಾಗ ನಾಶರಹಿ ತನೂ, ನನ್ನನ್ನು ರಕ್ಷಿಸಲಿ. ಮಾರ್ಗಗಳಲ್ಲಿ ನೀಲಕಂಠನೂ ಬೆಟ್ಟ ಮೊದ ಲಾದ ದುರ್ಗ ಪ್ರದೇಶಂಗಳಲ್ಲಿ ತ್ರಿಪುರಾಂತಕನೂ ನಿಜಸ್ಥಾನವನ್ನು ಬಿಟ್ಟು ಕಾರ್ಯಾರ್ಥವಾಗಿ ಹೊರಟು ಅರಣ್ಯಾದಿಗಳೊಳಗೆ ನಿಂತ ಕಾಲದಲ್ಲಿ ಮಹಾಶಕ್ತಿ ಯನ್ನು ಸಂದರ್ಶಿಸುವವನೂ ನನ್ನನ್ನು ಸಲಹಲಿ. ವಿಜೃಂಭಣೆಯಿಂದಲೂ ಸ್ಫುಟ ಅಟ್ಟಹಾಸದಿಂದಲೂ ಮೇಲಕ್ಕೆ ಹಾರಿಸಲ್ಪಟ್ಟ ಬ್ರಹ್ಮಾಂಡಗಳುಳ್ಳ ವೀರಭದ್ರನು ಭೀಕರವಾದ ಶತ್ರುಸೇನಾ ಭಯದ ದೆಸೆಯಿಂದ ನನ್ನನ್ನು ರಕ್ಷಿಸಲಿ. ಅಸಂಖ್ಯಾ ತವಾದ ರಥ ಗಜಾಶ್ವ ಪದಾತಿಗಳಿಂದ ಕೂಡಿ ಭಯಂಕರವಾದ ಶತ್ರುರಾಯರ ಅನೇಕಾಕ್ಷೋಹಿಣೀ ಬಲಗಳನ್ನು ಮೃಡನು ತನ್ನ ಕುಠಾರದಿಂದ ತುಂಡಿಸಲಿ. ಪ್ರಳಯಕಾಲದ ಅಗ್ನಿಯಂತೆ ಜಾಜ್ವಲ್ಯಮಾನವಾದ ತ್ರಿಪುರಾಂತಕನ ತ್ರಿಶೂ ಲವು ತಸ್ಕರರನ್ನು ಸಂಹರಿಸಲಿ. ಪಿನಾಕವೆಂಬ ಪರಮೇಶ್ವರನ ಬಿಲ್ಲು ಸಿಂಹ ವ್ಯಾಘ್ರ ಭಲ್ಲೂಕಾದಿ ಮೃಗಗಳನ್ನು ಹೆದರಿಸಲಿ. ದುಸ್ವಪ್ನ ದುಶ್ಶಕುನ ದಾರಿದ್ರ್ಯ ಚಿಂತೆ ದುರ್ಭಿಕ್ಷ ದುರ್ವ್ಯಸನ ದುಷ್ಕೀರ್ತಿ ಉತ್ಪಾತಭಯ ವಿಷಭಯ ದುಷ್ಟ ಗ್ರಹಪೀಡೆ ವ್ಯಾಧಿ ಮೊದಲಾದವುಗಳನ್ನು ಜಗತ್ತಿಗೆ ಒಡೆಯನಾದ ಪರ ಮೇಶ್ವರನು ತೊಲಗಿಸಲಿ. ಎಲೈ ಷಡ್ಗುಣೈಶ್ವರ್ಯ ಸಂಪನ್ನನಾದ ಸದಾಶಿವನೇ! ಮುವ್ವತ್ತಾರು ತತ್ವಗಳೇ ದೇಹವಾಗಿ ಉಳ್ಳವನೇ! ಮುವ್ವತ್ತಾರು ತತ್ವಗಳ ದೆಸೆಯಿಂದ ವ್ಯತಿರಿಕ್ತವಾದ ನಿಜಸ್ವರೂಪ ಉಳ್ಳವನೇ! ಸಮಸ್ತ ಲೋಕಗಳಿಗೂ ಉತ್ಪತ್ತಿ ಸ್ಥಿತಿ ಸಂಹಾರಕರ್ತನಾದವನೇ! ಸಕಲ ಜಗತ್ತುಗಳಿಗೂ ಸಾಕ್ಷಿ ಯಾದವನೇ! ಸಮಸ್ತ ವೇದಗಳಿಗೂ ರಹಸ್ಯನಾದವನೇ! ಭಕ್ತರಿಗೆ ಸಕಲ ವರ ಪ್ರದಾಯಕನಾದವನೇ! ಸಮಸ್ತ ದುರಿತಗಳನ್ನೂ ಪರಿಹರಿಸತಕ್ಕವನೇ! ಸಕಲ ಬಾಧಾ ಪರಿಹಾರಕನಾದವನೇ! ಸಕಲ ಭುವನಗಳಿಗೂ ಅಭಯಪ್ರದ ನಾದವನೇ! ಸಕಲ ಲೋಕಗಳಿಗೂ ಸುಖಪ್ರದನಾದವನೇ! ಚಂದ್ರಶೇಖರನೇ!

ನಾಶರಹಿತನೇ! ನಿಜಸ್ವರೂಪವೆ ಆಧಾರವಾಗಿ ಉಳ್ಳವನೇ! ವಿಗತಶ್ರಮನಾದವನೇ! ನಿರಾಮಯನೇ! ನಿಷ್ಪ್ರಪಂಚನೇ! ನಿರ್ಭಯನೇ! ನಿಷ್ಕಳಂಕನೇ! ನಿಶ್ಶಂಕನೇ! ನಿರ್ದ್ವಂದ್ವನೇ! ನಿಸ್ಸಂಗನೇ! ನಿರ್ಗುಣನೇ! ಸಮಾನರಹಿತನಾದವನೇ! ವಿಭವವುಳ್ಳವನೇ! ನಿರಾಧಾರನೇ! ನಿತ್ಯಶುದ್ಧನೇ! ಪರಿಪೂರ್ಣನೇ! ಸಚ್ಚಿದಾನಂದ ಸ್ವರೂಪನೇ! ಪರಮಶಾಂತನೇ! ತೇಜೋರೂಪನೇ! ಸಕಲ ತೇಜಸ್ಸುಗಳಿಗೂ ಅಧಿಪತಿಯಾದವನೇ! ನಿನಗೆ ನಮಸ್ಕಾರ. ರುದ್ರ, ಮಹಾರುದ್ರ, ಭದ್ರಾವತಾರ, ಮಹಾಭೈರವ, ಕಾಲಭೈರವ, ಕಲ್ಪಾಂತಭೈರವ, ಎಂಬ ಹೆಸರುಗಳುಳ್ಳವನೆ! ಕಂಠದಲ್ಲಿ ಕಪಾಲಮಾಲೆಯನ್ನು ಧರಿಸಿದಂಥ ಎಲೈ ಮಹೇಶ್ವರನೇ ನಿನಗೆ ಜಯಜಯ. ಖಟ್ವಾಂಗ, ಖಡ್ಗ, ಚರ್ಮ, ಪರಶು, ಪಾಶಾಂಕುಶ, ಡಮರುಗ, ಶೂಲ, ಚಾಪ, ಬಾಣ, ಗದಾಶಕ್ತಿ, ಭಿಂಡಿವಾಲ, ತೋಮರ, ಮುಸಲ, ಮುದ್ಗರ, ಮುಸುಂಡಿ, ಪಟ್ಟಸ, ಪ್ರಾಸ, ಪರಿಘ, ಶತಘ್ನಿ, ಚಕ್ರ ಮೊದಲಾದ ಆಯುಧಗಳಿಂದ ಭಯಂಕರವಾದ ಸಹಸ್ರ ಕರಗಳುಳ್ಳ ಮಹೇಶ್ವರನೇ! ನಿನಗೆ ಜಯಜಯ. ನಾಗೇಂದ್ರ ಹಾರ, ನಾಗೇಂದ್ರ ವಲಯ, ನಾಗೇಂದ್ರ ಚರ್ಮಧರ, ಮೃತ್ಯುಂಜಯ, ತ್ರಿಯಂಬಕ, ತ್ರಿಪುರಾಂತಕ, ವಿರೂಪಾಕ್ಷ, ವಿಶ್ವೇಶ್ವರ, ವಿಶ್ವರೂಪ, ವಿಶ್ವಮೋಹನ, ವಿಶ್ವತೋಮುಖ, ವೃಷಭವಾಹನ, ಸರ್ವತೋಮುಖ ಎಂಬ ಹೆಸರುಗಳುಳ್ಳ ಮಹೇಶ್ವರನೆ ನಿನಗೆ ಜಯಜಯ. ಭಕ್ತನಾದ ನನ್ನನ್ನು ರಕ್ಷಿಸು ರಕ್ಷಿಸು, ಪ್ರಕಾಶಿಸು ಪ್ರಕಾಶಿಸು, ಮಹಾಮೃತ್ಯು ಅಪಮೃತ್ಯುಗಳನ್ನು ಭಂಜಿಸು ಭಂಜಿಸು, ರೋಗಭಯವನ್ನು ಹಾರಿಸು ಹಾರಿಸು, ವಿಷಭಯ ಸರ್ಪಭಯವನ್ನು ಪರಿಹರಿಸು, ಪರಿಹರಿಸು, ತಸ್ಕರರನ್ನು ಸಂಹರಿಸು ಸಂಹರಿಸು, ನನ್ನ ಶತ್ರುಗಳನ್ನು ಹೊರಡಿಸು ಹೊರಡಿಸು, ತ್ರಿಶೂಲದಿಂದ ಇರಿ ಇರಿ, ಕುಠಾರದಿಂದ ಖಂಡಿಸು ಖಂಡಿಸು, ಖಡ್ಗದಿಂದ ಛೇದಿಸು ಛೇದಿಸು, ಖಟ್ವಾಂಗದಿಂದ ಕೊಲ್ಲು ಕೊಲ್ಲು, ಮುಸಲದಿಂದ ಇರಿ ಇರಿ, ಬಾಣಗಳಿಂದ ಭಯಪಡಿಸು ಭಯಪಡಿಸು, ಭೂತಗಳನ್ನು ಓಡಿಸು ಓಡಿಸು, ಕೂಶ್ಮಾಂಡ ಭೂತಭೇತಾಳ ಮಾರೀಗಣ ಬ್ರಹ್ಮರಾಕ್ಷಸರನ್ನು ಅಂಜಿಸು ಅಂಜಿಸು, ನನಗೆ ಅಭಯವನ್ನು ಕೊಡು ಕೊಡು, ನಿನ್ನನ್ನು ನಂಬಿದಂಥ ನನ್ನನ್ನು ಲಾಲಿಸು ಲಾಲಿಸು, ದುಃಖಾತುರನಾದ ನನ್ನನ್ನು ಸಂತೋಷಪಡಿಸು ಸಂತೋಷಪಡಿಸು, ಹಸಿವಿನಿಂದಲೂ ಬಾಯಾರಿಕೆಯಿಂದಲೂ ಕಂಗೆಟ್ಟಿರುವ ನನ್ನನ್ನು ತೃಪ್ತಿಪಡಿಸು, ನರಕಭಯದಿಂದ ನನ್ನನ್ನು ಉದ್ಧರಿಸು ಉದ್ಧರಿಸು, ಶಿವಕವಚದಿಂದ ನನ್ನನ್ನು ಆಚ್ಛಾದಿಸು ಆಚ್ಛಾದಿಸು, ಎಲೈ ತ್ರಿಯಂಬಕನೇ ನಿನಗೆ ನಮಸ್ಕಾರ ನಮಸ್ಕಾರ ಮತ್ತೂ ನಮಸ್ಕಾರ, ಎಂದು ಆ ಋಷಭ

ಯೋಗೀಶ್ವರನು ಭದ್ರಾಯುವಿಗೆ ಶಿವಕವಚವನ್ನು ಉಪದೇಶಿಸಿ ಬಳಿಕ ಅದರ ಪ್ರಭಾವವನ್ನು ಹೇಳತೊಡಗಿದನು. ಹೇಗೆಂದರೆ,—

ಸದಾ ಈ ಶಿವಕವಚವನ್ನು ಬಿಡದೆ ಪಠಿಸುವ ಪುರುಷನಿಗೆ ಪರಮೇಶ್ವರಾನುಗ್ರಹದಿಂದ ಯಾವ ಭಯವೂ ಇಲ್ಲ. ಕ್ಷೀಣವಾದ ಆಯುಸ್ಸುಳ್ಳವನಾದರೂ ಅಪಮೃತ್ಯುವಿಗೆ ಸಿಕ್ಕಿದವನಾದರೂ ಮಹಾ ವ್ಯಾಧಿಗಳಿಂದ ನೊಂದವನಾದರೂ ಶಿವಕವಚವನ್ನು ಧರಿಸಿದ ಮಾತ್ರದಿಂದಲೇ ದೀರ್ಘಾಯುಷ್ಮಂತನಾಗಿ ಸುಖಪಡುವನು. ಈ ಕವಚವು ಸಮಸ್ತ ದಾರಿದ್ರ್ಯವನ್ನೂ ಪರಿಹರಿಸುವುದು. ಸಮಸ್ತ ದೇವತೆಗಳಿಂದಲೂ ಪೂಜಿಸಲ್ಪಟ್ಟುದು. ಈ ಕವಚವನ್ನು ಧರಿಸಿದ ಪುರುಷನು ಇಹದಲ್ಲಿ ಮಹಾ ಪಾತಕೋಪ ಪಾತಕಗಳಿಂದ ಬಿಡಲ್ಪಟ್ಟವನಾಗಿ ದೇಹಾಂತ್ಯದಲ್ಲಿ ಮುಕ್ತಿಯನ್ನು ಪಡೆಯುವನು. ಎಲೈ ಭದ್ರಾಯುವೇ ! ನನ್ನಿಂದ ಉಪದೇಶಿಸಲ್ಪಟ್ಟ ಈ ಶಿವಕವಚವನ್ನು ಭಕ್ತಿಯಿಂದ ನೀನು ಪಠಿಸಿದವನಾದರೆ ನಿನಗೆ ಶೀಘ್ರದಲ್ಲಿಯೇ ಶ್ರೇಯಸ್ಸುಂಟಾಗುವದೆಂದು ಆ ಋಷಭಯೋಗೀಶ್ವರನು ನಿರೂಪಿಸಿ ಆ ಭದ್ರಾಯುವಿಗೆ ಮಹಾ ಧ್ವನಿಯುಳ್ಳ ಒಂದು ಶಂಖವನ್ನು ಕೊಟ್ಟು, ಮರಳಿ ಶಿವ ಮಂತ್ರದಿಂದ ಅಭಿಮಂತ್ರಿತವಾದ ಭಸ್ಮದಿಂದ ಆತನ ಶರೀರವನ್ನು ತಡವಿದನು. ಅನಂತರದಲ್ಲಿ ಭಸ್ಮಪ್ರಭಾವದಿಂದ ಆ ಭದ್ರಾಯುವು ಹನ್ನೆರಡುಸಾವಿರ ಆನೆಗಳ ಬಲವುಳ್ಳವನಾಗಿ ಐಶ್ವರ್ಯವನ್ನು ಧೈರ್ಯವನ್ನು ಅತ್ಯಂತ ಬುದ್ಧಿಯನ್ನು ಪಡೆದು ಶರತ್ಕಾಲದ ಸೂರ್ಯನೋಪಾದಿಯಲ್ಲಿ ಪ್ರಕಾಶಮಾನನಾಗಿ ಕೈಮುಗಿದು ತನ್ನ ಮುಂದೆ ನಿಂತಿರಲು, ಋಷಭಯೋಗೀಶ್ವರನು ಅವನನ್ನು ಕುರಿತು ಮತ್ತೆ ಇಂತೆಂದನು.

ಎಲೈ ಭದ್ರಾಯುವೇ ! ಈ ಖಡ್ಗವು ನನ್ನ ತಪೋಮಹಿಮೆಯಿಂದ ಸಂಪಾದಿಸಲ್ಪಟ್ಟಿದ್ದು; ಯುದ್ಧರಂಗದಲ್ಲಿ ಅದನ್ನು ನೋಡಿದ ಮಾತ್ರದಿಂದಲೇ ಮೃತ್ಯುವಾದರು ಭಯಪಡುವನು, ಈ ಶಂಖಧ್ವನಿಯನ್ನು ಕೇಳಿದರೆ ಶತ್ರುಗಳು ತಕ್ಷಣವೇ ತಮ್ಮತಮ್ಮ ಆಯುಧಗಳನ್ನು ಬಿಟ್ಟು ಮೂರ್ಛಿತರಾಗಿ ನೆಲಕ್ಕೆ ಬೀಳುವರು, ಈ ಖಡ್ಗ ಶಂಖಗಳು ಶತ್ರುಪಕ್ಷದವರ ಪ್ರತಾಪಾಪಹಾರಕವಾಗಿ ಸ್ವಪಕ್ಷದವರಿಗೆ ಶೌರ್ಯ ತೇಜಸ್ಸು ಬಲಗಳನ್ನು ಹೆಚ್ಚಿಸುವಂಥವು. ಈ ಖಡ್ಗ ಶಂಖಗಳ ಪ್ರಭಾವದಿಂದಲೂ ಶಿವಕವಚದಿಂದಲೂ ಹನ್ನೆರಡು ಸಾವಿರ ಆನೆಗಳ ಬಲದಿಂದಲೂ ಭಸ್ಮಧಾರಣ ಸಾಮರ್ಥ್ಯದಿಂದಲೂ ನೀನು ಶತ್ರು ನಿಗ್ರಹವನ್ನು ಮಾಡಿ ನಿಮ್ಮ ತಂದೆಯ ಸಿಂಹಾಸನವನ್ನು ಸಂಪಾದಿಸಿ ಸಮಸ್ತ ಭೂಮಂಡಲವನ್ನು ಪರಿಪಾಲಿಸು ಎಂದು ಅನುಗ್ರಹಿಸಿ, ಆ ಋಷಭಯೋಗಿಯು ಭದ್ರಾಯುವಿನಿಂದಲೂ ಅವನ ತಾಯಿಯಿಂದಲೂ ಪೂಜಿಸಲ್ಪಟ್ಟವನಾಗಿ, ಸ್ವೇಚ್ಛೆಯಿಂದ ತನ್ನ ತಪೋವನಕ್ಕೆ ತೆರಳಿದನೆಂದು ಸೂತಪುರಾಣೀಕನು ಶೌನಕಾದಿ ಋಷಿಗಳಿಗೆ ನಿರೂಪಿಸಿದನೆಂಬಲ್ಲಿಗೆ.

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮವೀರ
ನರಪತಿ ಬಿರುದೆಂತೆಂಬರ ಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ
ಗಂಡಭೇರುಂಡಾದಿ ನಾನಾ ಬಿರುದಾಂಕಿತ ಯಾದವಕುಲತಿಲಕ ಆತ್ರೇಯ
ಸಗೋತ್ರ ಅಶ್ವಲಾಯನಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರ
ರಾಜಒಡೆಯರ ಪೌತ್ರ ನರಸರಾಜಒಡೆಯರ ಪುತ್ರರಾದ ಶ್ರೀಇಮ್ಮಡಿ
ಚಾಮರಾಜ ಒಡೆಯರವರು ಕರ್ಣಾಟಕ ಭಾಷೆಯಲ್ಲಿ ವಿರಚಿಸಿದ
ಸ್ಕಾಂದಪುರಾಣೋಕ್ತವಾದ ಬ್ರಹ್ಮೋತ್ತರಖಂಡದಲ್ಲಿ,
ಋಷಭಯೋಗೀಶ್ವರನು ಭದ್ರಾಯುವಿಗೆ ಮಾಡಿದ
ಶಿವಕವಚೋಪದೇಶವೆಂಬಿಲ್ಲಿಗೆ,
೧೨ನೆಯ ಅಧ್ಯಾಯಕ್ಕೆ ಮಂಗಳವುಸ್ತು.



## ಭದ್ರಾಯುವಿನ ವಿವಾಹ.

### ಹದಿಮೂರನೆಯ ಅಧ್ಯಾಯ.

ಅನಂತರದಲ್ಲಿ ಸೂತಪುರಾಣಿಕನು ಶೌನಕಾದಿ ಮಹಾ ಮುನಿಗಳನ್ನು ಕುರಿತು ಇಂತೆಂದನು.

ಎಲೈ ಋಷಿಗಳಿರಾ! ಕೇಳಿ! ಈ ಪ್ರಕಾರದಲ್ಲಿ ಭದ್ರಾಯುವು ವೃಷಭ ಯೋಗೀಶ್ವರನಿಂದ ಉಪದೇಶಿಸಲ್ಪಟ್ಟ ಶಿವಕವಚಾದಿಗಳನ್ನು ಧರಿಸಿ ನಿಶ್ಚಲವಾಗಿ ಸುಖದಲ್ಲಿದ್ದನು. ಅತ್ತ ಆವನ ತಂದೆಯಾದ ವಜ್ರಬಾಹುರಾಯನು ತನ್ನ ದಶಾರ್ಣವ ದೇಶವನ್ನು ಪರಿಪಾಲಿಸುತ್ತಿರುವಾಗ ಯುದ್ಧದಲ್ಲಿ ನಿಪುಣನಾದ ಶೌರ್ಯ ಸಂಪನ್ನನಾದ ಮಗಧ ದೇಶಾಧೀಶ್ವರನಾದ ಹೇಮರಥನೆಂಬ ರಾಯನು ಆ ವಜ್ರಬಾಹುವಿನಲ್ಲಿ ಶತ್ರುತ್ವವನ್ನು ತಾಳಿದಂಥವನಾಗಿ ಮಹತ್ತಾದ ಚತುರಂಗ ಬಲದೊಡನೆ ಕೂಡಿ ಆ ದಶಾರ್ಣವ ದೇಶವನ್ನು ಮುತ್ತಿದನು. ಆಗ ಹೇಮ ರಥನ ಸೈನ್ಯದ ಭಟರು ವಜ್ರಬಾಹುರಾಯನ ಧನವನ್ನೂ ವಸ್ತ್ರಗಳನ್ನೂ ಅಪಹರಿಸಿದರು. ಕೆಲವರು ಗೃಹಗಳನ್ನು ಕೆಡವಿದರು. ಕೆಲವರು ವಸ್ತ್ರಾ ಭರಣಗಳನ್ನು ಸೂರೆಗೊಂಡರು. ಕೆಲವರು ರಾಜಸ್ತ್ರೀಯರನ್ನು ಅಪಹರಿಸಿದರು. ಕೆಲವರು ಹಸುಗಳನ್ನು ಹೊಡೆದುಕೊಂಡು ಹೋದರು. ಕೆಲವರು ದಾಸಿಯ ರನ್ನು ಸೆರೆ ಹಿಡಿದರು. ಮತ್ತೆ ಕೆಲವರು ಪೈರುಪಚ್ಚೆಗಳನ್ನೂ ತೋಟ ತುಡಿಕೆ ಗಳನ್ನು ಲೂಟಿಮಾಡಿದರು. ಹೀಗೆ ಆ ಹೇಮರಥನು ದಶಾರ್ಣವ ದೇಶವನ್ನು ತನ್ನ ಭಟಸಮೂಹದಿಂದ ಧ್ವಂಸ ಮಾಡಿಸಿದವನಾಗಿ, ಆ ವಜ್ರಬಾಹುವಿನ ಪಟ್ಟಣವನ್ನು ಪ್ರವೇಶಿಸಲು, ವಜ್ರಬಾಹುವು ಹೇಮರಥನ ವಿಜೃಂಭಣೆಯನ್ನು

ಕಂಡು ಕೋಪಾಕ್ರಾಂತನಾಗಿ ಕವಚವನ್ನು ತೊಟ್ಟು ಖಡ್ಗಖೇಟಕ ಧನುರ್ಬಾಣ ಗಳನ್ನು ಧರಿಸಿ ದಿವ್ಯರಥವನ್ನೇರಿ ಪಟ್ಟಣದಿಂದ ಹೊರಟು ಮಂತ್ರಿಗಳೊಂದುಕಡೆ ದಳಪತಿಯೊಂದುಕಡೆ ತಾನೊಂದುಕಡೆ ಗುಂಪಾಗಿ ನಿಂತು ಮಗಧದೇಶಾಧೀಶ್ವರ ನಾದ ಹೇಮರಥನ ಸೈನ್ಯದೊಡನೆ ಯುದ್ಧಮಾಡಿ ಬಹುಮಂದಿ ಭಟರನ್ನು ಕೊಂದರು. ಆಗ ಹೇಮರಥನ ಭಟರೆಲ್ಲರೂ ಧೈರ್ಯವನ್ನು ತಂದುಕೊಂಡು ಒಗ್ಗಟ್ಟಾಗಿ ಬಂದು ಬಾಣಗಳ ಮಳೆಯನ್ನು ಸುರಿಸುತ್ತಿರುವ ಆ ವಜ್ರಬಾಹು ವನ್ನು ಸುತ್ತಿಕೊಂಡು ರಣರಂಗದಲ್ಲಿ ಆತನ ಸಮಸ್ತ ಬಲವನ್ನೂ ಹೊಡೆದು ಕೆಡವಿದವರಾಗಿ, ಆತನ ರಥವನ್ನು ಬಾಣಗಳಿಂದ ಚೂರ್ಣಮಾಡಿದರು. ಬಿಲ್ಲನ್ನು ಛೇದಿಸಿದರು. ಸಾರಥಿಯನ್ನು ಸಂಹರಿಸಿದರು. ಖಡ್ಗವನ್ನು ಖಂಡಿಸಿದರು. ಬಳಿಕ ರಥ ಸಾರಥಿ ಧನುರ್ಬಾಣ ಖಡ್ಗಗಳು ಹೋಗಿ ಒಂಟಿಯಾಗಿ ಸಿಕ್ಕಿದ ವಜ್ರಬಾಹುವನ್ನು ಕೈಸೆರೆ ಹಿಡಿದು ರಥದಮೇಲೆ ಹಾಕಿ ಬಂಧಿಸಿ ಮಂತ್ರಿಗಳನ್ನು ಸೇನೆಯನ್ನು ನಿಗ್ರಹಿಸಿ ಪಟ್ಟಣವನ್ನು ಹೊಕ್ಕು ಆನೆ, ಕುದುರೆ, ರಥ, ಒಂಟೆ, ಹಸುಗಳು, ಧನ, ಧಾನ್ಯಗಳನ್ನೂ, ಸೌಂದರ್ಯವುಳ್ಳ ಸ್ತ್ರೀಯರನ್ನು, ರಾಜಪತ್ನಿ ಯರನ್ನು, ಬೊಕ್ಕಸ ಭಂಡಾರವನ್ನು ಅಪಹರಿಸಿಕೊಂಡು ತಮ್ಮ ದೇಶಕ್ಕೆ ಹೋಗುತ್ತಿದ್ದರು. ಬಲವಂತನಾದ ಭದ್ರಾಯುವು ಶತ್ರುಗಳಿಗೆ ಸೆರೆ ಸಿಕ್ಕಿದಂಥಾ ತಂದೆ ತಾಯಿಗಳ ವೃತ್ತಾಂತವನ್ನು ನಷ್ಟವಾದ ರಾಜ್ಯದ ಸಮಾಚಾರವನ್ನೂ ಕೇಳಿ ಸಿಂಹದೋಪಾದಿಯಲ್ಲಿ ಕೆರಳಿ, ಋಷಭಯೋಗೀಶ್ವರನು ಕೊಟ್ಟಿದ್ದ ಶಂಖ ಖಡ್ಗಗಳನ್ನು ತೆಗದುಕೊಂಡು ಪದ್ಮಾಕರನ ಕುಮಾರನಾದ ಸುನಯನನನ್ನು ಕರೆದುಕೊಂಡು ಕುದುರೆಯನ್ನೇರಿ ತನ್ನ ದೇಶಕ್ಕೆ ಬಂದು ಶತ್ರುಗಳ ಕೈಗೆ ಕೈಸೆರೆ ಯಾಗಿ ಸಿಕ್ಕಿದ ಪುತ್ರ ಮಿತ್ರ ಕಳತ್ರಾದಿಗಳುಳ್ಳವರಾಗಿ ಧನ ಧಾನ್ಯ ವಸ್ತುವಾಹ ನಾದಿಗಳನ್ನು ಹೋಗಲಾಡಿಸಿಕೊಂಡು ದುಃಖದಿಂದ ಅರಚುತ್ತ ಓಡಿ ಹೋಗು ತ್ತಿರುವ ಪ್ರಜೆಗಳನ್ನು ಕಂಡು ಕೋಪಾಕ್ರಾಂತನಾಗಿ ಆ ಹೇಮರಥನ ಸಮಸ್ತ ಬಲವನ್ನು ಅಡ್ಡಗಟ್ಟಿ ನಿಲ್ಲಿಸಿ ಆ ಬಲದಮೇಲೆ ಆಕರ್ಣಾಂತವಾಗಿ ಸೆಳೆಯ ಲ್ಪಟ್ಟ ಹೆದೆಯುಳ್ಳ ಬಿಲ್ಲುಗಳಿಂದ ಬಾಣಗಳ ಮಳೆಯನ್ನು ಸುರಿಸಿ ನೋಯಿ ಸಲು, ಪರಾಕ್ರಮಸಂಪನ್ನರಾದ ಆ ಹೇಮರಥನ ಭಟರೆಲ್ಲರೂ ಭದ್ರಾಯುವಿನ ಬಾಣಪ್ರಹಾರದಿಂದ ಬಹಳವಾಗಿ ನೊಂದು ಕುಂದಿಹೋಗಿ ಕೋಪಾವೇಶದಿಂದ ಆತನಿಗೆ ಎದುರಾಗಿ ನಿಂತು ತಮ್ಮತಮ್ಮ ಶಸ್ತ್ರಾಸ್ತ್ರಗಳಿಂದ ಸರ್ವಶಕ್ತಿಯನ್ನೂ ಪ್ರಯೋಗಿಸಿ ಯುದ್ಧಮಾಡಿದರು. ಹಾಗಾದರೂ ಭದ್ರಾಯುವು ಶಿವಕವಚ ಪ್ರಭಾವದಿಂದ ಶತ್ರುಗಳ ಬಾಣವರ್ಷವನ್ನು ಸಡ್ಡೆಮಾಡದೆ ಮದಿಸಿದ ಆನೆ ಯಂತೆ ಆ ಶತ್ರುಸೈನ್ಯವನ್ನು ಪ್ರವೇಶಿಸಿ, ಆನೆ ಕುದುರೆ ರಥ ಕಾಲ್ಬಲಗಳನ್ನು ನೋಯಿಸಿ, ಒಬ್ಬ ರಥಿಕನನ್ನು ಸಂಹರಿಸಿ, ಅವನ ರಥದಮೇಲೆ ಹತ್ತಿ ಕುಳಿತು

ಆನೆಗಳ ಸಮೂಹಕ್ಕೆ ನುಗ್ಗುವ ಸಿಂಹದೋಪಾದಿಯಲ್ಲಿ ಶತ್ರು ಸೈನ್ಯವನ್ನು ಹೊಕ್ಕು ಸಂಚರಿಸುತ್ತಿರಲು, ಹೇಮರಥನ ದಳಪತಿಗಳು ತಮ್ಮತಮ್ಮ ಬಲ ಸಮೇತರಾಗಿ ಒಟ್ಟುಗೂಡಿ ಏಕಕಾಲದಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಮುತ್ತಿ ಕೊಂಡು ಬರುತ್ತಿರಲು‡ ಆ ಭದ್ರಾಯುವು ಯಮನ ನಾಲಿಗೆಯೋಪಾದಿಯಲ್ಲಿ ಭಯಂಕರವಾದ ತನ್ನ ಖಡ್ಗವನ್ನು ಝಳಿಪಿಸುತ್ತಾ ತನ್ನ ಪರಾಕ್ರಮವನ್ನು ತೋರಿಸುವವನ ಹಾಗೆ ಎದುರಾಗಿ ನಡೆದು ಬರುತ್ತಿರಲು ಶತ್ರುಗಳೆಲ್ಲರು ಆ ಖಡ್ಗ ದರ್ಶನ ಮಾತ್ರದಿಂದಲೇ ಅಗ್ನಿಯಲ್ಲಿ ಬಿದ್ದ ಪತಂಗದ ಹುಳುಗಳೋಪಾದಿ ಯಲ್ಲಿ ಆ ಕ್ಷಣದಲ್ಲಿಯೇ ಪ್ರಾಣಗಳನ್ನು ಬಿಟ್ಟರು.

ಅನಂತರದಲ್ಲಿ ಭದ್ರಾಯುವು ಸಕಲ ದಿಕ್ಕುಗಳನ್ನು ತುಂಬಿಸುವವನೋ ಪಾದಿಯಲ್ಲಿ ಶಂಖಧ್ವನಿಯನ್ನು ಮಾಡಲು; ಆ ಧ್ವನಿಯನ್ನು ಕೇಳಿ ಉಳಿದ ಭಟ ರೆಲ್ಲರೂ ಇದ್ದ ಪ್ರದೇಶದಲ್ಲಿಯೇ ಮೂರ್ಛಿತರಾಗಿ ಭೂಮಿಗೆ ಬಿದ್ದರು.

ಭದ್ರಾಯುವು ಸರ್ವ ಶಾಸ್ತ್ರಜ್ಞನಾದಕಾರಣ ನಿರಾಯುಧರಾಗಿ ನಿಶ್ಚೈತ ನ್ಯದಿಂದ ಬಿದ್ದಿರುವ ಶತ್ರು ಭಟರನ್ನು ಕೊಲ್ಲಬಾರದೆಂದು ಮನ್ನಿಸಿದವನಾಗಿ, ಶತ್ರುಗಳಿಗೆ ಸೆರೆಯಾಗಿ ಸಿಕ್ಕಿದ್ದ ತನ್ನ ತಂದೆಯಾದ ವಜ್ರಬಾಹು ರಾಯನನ್ನು ಆತನ ಪಟ್ಟದ ಸ್ತ್ರೀಯರನ್ನು ಪ್ರಧಾನಿಗಳನ್ನೂ ಅವರ ಸ್ತ್ರೀಯರನ್ನು ಪ್ರಜೆ ಗಳನ್ನು ಬಾಲಕರನ್ನು ಕನ್ಯೆಯರನ್ನು ದಾಸಿಯರನ್ನು ಹಸುಗಳನ್ನು ಬಿಡಿಸಿ ಕೊಂಡವನಾಗಿ ಆ ಶತ್ರುಗಳ ಸ್ತ್ರೀಯರನ್ನು ವಾಯುವೇಗ ಮನೋವೇಗವುಳ್ಳ ಕುದುರೆಗಳನ್ನು ಪರ್ವತ ಸಮಾನವಾದ ಆನೆಗಳನ್ನು ಸುವರ್ಣ ರಥಗಳನ್ನು ಬಹಳ ದ್ರವ್ಯವನ್ನು ಮಗಧದೇಶಾಧೀಶ್ವರನಾದ ಹೇಮರಥನನ್ನೂ ಅವನ ಮಂತ್ರಿಗಳನ್ನೂ ಸೆರೆಯಾಗಿ ಹಿಡಿದು ತನ್ನ ತಂದೆಯಾದ ವಜ್ರಬಾಹುವಿನ ಪಟ್ಟಣಕ್ಕೆ ಸಾಗಿಸಿದನು. ಬಳಿಕ ಹೇಮರಥನ ಭಟರಿಂದ ಪೆಟ್ಟು ತಿಂದು ದಿಕ್ಕು ದಿಕ್ಕಿಗೆ ಓಡಿಹೋಗಿದ್ದ ವಜ್ರಬಾಹುವಿನ ಮಂತ್ರಿಗಳು ದಳಪತಿಗಳು ಮೊದಲಾದ ವರೆಲ್ಲರು ಆ ಭದ್ರಾಯುವಿನ ಪರಾಕ್ರಮನ್ನು ಕೇಳಿ, ಆಶ್ಚರ್ಯಪಟ್ಟು ಆತನು ಕಾರಣಪುರುಷನೆಂದು ನಿಶ್ಚೈಸಿ, ತಾವು ಭಾಗ್ಯವಂತರು ಈಗ ತಮ್ಮ ತಪಃಫಲವು ಸಿದ್ಧಿಸಿತು ಕಾರ್ಯಸಂಪನ್ನನಾದ ಈತನಿಂದ ನಾವೆಲ್ಲರೂ ಬದುಕಿದೆವು. ಈತನು ಯೋಗಪುರುಷನೋ ದೇವತೆಯೋ ತಿಳಿಯದು ಮನುಷ್ಯಮಾತ್ರನಾದರೆ ಇಂಥ ಮಹಾಕಾರ್ಯವನ್ನು ಎಂದಿಗೂ ಮಾಡಲಾರನು. ಯಥಾರ್ಥವಾಗಿ ಈತನ ತಾಯಿ ಪಾರ್ವತೀದೇವಿಯೋ ಸರಿ; ಈತನ ತಂದೆ ಪರಮೇಶ್ವರನೇ ಆಗಿರ ಬೇಕು. ಆದುದರಿಂದಲೇ ಇವನೊಬ್ಬನೇ ಹೇಮರಥನ ಒಂಭತ್ತು ಅಕ್ಷೋಹಿಣಿ ಬಲವನ್ನು ಸಂಹರಿಸಿದನೆಂದು ಸಂತೋಷದಿಂದ ಪರಸ್ಪರ ಹೇಳಿಕೊಳ್ಳುತ್ತಾ ಭದ್ರಾಯುವಿನ ಸಮೀಪಕ್ಕೆ ಬಂದು ಎಲೈ ಮಹಾಪುರುಷನೇ! ನೀನು ಯಾರು

ಎಂದು ಕೇಳಿದರು. ಆ ಭದ್ರಾಯುಪು ತನ್ನ ವೃತ್ತಾಂತವನ್ನು ಅವರಿಗೆ ಹೇಳದೇ ವಜ್ರಬಾಹುವಿನ ಸಾನ್ನಿಧ್ಯಕ್ಕೆ ನಡೆದು ಬಂದು ಆನಂದ ಬಾಷ್ಪಗಳಿಂದ ಕೂಡಿದ ಕಣ್ಣುಗಳುಳ್ಳವನಾಗಿ ಆಶ್ಚರ್ಯದಿಂದಲೂ ಸಂತೋಷದಿಂದಲೂ ಕೂಡಿಕೊಂಡಿದ್ದ ತಂದೆಗೆ ನಮಸ್ಕಾರ ಮಾಡಿದನು. ಆಗ ಆತನು ಭದ್ರಾಯುವನ್ನು ಆಲಿಂಗಿಸಿ ಕೊಂಡು ಸಮೀಪದಲ್ಲಿ ಕುಳ್ಳಿರಿಸಿ ವೈಶ್ಯನನ್ನು ಸವರಿ ಪ್ರೀತಿಯಿಂದ ಇಂತೆಂದನು,

ಎಲೈ ಮಹಾಪುರುಷನೇ! ನೀನು ಯಾರು? ಮನುಷ್ಯನೋ ದೇವತೆಯೋ ಗಂಧರ್ವನೋ ಹೇಳು ನಿನ್ನ ತಾಯಿ ತಂದೆಗಳಾರು? ನಿನ್ನ ಹೆಸರೇನು? ಇಲ್ಲಿಗೆ ಹೇಗೆ ಬಂದೆ? ಶತ್ರುಗಳ ಕೈಗೆ ಸಿಕ್ಕಿ ಮೃತರೋಪಾದಿಯಲ್ಲಿ ನಿಸ್ತೇಜಸ್ಕರಾಗಿದ್ದ ನಮ್ಮನ್ನು ಪುತ್ರ ಮಿತ್ರ ಕಳತ್ರಾದಿಗಳ ಸಹಿತ ಬದುಕಿಸಿದೆ, ಇಂಥ ಶೌರ್ಯ ಧೈರ್ಯ ಪ್ರತಾಪಗಳು ನಿನಗೆ ಏತರಿಂದ ಪ್ರಾಪ್ತವಾದವು? ಸಾವಿರ ಜನ್ಮಗಳಾದರೂ ನಾನು ಪುತ್ರಮಿತ್ರಕಳತ್ರ ಸಹಿತನಾಗಿ ನೀನು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡಲಾರೆ ಈ ಮಕ್ಕಳನ್ನು ಈ ಸ್ತ್ರೀಯರನ್ನು ಈ ರಾಜ್ಯವನ್ನು ಈ ಬೊಕ್ಕಸ ಭಂಡಾರಗಳನ್ನೂ ಬಿಟ್ಟು ನನ್ನ ಮನಸ್ಸು ನಿನ್ನಲ್ಲಿಯೇ ಲೀನವಾಗಿದೆ. ಹೀಗಾಗಲು ಕಾರಣವೇನು? ನಮಗೆ ಪ್ರಾಣದಾನ ಮಾಡಿದ ಮಹಾತ್ಮನಾದ ನೀನೆ ಇದೆಲ್ಲವನ್ನು ವಿಸ್ತರಿಸಿ ಹೇಳಬೇಕೆಂದು ವಜ್ರಬಾಹುವು ಕೇಳಲು; ಭದ್ರಾಯುವು ಇಂತೆಂದು.

ಎಲೈ ರಾಯನೇ! ಕೇಳು ಸುನಯನೆಂಬ ಈ ವೈಶ್ಯ ಕುಮಾರನು ನನ ಸ್ನೇಹಿತನು. ನಾನು ತಾಯಿ ಸಮೇತವಾಗಿ ಈತನ ಮನೆಯಲ್ಲಿಯೇ ಇದ್ದೇನೆ. ನನ್ನ ಹೆಸರು ಭದ್ರಾಯುವು ನನ್ನ ವೃತ್ತಾಂತವನ್ನು ತಿರಿಗಿ ನಿನ್ನ ಬಳಿಗೆ ಬಂದು ವಿಜ್ಞಾಪನೆ ಮಾಡುವೆನು. ಈಗ ನೀನು ಪುತ್ರ ಮಿತ್ರ ಕಳತ್ರ ಸಮೇತನಾಗಿ ನಿನ್ನ ಪಟ್ಟಣಕ್ಕೆ ಹೋಗಿ ಸುಖದಿಂದ ರಾಜ್ಯ ಪರಿಪಾಲನೆಯನ್ನು ಮಾಡುತ್ತಿರು ನಾನು ತಿರುಗಿ ನಿನ್ನೆಡೆಗೆ ಬರುವವರೆಗೂ ಕೈ ಸೆರೆಯಾಗಿ ಸಿಕ್ಕಿದ ಶತ್ರುಗಳನ್ನು ಬಿಡಬೇಡ. ಈಗ ನಾನು ನನ್ನ ಮನೆಗೆ ಹೋಗುತ್ತೇನೆ ಎಂದು ಹೇಳಿ, ಭದ್ರಾಯುವು ಮನೆಗೆ ಬಂದು ನಡೆದ ವೃತ್ತಾಂತವನ್ನು ತಾಯಿಗೆ ಹೇಳಲು, ತಾಯಿ ಸಂತೋಷಪಟ್ಟು ಆನಂದ ಬಾಷ್ಪಗಳಿಂದ ಪೂರ್ಣವಾದ ನೇತ್ರಗಳುಳ್ಳವಳಾಗಿ ಆ ಕುಮಾರನನ್ನು ತಬ್ಬಿ ಮುದ್ದಾಡಿದಳು. ಇದನ್ನು ಕಂಡು ಪದ್ಮಾಕರನೆಂಬ ವೈಶ್ಯನಾಯಕನು ಸಂತೋಷಭರಿತನಾದನು. ಅತ್ತ ವಜ್ರಬಾಹು ಧೈರ್ಯದಿಂದ ತನ್ನ ಪಟ್ಟಣವನ್ನು ಪ್ರವೇಶಿಸಿ ಪುತ್ರ ಮಿತ್ರ ಕಳತ್ರ ಮಂತ್ರಿ ಪುರೋಹಿತ ಸಹಿತನಾಗಿ ಸಂತೋಷಭರಿತನಾಗಿದ್ದನು. ಆ ರಾತ್ರಿಯಲ್ಲಿ ಋಷಭಯೋಗೀಶ್ವರನು ಸೀಮಂತಿನಿಯ ಕಾಂತನಾದ ನಿಷಧದೇಶಾಧೀಶ್ವರನಾದ ಚಂದ್ರಾಂಗದನ ಮನೆಗೆ ಬಂದು ಅವನಿಗೆ ಭದ್ರಾಯುವಿನ ಕುಲಗೋತ್ರಗಳನ್ನು ಅಮಾನುಷವಾದ

ಪರಾಕ್ರಮನನ್ನು ಅವನು ಇರತಕ್ಕ ಸ್ಥಳವನ್ನು ಹೇಳಿ ನಿನ್ನ ಮಗಳಾದ ಕೀರ್ತಿ ಮಾಲಿನಿಯನ್ನು ಭದ್ರಾಯುವಿಗೆ ಕೊಟ್ಟು ಮದುವೆ ಮಾಡಿಸು ಎಂದು ನಿರೂಪಿಸಿ, ಸ್ವೇಚ್ಛೆಯಿಂದ ಲೋಕ ಸಂಚಾರಕ್ಕೆ ಹೊರಟುಹೋದನು.

ಬಳಿಕ ಶಿವಯೋಗಿಯ ಅಪ್ಪಣೆಯಂತೆ ಚಂದ್ರಾಂಗದ ಮಹಾರಾಯನು ಭದ್ರಾಯುವನ್ನು ತನ್ನ ಮಂತ್ರಿಗಳ ಮೂಲಕ ಕರೆಸಿಕೊಂಡು, ಜ್ಯೋತಿಷ್ಕರು ಗೊತ್ತುಮಾಡಿದ ಶುಭಮುಹೂರ್ತದಲ್ಲಿ ತನ್ನ ಮಗಳಾದ ಕೀರ್ತಿಮಾಲಿನಿಯನ್ನು ಕೊಟ್ಟು ವಿವಾಹಮಾಡಿದನು. ಆಗ ಭದ್ರಾಯುವು ಕೀರ್ತಿಮಾಲಿನಿಯೊಡನೆ ಸಿಂಹಾಸನದಲ್ಲಿ ಕುಳಿತು ರೋಹಿಣಿ ಸಮೇತನಾದ ಚಂದ್ರನಂತೆ ಪ್ರಕಾಶಿಸು ತ್ತಿದ್ದನು. ಕೆಲವು ದಿನಗಳಾದಮೇಲೆ ಚಂದ್ರಾಂಗದನು ವಜ್ರಬಾಹುವನ್ನು ತನ್ನ ಪಟ್ಟಣಕ್ಕೆ ಬರಮಾಡಿಕೊಂಡು, ಆತನನ್ನು ಎದುರುಗೊಂಡು ರಾಜ ಮರ್ಯಾದೆಯೊಡನೆ ಬಹು ವೈಭವದಿಂದ ತನ್ನ ಅರಮನೆಗೆ ಕರೆದುಕೊಂಡು ಬಂದನು. ಆಗ ಮದುವಣಿಗನಾಗಿ ಮಾವನ ಮನೆಯಲ್ಲಿದ್ದ ಭದ್ರಾಯುವು ಪತ್ನಿ ಸಮೇತನಾಗಿ ವಜ್ರಬಾಹುರಾಯನಿಗೆ ನಮಸ್ಕಾರ ಮಾಡಿ ಕೈಮುಗಿದು ನಿಂತುಕೊಂಡನು. ಕೂಡಲೆ ವಜ್ರಬಾಹುವು ಅವನನ್ನು ಆಲಿಂಗಿಸಿಕೊಂಡು ಸತ್ಕರಿಸಿ, ಚಂದ್ರಾಂಗದ ರಾಯನನ್ನು ಕುರಿತು ಇಂತೆಂದನು.

ಎಲೈ ಚಂದ್ರಾಂಗದ ಮಹಾರಾಯನೇ! ನಿನ್ನ ಅಳಿಯನಾಗಿರುವ ಈ ಬಾಲಕನು ಅತ್ಯಂತ ಪರಾಕ್ರಮ ಸಂಪನ್ನನು, ಉದಾರಿ, ತ್ಯಾಗಿಯಾದವನು, ಇವನು ನಮಗೂ ನಮ್ಮ ರಾಜ್ಯದ ಪ್ರಜೆಗಳಿಗೂ ಪ್ರಾಣದಾನಮಾಡಿ ಕಾಪಾಡಿ ದವನು. ಇಷ್ಟಾದರೂ ಇದುವರೆಗೂ ಇವನ ಕುಲಗೋತ್ರಗಳೊಂದೂ ನನಗೆ ತಿಳಿಯದು. ಇವನು ಯಾರು. ಎಲ್ಲಿಯವನು ಎಲ್ಲಿಂದ ಇಲ್ಲಿಗೆ ಬಂದನು. ಇದೆಲ್ಲವನ್ನೂ ನನಗೆ ವಿವರಿಸಿ ಹೇಳಬೇಕೆಂದು ಬೇಡಿಕೊಂಡನು. ಬಳಿಕ ಚಂದ್ರಾಂಗದರಾಯನು ವಜ್ರಬಾಹು ಮಹಾರಾಯನನ್ನು ತನ್ನ ಏಕಾಂತ ಮಂದಿರಕ್ಕೆ ಕರೆದುಕೊಂಡು ಹೋಗಿ ದಿವ್ಯವಾದ ಪೀಠದಲ್ಲಿ ಕುಳ್ಳಿರಿಸಿ, ಎಲೈ ರಾಜೇಂದ್ರನೇ! ನೀನು ಯಾರ ವಿಷಯವನ್ನು ವಿಸ್ತರಿಸಿ ಹೇಳಬೇಕೆಂದು ನನ್ನನ್ನು ಕೇಳಿದೆಯೋ, ಆತನೇ! ನಿನ್ನ ವಂಶತಿಲಕನಾದ ಸುಕುಮಾರನು. ಇವನ ತಾಯಿ ಕುಷ್ಠವ್ರಣ ಪೀಡಿತಳಾಗಿ ನರಳುತ್ತಿದ್ದ ಕಾಲದಲ್ಲಿ ಇವನು ಅವಳ ಗರ್ಭದಲ್ಲಿ ಜನಿಸಿದನು. ಬಳಿಕ ಇಬ್ಬರೂ ಕುಷ್ಠರೋಗದಿಂದ ನರಳುತ್ತಿರುವು ದನ್ನು ನೋಡಿ ನೀನು ಅಸಹ್ಯಪಟ್ಟು ಅವರಿಬ್ಬರನ್ನು ತೂರೆದುಬಿಡಬೇಕೆಂದು ಯೋಚಿಸಿ ನಿನ್ನ ಮಂತ್ರಿಗಳ ಮೂಲಕ ತಾಯನ್ನೂ ಮಗುವನ್ನೂ ಸಹ ಗೊಂಡಾ ರಣ್ಯಕ್ಕೆ ಹೊರಡಿಸಿಬಿಟ್ಟೆ. ಇದು ನಿನಗೆ ಜ್ಞಾಪಕವಿರಬಹುದು. ಬಳಿಕ ಅನಾಥ ಳಾಗಿ ದಿಕ್ಕಿಲ್ಲದೆ ಅರಣ್ಯದ ಪಾಲಾದ ರಾಣಿಯು ಆ ಮಗುವನ್ನು ಎತ್ತಿಕೊಂಡು

ನರಳುತ್ತ ಹೊರಳುತ್ತ ಭಯಪಟ್ಟವಳಾಗಿ ದೈವಯೋಗದಿಂದ ಸಿಕ್ಕಿದ ಕಾಡು ದಾರಿಯಲ್ಲಿ ನಡೆದುಕೊಂಡು ಬಂದು ಮೆಲ್ಲಮೆಲ್ಲನೆ ಒಂದು ಪಟ್ಟಣವನ್ನು ಸೇರಿ ಅಲ್ಲಿ ಧನಿಕನಾಗಿ ವೈಶ್ಯಕುಲತಿಲಕನಾಗಿ ಧರ್ಮಿಷ್ಠನಾಗಿದ್ದ ಪದ್ಮಾಕರನೆಂಬ ವೈಶ್ಯನ ಪೋಷಣೆಯಲ್ಲಿದ್ದುಕೊಂಡು ಈ ಮಗನನ್ನು ಸಲಹಿದಳು. ಆವನೂ ಪ್ರಬಲವಾದ ರೋಗಕ್ಕೆ ತುತ್ತಾಗಿ ಆ ಮಗುವು ಸತ್ತು ಹೋಯಿತು. ಆಗ ಪ್ರಲಾಪಿಸುತ್ತಿದ್ದ ತಾಯಿಯ ರೋದನವನ್ನು ನೋಡಲಾರದೆ ದಯಾರ್ದ್ರನಾದ ಋಷಭಯೋಗಿಯು ಅಲ್ಲಿಗೆ ಬಂದು ತನ್ನ ಮಂತ್ರ ಶಕ್ತಿಯಿಂದ ಆ ಮಗುವನ್ನು ಬದುಕಿಸಿ, ತಾಯಿಗೂ ಮಗನಿಗೂ ಕುಷ್ಠರೋಗವನ್ನು ಪರಿಹರಿಸಿ ಅವರನ್ನು ವಜ್ರಕಾಯರಾಗುವಂತೆ ಮಾಡಿ ಆ ಮಗುವಿಗೆ ಶಿವಕವಚವನ್ನು ಉಪದೇಶಿಸಿ, ಅದನ್ನು ತಪ್ಪದೆ ಅನುಷ್ಠಾನ ಮಾಡುವಂತೆ ಹೇಳಿ, ಅವನಿಗೆ ಹನ್ನೆರಡು ಸಾವಿರ ಆನೆಗಳ ಬಲವನ್ನು ಅನುಗ್ರಹಿಸಿ, ಒಂದು ಖಡ್ಗವನ್ನು ಒಂದು ಶಂಖವನ್ನೂ ಕೊಟ್ಟು ಅಂತರ್ಧಾನನಾದನು.

ಋಷಭಯೋಗಿಯ ಮಂತ್ರೋಪದೇಶ ಬಲಂದಿಂದ ಈ ವಜ್ರಬಾಹುವು ಅತುಳ ಪರಾಕ್ರಮ ಸಂಪನ್ನನಾಗಿ ತೇಜಸ್ವಿಯಾಗಿ ಪ್ರತಾಪವಂತನಾಗಿದ್ದ ಕಾರಣ ನಿನ್ನ ಶತ್ರುವಾದ ಹೇಮರಥ ಮಹಾರಾಜನ ಒಂಭತ್ತು ಅಕ್ಷೋಹಿಣಿ ಸೇನೆಯನ್ನು ತಾನೊಬ್ಬನೇ ಏಕಕಾಲದಲ್ಲಿ ಸಂಹರಿಸಿ ನಿನ್ನನ್ನು ನಿನ್ನ ಪ್ರಜೆಗಳನ್ನು ಕಾಪಾಡಿದನು. ಋಷಭಯೋಗಿಯ ನಿರೂಪವನ್ನು ಅನುಸರಿಸಿ ನಾನು ನಿನ್ನ ಮಗನನ್ನು ಇಲ್ಲಿಗೆ ಕರೆಸಿ ನನ್ನ ಮಗಳನ್ನು ಕೊಟ್ಟು ಮದುವೆಮಾಡಿದೆನು. ಆದಕಾರಣ ನಿನ್ನ ಮಗನಾದ ಈ ಭದ್ರಾಯುವನ್ನೂ ಇವನ ತಾಯಿಯನ್ನು ನಿನ್ನೊಡನೆ ಪಟ್ಟಣಕ್ಕೆ ಕರೆದುಕೊಂಡು ಹೋಗಿ ಸಂತೋಷಯುಕ್ತನಾಗಿ ಸುಖದಿಂದ ರಾಜ್ಯವನ್ನಾಳುತ್ತಿರು. ಈ ಮಗನ ದೆಸೆಯಿಂದ ಮುಂದೆಮುಂದೆ ಇನ್ನೂ ಅಧಿಕವಾದ ಶ್ರೇಯಸ್ಸಾಗುವುದೆಂದು ಹೇಳಲು, ಆತನು ಆನಂದಭರಿತನಾದನು. ಬಳಿಕ ಚಂದ್ರಾಂಗದನು ಸರ್ವಾಭರಣ ಭೂಷಿತೆಯಾದ ತನ್ನ ಮಗಳನ್ನು ಅಂತಃಪುರದಿಂದ ಕರೆಸಿ ಅವನಿಗೆ ತೋರಿಸಿದನು.

ಬಳಿಕ ವಜ್ರಬಾಹುವು ಶಿವಶಿವ! ದೈವವಿಲಾಸವನ್ನು ಮೀರುವವರಾರು ? ಯಾರುಯಾರು ಯಾವಯಾವ ಕಾಲಕ್ಕೆ ಎಂಥೆಂಥ ಗತಿಯನ್ನು ಪಡೆಯುವರೊ! ತಿಳಿಯದು. ನಾನು ಅಜ್ಞಾನಭರಿತನಾಗಿ ಮಾಡಬಾರದ ಕೆಲಸವನ್ನು ಮಾಡಿ ನಿಂದಿತನಾದೆ ಎಂದು ತನ್ನನ್ನು ತಾನೇ ನಿಂದಿಸಿಕೊಂಡು ಪಶ್ಚಾತ್ತಾಪಪಟ್ಟು ತನ್ನ ಹಿರಿಯ ಹೆಂಡತಿಯಾದ ಸುಮತಿಯನ್ನೂ ಅವಳ ಮಗನಾದ ಭದ್ರಾಯುವನ್ನು ಕಂಡು ಸಂತೋಷಭರಿತನಾಗಿ ಅವರನ್ನು ಆಲಿಂಗಿಸಿಕೊಂಡು ರೋಮಾಂಚಕಂಚುಕಿತ ಶರೀರನಾಗಿ ಸತಿಸುತರನ್ನು ಮನ್ನಿಸಿದನು. ಬಳಿಕ ಚಂದ್ರಾಂಗದನ

ಸದ್ಬೋಧೆಯಿಂದಲೂ ದೈವಯೋಗದಿಂದ ದೊರೆತ ಶಿವಕವಚ ಪ್ರಭಾವದಿಂದಲೂ ಭದ್ರಾಯುವಿಗೆ ವಿವಾಹವೂ, ವಜ್ರಬಾಹುವಿಗೆ ಪತ್ನೀ ಪುತ್ರರಲಾಭವೂ, ಶತ್ರುಗಳಿಗೆ ಶರಣಾಗತರಾಗುವ ಸ್ಥಿತಿಯೂ ಉಂಟಾದುದನ್ನು ಕಂಡು, ಆ ಚಂದ್ರಾಂಗದನು ಆನಂದ ಸಾಗರದಲ್ಲಿ ಮುಳುಗಿ ಸರ್ವ ಶಕ್ತನಾದ ಪರಮೇಶ್ವರನ ಮಹಿಮೆಯನ್ನೂ ಋಷಭಯೋಗಿಯ ಪ್ರಭಾವವನ್ನೂ ಕೊಂಡಾಡುತ್ತ ಬೀಗರಿಗೂ ಅಳಿಯನಿಗೂ ಮಾಡಬೇಕಾದ ಊಟ ಉಪಚಾರ ಉಡುಗೊರೆ ಸಹಿತವಾಗಿ ರಾಜಮರ್ಯಾದೆಯಿಂದ ಅವರನ್ನು ತಮ್ಮ ಪಟ್ಟಣಕ್ಕೆ ಹೊರಡುವದಕ್ಕೆಂದು ಅಣಿಮಾಡಿ ಕಳುಹಿಸಿಕೊಟ್ಟನು.

ಅನಂತರ ವಜ್ರಬಾಹುವು ಸಂತೋಷಭರಿತರಾಗಿ ಮನಸ್ಸಿನಲ್ಲಿ ಮಹಾಮಹಿಮನಾದ ಪರಶಿವನನ್ನು ಧ್ಯಾನಿಸುತ್ತ ಮಂತ್ರಿಪರಿವಾರದೊಡಗೂಡಿ ತನ್ನ ಹೆಂಡತಿಯಾದ ಸುಮತಿಯನ್ನೂ ಮಗನಾದ ಭದ್ರಾಯುವನ್ನು ಸೊಸೆಯಾದ ಕೀರ್ತಿಮಾಲಿನಿಯನ್ನು ಸಂಗಡಕರೆದುಕೊಂಡು ಉತ್ಸಾಹಯುಕ್ತನಾಗಿ ಪ್ರಯಾಣ ಮಾಡಿ ತನ್ನ ಪಟ್ಟಣಕ್ಕೆ ಬಂದು ಸೇರಿದನು. ಆಗ ಆ ಪಟ್ಟಣದ ಸಮಸ್ತ ಪ್ರಜೆಗಳು, ಆನಂದಭರಿತರಾಗಿ ರಾಯನನ್ನು ಅವನಹೆಂಡತಿಯನ್ನು ಕಂಡು ಕೊಂಡಾಡಿ ಭದ್ರಾಯುವನ್ನು ಹೊಗಳಿ ಸತ್ಕರಿಸಿ ಕೀರ್ತಿಮಾಲಿನಿಯನ್ನು ನೋಡಿ ಸಂತೋಷಪಟ್ಟು ಸುಖದಿಂದ ಬಾಳುವಂತೆ ಹರಸಿ ತಂತಮ್ಮ ಮನೆಗಳಿಗೆ ಹೋಗಿ ಸಂತೋಷಪಡುತ್ತಿದ್ದರು. ಬಳಿಕ ವಜ್ರಬಾಹುಮಹಾರಾಯನು ಪ್ರೀತಿಪಾತ್ರೆಯಾದ ತನ್ನ ಹೆಂಡತಿ ಸುಮತಿಯಲ್ಲಿ ಬಹುಕಾಲ ಬಗೆಬಗೆಯಾದ ಸುಖಸಂತೋಷಗಳನ್ನು ಅನುಭವಿಸಿ ತೃಪ್ತನಾಗಿ ಕಾಲಗತಿಯಿಂದ ಪರಲೋಕವನ್ನು ಸೇರಿದನು. ಅನಂತರ ಭದ್ರಾಯುವು ಪಟ್ಟವನ್ನೇರಿ ಧರ್ಮದಿಂದ ಬಹುಕಾಲ ಸುಖದಿಂದ ಸಕಲ ಪ್ರಜೆಗಳನ್ನೂ ಪರಿಪಾಲಿಸುತ್ತ ಸೆರೆಯಲ್ಲಿದ್ದ ಮಗಧದೇಶದ ದೊರೆಯಾದ ಹೇಮರಥನಲ್ಲಿ ದಯೆಯುಳ್ಳವನಾಗಿ ಅವನ ಬಂಧನವನ್ನು ಬಿಡಿಸಿ, ಬ್ರಹ್ಮರ್ಷಿಗಳ ಸಮೂಹದಲ್ಲಿ ಅವನನ್ನು ಸ್ನೇಹಿತನನ್ನಾಗಿ ಮಾಡಿಕೊಂಡು ಸತ್ಕರಿಸಿ, ಸುಖದಿಂದ ಅವನ ರಾಜ್ಯಕ್ಕೆ ಕಳುಹಿಸಿದವನಾಗಿ ಕೀರ್ತಿಯನ್ನು ಸಂಪಾದಿಸಿದನು. ಹೀಗೆ ಭದ್ರಾಯುವು ಪೂರ್ವ ಜನ್ಮದಲ್ಲಿ ಋಷಭಯೋಗೀಶ್ವರನನ್ನು ಪೂಜಿಸಿ ಅವನಿಂದ ಶಿವಮಂತ್ರೋಪದೇಶವನ್ನು ಪಡೆದಕಾರಣ ಈ ಜನ್ಮದಲ್ಲಿ ಸಕಲ ವಿಧವಾದ ವಿಪತ್ತುಗಳಿಂದ ಬಿಡಲ್ಪಟ್ಟವನಾಗಿ ಈ ಕೀರ್ತಿಮಾಲಿನಿಯನ್ನು ಮದುವೆಯಾಗಿ ನಾನಾ ಭೋಗಗಳನ್ನು ಅನುಭವಿಸುತ್ತಿರುವನೆಂದು ಸೂತಪುರಾಣಿಕನು ಶೌನಕಾದಿ ಮಹಾಮುನಿಗಳಿಗೆ ಹೇಳುತ್ತಿದ್ದನು.

ಅದು ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರ ನರಪತಿ ಬಿರುದೆಂತೆಂಬರಗಂಡ ಶಂಖಚಕ್ರ ಮಕರ ಮತ್ಸ್ಯ

ಶರಭ ಸಾಳ್ವ ಗಂಡಭೇರುಂಡಾದಿ ನಾನಾ ಬಿರುದಾಂಕಿತ ಯಾದವ ಕುಲತಿಲಕ ಆತ್ರೇಯಸಗೋತ್ರ ಅಶ್ವಲಾಯನ ಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರ ರಾಜಒಡೆಯರ ಪೌತ್ರ ನರಸಭೂಪಾಲಕರ ಪುತ್ರ ಶ್ರೀ ಇಮ್ಮಡಿ ಚಾಮರಾಜ ಒಡೆಯರು ಕರ್ಣಾಟಕ ಭಾಷೆಯಲ್ಲಿ ವಿರಚಿಸಿದ ಸ್ಕಂದಪುರಾಣೋಕ್ತ ಬ್ರಹ್ಮೋತ್ತರಖಂಡದಲ್ಲಿ ಋಷಭಯೋಗೀಶ್ವರನ ಅನುಗ್ರಹದಿಂದ ಭದ್ರಾಯುವಿಗೆ ವಿವಾಹ ಮತ್ತು ರಾಜ್ಯಾಧಿಪತ್ಯವಾದುದೆಂಬಿಲ್ಲಿಗೆ,

೧೩ನೆಯ ಅಧ್ಯಾಯಕ್ಕೆ ಮಂಗಳಮಸ್ತು.

---

# ಭದ್ರಾಯುವಿಗೆ ಪರಮೇಶ್ವರಾನುಗ್ರಹವಾದುದು.

## ಹದಿನಾಲ್ಕನೆಯ ಅಧ್ಯಾಯ.

ಬಳಿಕ ಸೂತಪುರಾಣಿಕನು ಶೌನಕಾದಿ ಮಹಾಮುನಿಗಳನ್ನು ಕುರಿತು ಎಲೈ ಋಷಿಗಳಿರಾ! ಕೇಳಿ ಇದುವರೆಗೂ ನಾನು ಹೇಳಿದ ಬ್ರಹ್ಮೋತ್ತರ ಖಂಡದಲ್ಲಿ ಅತ್ಯಂತ ಮುಖ್ಯವಾದ ಮತ್ತು ಬಹು ಪ್ರಶಸ್ತವಾದ ಈ ಕಥೆಯನ್ನು ನಿಮಗೋಸ್ಕರ ಹೇಳುವೆನು ಸಾವಧಾನಚಿತ್ತರಾಗಿ ಕೇಳಿ ಶಿವಾನುಗ್ರಹ ಕಥಾಮೃತವನ್ನು ಪಾನಮಾಡಿ ತೃಪ್ತರಾಗಬಹುದೆಂದು ಎಚ್ಚರಿಸಿ ಮುಂದಿನ ಕಥೆಯನ್ನು ವಿಸ್ತರಿಸಿ ಹೇಳತೊಡಗಿದನು.

ಎಲೈ ಋಷಿಗಳಿರಾ! ಹೀಗೆ ಮದುವೆಯಾದ ಕೀರ್ತಿಮಾಲಿನಿಯನ್ನು ತನ್ನ ಪಟ್ಟಣಕ್ಕೆ ಕರೆದುಕೊಂಡು ಬಂದು ರಾಜ್ಯಲೋಲನಾಗಿ ಹೆಂಡತಿಯೊಡನೆ ಸುಖದಿಂದ ರಾಜ್ಯವಾಳುತ್ತಿದ್ದ ಭದ್ರಾಯುವು ಒಂದಾನೊಂದು ವಸಂತಕಾಲದಲ್ಲಿ ವನವಿಹಾರಕ್ಕಾಗಿ ಹೆಂಡತಿಯೊಡನೆ ಹೊರಟು ಚಿಗುರೆಲೆಗಳಿಂದ ರಮ್ಯವಾದ ವೃಕ್ಷಗಳೂ, ಹೂಗೊಂಚಲಿಂದ ಶೋಭಿಸುತ್ತಿರುವ ಲತೆಗಳೂ, ಫಲಭರಿತವಾದ ತರುಗಳೂ, ಫಲಪುಷ್ಪಗಳ ಮಾಧುರ್ಯವನ್ನು ಹೀರಿ ಝೇಂಕರಿಸುತ್ತಿರುವ ಭ್ರಮರಗಳೂ, ಮಾಕಂದ ರಸವಿಡಿದು ಹಾಡುತ್ತಿರುವ ಕೋಗಿಲೆಗಳೂ, ಹಚ್ಚಗೆ ಹಸರಾಗಿ ಬೆಳೆದು ಹೊಳೆಯುತ್ತಿರುವ ತೃಣಗುಲ್ಮ ಲತೆಗಳೂ ಉಳ್ಳ ಕ್ರೀಡಾವನವನ್ನು ಹೊಕ್ಕು ಇಷ್ಟಾನುಸಾರವಾಗಿ ವಿಹರಿಸುತ್ತಿದ್ದನು. ಹೀಗೆ ಅವರಿಬ್ಬರೂ ಆನಂದ ಭರಿತರಾಗಿರುವ ಸಮಯದಲ್ಲಿ, ಹಠಾತ್ತಾಗಿ ತಮ್ಮನ್ನು ಕೊಂದು ತಿನ್ನುವುದಕ್ಕಾಗಿ ಅಟ್ಟಿಸಿಕೊಂಡು ಬರುತ್ತಿರುವ ಹೆಬ್ಬುಲಿಯನ್ನು ಕಂಡು ಹೆದರಿ ಕಂಗೆಟ್ಟವರಾದ ಬ್ರಾಹ್ಮಣ ದಂಪತಿಗಳು ಆತುರದಿಂದ ಓಡಿಬರುತ್ತಾ ಅಯ್ಯೋ! ಅಪ್ಪಾ! ಈ ಹಾಳು ಹುಲಿಯು ನಮ್ಮ ಪ್ರಾಣವನ್ನು ತೆಗೆಯದೆ ಬಿಡದು ಇದರ ಬಾಧೆ

ಯನ್ನು ನಾವು ತಾಳಲಾರೆವು. ಹೇಗಾದರೂ ಮಾಡಿ ನಮ್ಮನ್ನು ಈ ಹುಲಿಯ ಭಯದಿಂದ ಬಿಡುಗಡೆ ಮಾಡಿ ನಮ್ಮಿಬ್ಬರ ಪ್ರಾಣಗಳನ್ನು ಸಂರಕ್ಷಿಸು ಎಂದು ಬೇಡಿಕೊಳ್ಳುತ್ತಿದ್ದರು.

ಆ ಆರ್ತಧ್ವನಿಯನ್ನು ಕೇಳಿ ಭದ್ರಾಯುವು ಮನಸ್ಸಿನಲ್ಲಿ ಮರುಗಿ ಧನುರ್ಬಾಣಗಳನ್ನು ಸಿದ್ಧಮಾಡಿಕೊಂಡು ಹುಲಿಯನ್ನು ಹೊಡೆದು ನೋಯಿಸುತ್ತಿದ್ದರೂ, ಮಳೆಗೆ ಹೆದರದೆ ಮುಂದಕ್ಕೆ ನುಗ್ಗುವ ಮದ್ದಾನೆಯಂತೆ ಆ ಹೆಬ್ಬುಲಿಯು ಓಡಿ ಬಂದು ಹಿಂದುಗಡೆಯಲ್ಲಿ ಬರುತ್ತಿದ್ದ ಬ್ರಾಹ್ಮಣ ಸ್ತ್ರೀಯನ್ನು ಎತ್ತಿಕೊಂಡು ಓಡಿಹೋಯಿತು. ಅದನ್ನು ಕಂಡು ಭದ್ರಾಯುವು ಆಹಾ! ಎಂಥ ಅಪಚಾರವಾಯಿತು. ಲೋಕದಲ್ಲಿ ಜನಗಳು ಮಾಡುವ ಅನ್ನದಾನ, ಗೃಹದಾನ, ಭೂದಾನ, ಹಿರಣ್ಯದಾನ, ಗೋದಾನ, ರಥದಾನ, ಗಜದಾನ, ತುರಗದಾನ, ಕನ್ಯಾದಾನ, ವಸ್ತ್ರದಾನ ಮೊದಲಾದ ಸಮಸ್ತ ದಾನಗಳಿಗಿಂತಲೂ, ಪ್ರಾಣದಾನವೇ ಅತ್ಯಂತ ಶ್ರೇಷ್ಠವಾದದ್ದು. ಇಂಥ ದಾನವನ್ನು ನಾನು ಮಾಡಬೇಕೆಂದು ಪ್ರಯತ್ನಪಟ್ಟು ವಿಫಲನಾದೆನಲ್ಲ! ನನ್ನ ಅದೃಷ್ಟವನ್ನು ಏನೆಂದು ಹೇಳಲಿ! ಎಂದು ಖಿನ್ನನಾಗಿ ತನ್ನಷ್ಟಕ್ಕೆ ತಾನೆ ನೊಂದುಕೊಳ್ಳುತ್ತಿರಲು, ಆ ಬ್ರಾಹ್ಮಣನು ಹೆಂಡತಿಯ ಮೇಲಣ ಪ್ರೇಮದಿಂದ ಬಹಳವಾಗಿ ಪ್ರಲಾಪಿಸುತ್ತ ಹಾ! ಪ್ರಿಯೆ! ಪತಿವ್ರತಾಶಿರೋಮಣಿ, ಸುಂದರಿ ಸುಗುಣವಂತೆ ಸೌಭಾಗ್ಯಸಂಪನ್ನೆ ಯಾವಾಗಲೂ ಎಡಬಿಡದೆ ಇದ್ದ ನೀನು ಈಗ ನನ್ನನ್ನು ಒಂಟಿಯಾಗಿ ಬಿಟ್ಟು ಎಲ್ಲಿಗೆ ಹೋದೆ? ನನ್ನ ಪ್ರಾಣಗಳಿಗಿಂತಲೂ ಅಧಿಕಳಾದ ನಿನ್ನನ್ನು ಬಿಟ್ಟು ನಾನೊಬ್ಬನೆ ಹೇಗೆ ಜೀವಿಸಲಿ! ಇನ್ನು ಮುಂದೆ ನನಗೆ ಗತಿಯಾರು ಎಂದು ಬಗೆಬಗೆಯಾಗಿ ಹಂಬಲಿಸಿಕೊಂಡು ಪ್ರಲಾಪಿಸುತ್ತ ಭದ್ರಾಯುವಿನ ಕಡೆಗೆ ತಿರುಗಿ ಅವನನ್ನು ದುರದುರನೆ ನೋಡುತ್ತ ಇಂತೆಂದನು.

ಎಲೈ ರಾಜೇಂದ್ರನೇ! ನಿನ್ನ ಖಡ್ಗವನ್ನು ಶಂಖವನ್ನು ವ್ಯರ್ಥವಾಗಿ ಏತಕ್ಕೆ ಹೊತ್ತುಕೊಂಡಿದ್ದೀಯೋ! ಅದು ನಿನಗೆ ಬಾರವಲ್ಲವೆ! ಬಗೆಬಗೆಯ ಮಂತ್ರಾಸ್ತ್ರಪ್ರಯೋಗವನ್ನು ಬಲ್ಲ ಸಾಮರ್ಥ್ಯವು ಎಲ್ಲಿ ಹೋಯಿತು. ಹನ್ನೆರಡು ಸಾವಿರ ಆನೆಗಳ ಬಲವು ಅಸಾಧ್ಯವಾದ ನಿನ್ನ ಶೌರ್ಯಪ್ರತಾಪಗಳೂ ಏನಾದುವು, ಅರಣ್ಯದಲ್ಲಿ ಅಲೆದಾಡುವ ಒಂದು ಹುಲಿಯನ್ನು ಕೊಲ್ಲಲಾರದ ಮೇಲೆ ನೀನೆಂಥ ಕ್ಷತ್ರಿಯನು. ಪ್ರಾಣ ಹಿಂಸಕರು ಇತರರನು ಕೊಲ್ಲುತ್ತಿದ್ದರೆ ಅದನ್ನು ಕಂಡು ಕೊಲೆಯನ್ನು ಬಿಡಿಸಿ ಕಾಪಾಡುವುದೆ ಕ್ಷತ್ರಿಯರ ಧರ್ಮ. ಧರ್ಮ ಸ್ವರೂಪರಾದ ರಾಜರುಗಳು ತಮ್ಮನ್ನು ಮರೆಹೊಕ್ಕವರಿಗೆ ಪ್ರಾಣಗಳನ್ನಾದರೂ, ಧನಗಳನ್ನಾದರೂ, ಕೊಟ್ಟು ಶರಣಾಗತರನ್ನು ರಕ್ಷಿಸುವರು. ಹಾಗೆ ಜನರನ್ನು ಸಂರಕ್ಷಣೆ

ಮಾಡಲಾರದ ರಾಜನು ರಾಜ್ಯವಾಳುವುದಕ್ಕಿಂತ ಸನ್ಯಾಸಿಯಾಗಿ ಬಿಕ್ಷವೆತ್ತುವುದು ಮೇಲು. ಧನವಂತರಾಗಿ ಗೃಹಸ್ಥಾಶ್ರಮದಲ್ಲಿದ್ದುಕೊಂಡು ನಿತ್ಯಕರ್ಮ ನಿರತರಾಗಿ ದಾನಧರ್ಮಗಳನ್ನು ಮಾಡುತ್ತ ದೊರೆಯೆನಿಸಿಕೊಂಡು ಮರೆಹೊಕ್ಕವರನ್ನು ಕಾಪಾಡದಿದ್ದಮೇಲೆ ಅಂಥ ರಾಜನು ಬೆಂಕಿಯಲ್ಲಿ ಬಿದ್ದಾದರೂ, ವಿಷವನ್ನು ಕುಡಿದಾದರೂ, ನದಿಯಲ್ಲಿ ಬಿದ್ದಾದರೂ, ಪ್ರಾಣವನ್ನು ಕಳೆದುಕೊಳ್ಳುವುದು ಮೇಲು, ಅಲ್ಲದೆ ಬದುಕಿರುವುದು ಭೂಮಿಗೆ ಭಾರವೆಂದು ಪ್ರಲಾಪಿಸುತ್ತ ಬಗೆಬಗೆಯಾಗಿ ನಿಂದಿಸತೊಡಗಿದನು.

ಆ ವಾಕ್ಯಗಳನ್ನು ಕೇಳಿ ಭದ್ರಾಯುವು ಶಿವಶಿವಾ! ಕುಲಧರ್ಮವಾದ ಪ್ರಾಣರಕ್ಷಣೆಯನ್ನು ಮಾಡದೆ ಬಿಟ್ಟುದರಿಂದ ನನಗೆ ಮಹಾ ಪಾಪಸಂಘಟನೆಯಾಯಿತು. ಇದರಿಂದ ನನ್ನ ರಾಜ್ಯವೂ ಕೀರ್ತಿಯೂ ಉಳಿಯಲಾರದು. ಆದಕಾರಣ ಈಗ ನನ್ನ ಕೀರ್ತಿಪ್ರತಾಪಗಳಿಗೆ ಹಾನಿಯುಂಟಾಯಿತು. ಇನ್ನು ಈ ಪ್ರಾಣವನ್ನು ಇಡುವುದರಿಂದ ಫಲವೇನು? ಲೋಕದಲ್ಲಿ ಅದೃಷ್ಟಾನುಸಾರವಾಗಿ ಜೀವಿಗಳಿಗೆ ದೊರೆಯುವ ಪುತ್ರ ಮಿತ್ರ ಕಳತ್ರ ಧನಧಾನ್ಯಾದಿಗಳು ಕೆಲವುಕಾಲ ತನಗೆ ಸುಖಪ್ರದಗಳಾಗಿದ್ದು ಅದೃಷ್ಟ ತೀರಿದ ಬಳಿಕ ಅವುಗಳೇ ದುಃಖಪ್ರದಗಳಾಗಿ ಕೊನೆಗೆ ನಾಶವನ್ನೈದುವವು. ದುರ್ದೈವದಿಂದ ಮೋಸಮಾಡಲ್ಪಟ್ಟ ನನಗೆ ಕ್ಷತ್ರಿಯರ ಕುಲಧರ್ಮವಾದ ಪ್ರಾಣರಕ್ಷಣೆಯು ದೊರೆಯದೆ ಹೋದುದರಿಂದ ಅನಿತ್ಯವಾದ ಈ ಸಂಸಾರದಲ್ಲಿ ಅಪಕೀರ್ತಿಯನ್ನು ಹೊತ್ತುಕೊಂಡು ಬದುಕುವುದಕ್ಕಿಂತಲೂ ಸಾಯುವುದೆ ಉತ್ತಮ. ಆದಕಾರಣ ನನ್ನ ಪ್ರಾಣಗಳನ್ನಾದರೂ ಕೊಟ್ಟು ತನ್ನ ಹೆಂಡತಿಯನ್ನು ಕಳೆದುಕೊಂಡು ಪ್ರಲಾಪಿಸುತ್ತಿರುವ ಈ ಬ್ರಾಹ್ಮಣನ ದುಃಖವನ್ನು ಪರಿಹರಿಸಿ ಕಾಪಾಡಬೇಕು. ಹಾಗಿಲ್ಲದಿದ್ದರೆ ನಾನು ಕ್ಷತ್ರಿಯನಾಗಿ ಹುಟ್ಟಿ ಪ್ರಯೋಜನವೇನು? ಎಂದು ಯೋಚಿಸಿ ಆ ಬ್ರಾಹ್ಮಣನ ಬಳಿಗೆ ಹೋಗಿ ಅವನ ಪಾದಗಳಿಗೆ ನಮಸ್ಕರಿಸಿ, ಎಲೈ ದಯಾಪರನಾದ ವಿಪ್ರೋತ್ತಮನೇ! ನನ್ನಲ್ಲಿ ಕೃಪೆಮಾಡು. ಅದೃಷ್ಟವಶದಿಂದ ಪರಾಕ್ರಮ ರಹಿತನಾಗಿ ಕ್ಷತ್ರಿಯಾಧಮನಾಗಿರುವ ನನ್ನನ್ನು ಕರುಣದಿಂದ ಕಾಪಾಡು. ದುಃಖವನ್ನು ಬಿಟ್ಟು ಸಂತುಷ್ಟನಾಗು. ನೀನು ನನ್ನಲ್ಲಿ ಪ್ರಸನ್ನನಾದರೆ ನನ್ನ ರಾಜ್ಯವನ್ನಾದರೂ ನನ್ನ ಪ್ರಾಣವನ್ನಾದರೂ, ಕೊನೆಗೆ ನನ್ನ ಪ್ರಾಣಕಾಂತೆಯನ್ನಾದರೂ ನಿನ್ನ ವಶಮಾಡುವೆನು. ಹೆಚ್ಚಾಗಿ ಹೇಳಿ ಫಲವೇನು? ನನ್ನ ಸರ್ವಸ್ವವೂ ನಿನ್ನದಾಗಿರುವಲ್ಲಿ ನೀನು ಕೋರಿದ ವಸ್ತುವನ್ನು ಕೇಳಿದರೆ ನಾನು ಕೊಡಲು ಸಿದ್ಧನಾಗಿರುವೆನು ಎಂದು ಕೈಮುಗಿದು ಕಾಲ್ಗೆರಗಿ ಬೇಡಿಕೊಂಡನು. ಆಗ ಆ ಬ್ರಾಹ್ಮಣನು ಪ್ರಸನ್ನ ಮುಖನಾಗಿ ಆ ಭದ್ರಾಯುವನ್ನು ಕುರಿತು ಇಂತೆಂದನು.

ಎಲೈ ರಾಜೇಂದ್ರನೇ! ನೀನು ಹೇಳಿದುದೆಲ್ಲ ನಿಜ ಆದರೆ ಲೋಕದಲ್ಲಿ ಯಾರಿಗೆ ಯಾವುದು ಪ್ರಯೋಜಕಕರವಾಗಿರುವುದೋ ಆ ವಸ್ತು ದೊರೆತರೆ ಅವರವರಿಗೆ ಸಂತೋಷವಾಗುವುದುಂಟು ಹಾಗಲ್ಲದೆ ಕುರುಡನಿಗೆ ಕನ್ನಡಿಯಿಂದಲೂ, ತಿರುಕನಿಗೆ ಭೂಮಿಯಿಂದಲೂ, ಮೂಗನಿಗೆ ಪುಸ್ತಕದಿಂದಲೂ, ಏನು ಪ್ರಯೋಜನ! ಹಾಗೆ ಸಂಸಾರರಹಿತನಾದ ನನಗೆ ಧನದಿಂದ ಪ್ರಯೋಜನವೇನು? ಇದುವರೆಗೂ ಸಂಭೋಗಸುಖವನ್ನರಿಯದೆ ಪತ್ನಿಯನ್ನು ಸಲಹಿಕೊಂಡು ಬಂದ ನಾನು ಸಂಭೋಗಸುಖವನ್ನು ಅನುಭವಿಸುವಕಾಲದಲ್ಲಿ ಹೆಂಡತಿಯನ್ನು ಕಳೆದುಕೊಂಡೆನಲ್ಲ. ಇಂಥವನಿಗೆ ನಿನ್ನ ರಾಜ್ಯದಿಂದಲಾಗಲಿ, ಕೋಶದಿಂದಲಾಗಲಿ ಅಥವ ಮತ್ತಾವ ವಸ್ತುವಾಹನಗಳಿಂದಾಗಲಿ, ನನಗೆ ಪ್ರಯೋಜನವೇನು? ನೀನು ಮಾಡಿದ ವಾಗ್ದಾನದಂತೆ ನಿನ್ನ ಮನಸ್ಸು ಒಪ್ಪುವಹಾಗಿದ್ದರೆ ನಿನ್ನ ಪಟ್ಟದರಾಣಿಯನ್ನು ನನಗೆ ಕೊಡು ಎಂದು ಕೇಳಲು, ಆ ಭದ್ರಾಯುವು ತನ್ನಲ್ಲಿ ನಾನೆ ಸ್ವಲ್ಪಹೊತ್ತು ಚಿಂತಿಸುತ್ತಿದ್ದು ಬಳಿಕ ಆ ಬ್ರಾಹ್ಮಣನನ್ನು ಕುರಿತು ಇಂತೆಂದನು. ಎಲೈ ಬ್ರಾಹ್ಮಣನೇ ಹೀಗೆ ಹೇಳುವುದು ನಿನನಗೆ ಧರ್ಮವೇ ನಿನ್ನ ಗುರುವು ನಿನಗೆ ಈ ವಿದ್ಯೆಯನ್ನು ಹೇಳಿಕೊಟ್ಟನೆ? ಲೋಕದಲ್ಲಿ ಪರಸ್ತ್ರೀ ಸಂಭೋಗವು ಅಪಕೀರ್ತಿಗೂ, ಆಯುಷ್ಯಹಾನಿಗೂ, ಪರಲೋಕಹಾನಿಗೂ, ಕಾರಣವಾದದ್ದಲ್ಲವೆ? ವೇದಾಧ್ಯಯನ ಸಂಪನ್ನನಾದ ನೀನು ಸಕಲ ಧರ್ಮಗಳ ಸಾರವನ್ನು ತಿಳಿದಿರುವಾಗ ಈ ಅರ್ಥವು ನಿನಗೆ ತಿಳಿಯದೆ? ಪರಸ್ತ್ರೀಗಮನದಿಂದ ಉಂಟಾಗುವ ಪಾಪವು ಯಾವಪ್ರಾಯಶ್ಚಿತ್ತದಿಂದಲೂ, ಪರಿಹಾರವಾಗುವದಿಲ್ಲ. ಲೋಕದಲ್ಲಿ ಹೆಂಡತಿಯನ್ನು ದಾನವಾಗಿ ಕೇಳುವವರೂ, ಪತ್ನಿಯನ್ನು ದಾನಮಾಡಿದವರೂ ಯಾರಾದರೂ ಇರುವರೇ? ಹೀಗೆ ಇರುವಲ್ಲಿ ಧನಧಾನ್ಯ ರಾಜ್ಯ ಕೋಶಾದಿಗಳನ್ನು ಆನೆ ಕುದುರೆ ರಥಗಳನ್ನೂ ದಾನಮಾಡಿದ ಮಹಾತ್ಮರು ಲೋಕದಲ್ಲಿ ಬಹುಮಂದಿ ಇರುವರು. ಆದರೆ ಧರ್ಮಪತ್ನಿಯನ್ನು ದಾನಮಾಡಿದವನೊಬ್ಬನೂ ಇಲ್ಲ. ಇಂಥದುರಲ್ಲಿ ನೀನು ಈ ದಾನವನ್ನು ಹೇಗೆ ಕೇಳಿದೆಯೆಂದು ಭದ್ರಾಯುವು ಹೇಳಲು, ಆ ಬ್ರಾಹ್ಮಣನು ಕಿಂಚಿತ್ಕೋಪಾಕ್ರಾಂತನಾಗಿ ಭದ್ರಾಯುವನ್ನು ಕುರಿತು ಮತ್ತೆ ಇಂತೆಂದನು.

ಎಲೈ ಭದ್ರಾಯುವೇ? ಕೇಳು ಕ್ಷತ್ರಿಯನಾದ ನಿನಗೆ ಬ್ರಾಹ್ಮಣರ ಮಹತ್ತು ಇನ್ನೂ ತಿಳಿಯದು. ಇದರಿಂದ ನೀನು ಹೀಗೆ ಹೇಳುತ್ತಿರುವೆ, ತಪೋಬಲದಿಂದ ಬ್ರಹ್ಮಹತ್ಯ, ಸುರಾಪಾನ, ಸ್ವರ್ಣಸ್ತೇಯ, ಗುರುತಲ್ಪ ಗಮನ ಮೊದಲಾದ ಮಹಾಪಾತಕಗಳನ್ನು ಪರಿಹರಿಸಿಕೊಳ್ಳುವ ಸಾಮರ್ಥ್ಯವುಳ್ಳ ನನಗೆ ಪರಸ್ತ್ರೀ ಸಂಭೋಗದಿಂದ ಉಂಟಾಗುವ ಪಾಪವನ್ನು ಪರಿಹರಿಸಿಕೊಳ್ಳುವುದೊಂದು ದೊಡ್ಡದೆ! ಆದಕಾರಣ ಸಂಶಯರಹಿತನಾಗಿ ನಿನ್ನ ಹೆಂಡತಿ

ಯನ್ನು ನನಗೆ ದಾನಮಾಡು ಹಾಗಿಲ್ಲದಿದ್ದರೆ ಮರೆಹೊಕ್ಕವರನ್ನು ಕಾಪಾಡದೆ ಬಿಟ್ಟ ಮಹಾ ಪಾಪವು ನಿನಗೆ ಪ್ರಾಪ್ತವಾಗದೆ ಇರದು ಇದರಿಂದ ಬಹು ಅನರ್ಥಗಳುಂಟಾಗುವುವು ಎಂದು ಕರ್ಣಕಠೋರವಾಗಿ ಹೇಳಲು ಅದನ್ನು ಕೇಳಿ ಭದ್ರಾಯುವು ತನ್ನಲ್ಲಿ ತಾನು ಆಹಾ ! ಈ ಬ್ರಾಹ್ಮಣನು ಸಾಮಾನ್ಯನಲ್ಲ. ಸಂಪೂರ್ಣ ಜ್ಞಾನಕೋವಿದನು. ಇವನು ಹೇಳಿದುದೆಲ್ಲ ನಿಜ ಆರ್ತರನ್ನೂ, ದೀನರನ್ನೂ, ಅನಾಥರನ್ನು ರಕ್ಷಣೆಮಾಡದೆ ಇರುವ ರಾಜನಿಗೆ ನರಕಪ್ರಾಪ್ತಿಯಾಗುವುದೆಂಬ ಧರ್ಮಶಾಸ್ತ್ರವನ್ನು ನಾನು ಮೊದಲೇ ಕೇಳಿದೇನೆ ಆದಕಾರಣ ಈ ನನ್ನ ಹೆಂಡತಿಯನ್ನು ಈ ಬ್ರಾಹ್ಮಣನಿಗೆ ಕೊಟ್ಟು ನಾನು ಅಗ್ನಿ ಪ್ರವೇಶಮಾಡಿ ಈ ದೇಹವನ್ನು ಸಾರ್ಥಕಪಡಿಸಿಕೊಳ್ಳುವೆನು. ಹಾಗೆ ಮಾಡಿದರೆ ನನಗೆ ಅಪಕೀರ್ತಿಯೂ, ಪರಲೋಕಹಾನಿಯೂ ಇಲ್ಲವೆಂದು ಮನಸ್ಸಿನಲ್ಲಿ ನಿಶ್ಚಯಿಸಿ ತಾನು ಸ್ನಾನಮಾಡಿ ಶುಚಿರ್ಭೂತನಾಗಿ ಆ ಬ್ರಾಹ್ಮಣನನ್ನು ಕರೆದು ತನ್ನ ಹೆಂಡತಿಯನ್ನು ಅವನಿಗೆ ಧಾರಾಪೂರ್ವಕವಾಗಿ ದಾನಮಾಡಿ ತಾನು ದಿಗ್ದೇವತೆಗಳಿಗೂ ಋಷಿಗಳಿಗೂ ನಮಸ್ಕಾರಮಾಡಿ ಅಗ್ನಿಕುಂಡವನ್ನು ಅಣಿಮಾಡಿ ಬೆಂಕಿಯನ್ನು ಹೊತ್ತಿಸಿ, ಜಾಜ್ವಲ್ಯಮಾನವಾಗಿ ಧಗಧಗನೆ ಉರಿಯುತ್ತಿರುವ ಆ ಅಗ್ನಿಕುಂಡಕ್ಕೆ ಕೈಮುಗಿದು ನಮಸ್ಕರಿಸಿ ಪರಮೇಶ್ವರನನ್ನು ಧ್ಯಾನಿಸುತ್ತ ಮೂರು ಬಾರಿ ಪ್ರದಕ್ಷಿಣೆಮಾಡಿ ಅಗ್ನಿಪ್ರವೇಶಮಾಡಲು ಸಿದ್ಧನಾದನು.

ಆಗ ಜಗತ್ಪತಿಯಾದ ಪರಮೇಶ್ವರನು ಭದ್ರಾಯುವಿನ ಭಕ್ತಿಗೆ ಮೆಚ್ಚಿ ಸಂತೋಷಪಟ್ಟು ತಾನೇ ಪ್ರತ್ಯಕ್ಷವಾಗಿ ಬಂದು ಅಗ್ನಿಕುಂಡದಲ್ಲಿ ಬೀಳುತ್ತಿದ್ದ ಭದ್ರಾಯುವನ್ನು ತಡೆದು ನಿಲ್ಲಿಸಿ ತನ್ನ ನಿಜರೂಪವನ್ನು ಅವನಿಗೆ ತೋರಿಸಲು ಭದ್ರಾಯುವು ತನ್ನೆದುರಿಗೆ ಸಾಕಾರರೂಪದಿಂದಳವಟ್ಟು ಪಂಚಮುಖನಾಗಿ, ತ್ರಿಣೇತ್ರನಾಗಿ ಕರಕಮಲದಲ್ಲಿ ಪಿನಾಕವನ್ನು ಹಿಡಿದು, ಶಿರಸ್ಸಿನಲ್ಲಿ ಚಂದ್ರಕಳೆಯೊಡನೆ ಗಂಗಾದೇವಿಯನ್ನು ಧಾರಣೆಮಾಡಿಕೊಂಡು, ಹಿಂಭಾಗದಲ್ಲಿ ಒಲಿದಾಡುತ್ತಿರುವ ಕೆಂಜಡೆಯು ಶೋಭಿಸುತ್ತಿರಲು ಸಂಜೆಗೆಂಪಿನಿಂದ ಕೂಡಿ ಕೋಟಿ ಸೂರ್ಯ ಪ್ರಕಾಶಮಾನವಾದ ತೇಜಸ್ಸುಳ್ಳವನಾಗಿ ಗಜಚರ್ಮವನ್ನು ಹೊದ್ದು ಸರ್ಪಮಯವಾದ ಹಾರಕುಂಡಲ ಕಟಕ ಕೇಯೂರನೂಪುರ ಕಿರೀಟಗಳುಳ್ಳವನಾಗಿ, ಹತ್ತುಹಸ್ತಗಳಲ್ಲಿಯೂ ಹದವಾಗಿ ನೆಲೆಗೊಂಡಿರುವ ಖಡ್ಗ, ಖಟ್ವಾಂಗ, ಕುಠಾರ, ಪಾಶ, ಮೃಗಹಸ್ತ, ಪಿನಾಕ, ತ್ರಿಶೂಲ, ಪದ್ಮ, ವರದಹಸ್ತ, ಅಭಯಹಸ್ತಗಳಿಂದ ಶೋಭಾಯಮಾನನಾಗಿ, ನೀಲಕಂಠನಾಗಿ ನಿತ್ಯ ತೃಪ್ತನಾಗಿ ಸತ್ಯರೂಪನಾಗಿ ಶುದ್ಧಸ್ಫಟಿಕದಂತೆ ಹೊಳೆಯುತ್ತಿದ್ದ ಶುಭ್ರಾಂಗನಾದ ಪರಮೇಶ್ವರನನ್ನು ಕಂಡು ಕಣ್ತುಂಬ ನೋಡಿ ಕೈಮುಗಿದು ಕಾಲ್ಗೆರಗಿ ಸಾಷ್ಟಾಂಗಪೂರ್ವಕವಾಗಿ ವಂದಿಸಿ ಭಯಭಕ್ತಿಯುಕ್ತನಾಗಿ ತಲೆಯನ್ನು ಬಾಗಿಸಿಕೊಂಡು ನಿಂತಿದ್ದನು. ಆ

ಕಾಲದಲ್ಲಿ ಆಕಾಶದಿಂದ ಪುಷ್ಪವೃಷ್ಟಿಯು ಸುರಿಯಿತು. ದೇವದುಂದುಭಿಗಳು ಮೊಳಗಿದವು ಅಪ್ಸರಸ್ತ್ರೀಯರು ನರ್ತನಮಾಡಿದರು. ಗಂಧರ್ವರು ಗಾನಮಾಡಿದರು. ನಾರದಾದಿ ದೇವರ್ಷಿಗಳು, ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತಾದಿ ಯೋಗೀಶ್ವರರೂ, ವಶಿಷ್ಠ ವಾಮದೇವಾದಿ ಬ್ರಹ್ಮರ್ಷಿಗಳೂ, ಇಂದ್ರ, ಅಗ್ನಿ, ಯಮ, ನಿರಋತಿ, ವರುಣ ವಾಯು, ಕುಬೇರ, ಈಶಾನ ಮೊದಲಾದ ಅಷ್ಟದಿಕ್ಪಾಲಕರು, ಸಮಸ್ತ ದೇವತೆಗಳೊಡನೆ ಅಲ್ಲಿಗೆ ಬಂದು ಪರಶಿವನನ್ನು ಓಲೈಸುತ್ತಿದ್ದರು. ಹೀಗೆ ದೇವತೆಗಳ ಸಮೂಹದಿಂದ ಓಲೈಸಲ್ಪಡುತ್ತ ರತ್ನಸಿಂಹಾಸನದಲ್ಲಿ ಪಾರ್ವತೀ ಸಮೇತನಾಗಿ ಕುಳಿತುಕೊಂಡು ಪರಮೇಶ್ವರನು ಅಮೃತಮಯವಾದ ತನ್ನ ಕೃಪಾದೃಷ್ಟಿಯಿಂದ ಭಕ್ತಾಗ್ರಣಿಯಾದ ಭದ್ರಾಯುವನ್ನು ನೋಡಿದನು. ಹೀಗೆ ಪರಶಿವನ ಕಟಾಕ್ಷಕ್ಕೆ ಪಾತ್ರನಾದ ಬಳಿಕ ಭದ್ರಾಯುವು ಜ್ಞಾನಬಲದಿಂದ ನಿರ್ಮಲ ಹೃದಯನಾಗಿ ಆನಂದದಿಂದ ಉಬ್ಬಿದ ಮೈಯುಳ್ಳವನಾಗಿ, ಬಾಷ್ಪಪೂರಿತವಾದ ನಿಜನಯನಗಳಿಂದ ಪರಶಿವನನ್ನು ನೋಡುತ್ತ ಗದ್ಗಗಕಂಠನಾಗಿ ಆ ಶಿವನನ್ನು ಹೀಗೆ ಸ್ತುತಿಸಲಾರಂಭಿಸಿದನು. ಹೇಗೆಂದರೆ:—

ಎಲೈ ಪರಮೇಶ್ವರನೇ! ನೀನು ಆದಿ ಅಂತ್ಯಗಳಿಲ್ಲದವನು. ಸರ್ವತಂತ್ರಗಳಲ್ಲಿಯೂ ಸ್ವತಂತ್ರನು. ಬ್ರಹ್ಮಾದಿಗಳಿಂದಲೂ ತಿಳಿಯಲು ಅಸಾಧ್ಯವಾದ ಸದ್ಗುಣಗಳುಳ್ಳವನು. ಕಾರಣಗಳಿಗೆಲ್ಲ ಕಾರಣನಾದವನು. ಸರ್ವವ್ಯಾಪಕನು. ಸತ್ಯಜ್ಞಾನಾನಂದ ಸ್ವರೂಪವನು. ಹದಿನಾಲ್ಕು ಲೋಕಗಳಿಗೂ ಕರ್ತೃವಾದವನು. ಈ ಪ್ರಪಂಚಕ್ಕೆ ಸಾಕ್ಷಿಭೂತನಾಗಿ ಸತ್ಪುರುಷರ ಹೃದಯ ಕಮಲದಲ್ಲಿ ನೆಲಸಿ ಅನ್ಯರಿಗೆ ಕಾಣದಂತೆ ರಹಸ್ಯವಾಗಿರುವನು. ಮನೋನಿಗ್ರಹಿಗಳಾದ ಮಹಾಯೋಗಿಗಳ ಮಹೋಪಾಯಕ್ಕೆ ವಶನಾಗಿ ಪ್ರತ್ಯಕ್ಷನಾಗುವನು. ಆಹಾ! ಮಹಿಮಾತಿಶಯವಾದ ನಿನ್ನ ಪ್ರಭಾವವನ್ನು ಏನು ಹೇಳಲಿ! ಒಬ್ಬನೇ ಜಗತ್ತಿಗೆ ಕರ್ತನೆಂದು ತಿಳಿಯುವ ಮಹಾತ್ಮರಿಗೆ ಒಬ್ಬನೇ ಆಗಿ ಏಕರೂಪದಿಂದಲೂ ಅನೇಕರೆಂದು ತಿಳಿಯುವ ಭಿನ್ನಾತ್ಮರಿಗೆ ಭಿನ್ನಾಕಾರವಾಗಿದ್ದುಕೊಂಡು ಬಹು ರೂಪದಿಂದಲೂ ಕಾಣಿಸತಕ್ಕವನು. ಸಗುಣನಾಗಿ ತೋರಿದರೂ ನಿರ್ಗುಣನಾದವನು. ನಿನ್ನ ಮಹಿಮೆಯಿಂದ ಪ್ರತಿಫಲಿಸಿದ ಮಾಯಾಧೀನನಾದ ನಾನು ನಿನ್ನನ್ನು ಹೇಗೆ ಸ್ತುತಿಸಲಿ! ಆದರೂ ಆ ಸಾರಭೂತವಾದ ಈ ಸಂಸಾರದ ಕೋಟಲೆಗೆ ಸಿಕ್ಕಿ ಅನುಭವಿಸಬಾರದ ಅನೇಕ ತಾಪತ್ರಯಗಳಿಂದ ನೊಂದಿರುವ ಕಾರಣ ಆ ಸಂಸಾರ ಭಯನಿವಾರಣೆಗಾಗಿ ಭಕ್ತವತ್ಸಲನಾದ ನಿನ್ನನ್ನು ಸ್ತೋತ್ರಮಾಡುವೆನು. ದೇವತೆಗಳಿಗೆಲ್ಲ ದೇವನಾಗಿ ಸುಖಸ್ವರೂಪನಾಗಿ, ಶಾಂತಮೂರ್ತಿಯಾಗಿ ಸೃಷ್ಟಿಸ್ಥಿತಿಲಯಗಳಿಗೆ ಕಾರಣರಾದ ಬ್ರಹ್ಮ ವಿಷ್ಣು ರುದ್ರರಿಗೆ ನಿಯಾಮಕನಾದ ಸ್ವಾಮಿಯಾಗಿ, ಸಕಲ ಪ್ರಪಂಚಗಳಿಗೂ

ಅಧ್ಯಕ್ಷನಾಗಿ ಅಂತಃಕರಣ ಉಪಾಧಿಗೆ ಸಿಕ್ಕಿ ಪ್ರತಿ ಪ್ರಾಣಿಯ ದೇಹದಲ್ಲಿಯೂ ಜೀವರೂಪನಾಗಿ ಕಾಣುತ್ತ, ಜೀವತ್ವವನ್ನು ಪಡೆದು ಆತ್ಮನಾಗಿ ಪ್ರಕಾಶಿಸುತ್ತಿರುವ ಪರಬ್ರಹ್ಮಸ್ವರೂಪನಾದ ಮಹಾತ್ಮನೇ! ನಿನಗೆ ನಮಸ್ಕಾರ. ಸ್ವಯಂ ಪ್ರಕಾಶನಾಗಿ ಸ್ರಕ್ಚಂದನ ವನಿತಾದಿ ವಿಷಯಗಳಲ್ಲಿ ಆಸಕ್ತನಾದರೂ ಸಕ್ತನಲ್ಲದವನಹಾಗೆ ತೋರುತ್ತ ಸತ್ಯಜ್ಞಾನಾತ್ಮಕನಾಗಿ ನಿತ್ಯನಾಗಿ ನಿರ್ಮಲನಾಗಿ, ನಿಗಮಾಂತ ವೇದ್ಯನಾಗಿ ನಿಷ್ಕ್ರಿಯನಾಗಿ ನಿರವಯುವನಾಗಿ ನಿರ್ಗುಣನಾಗಿರುವ ಎಲೈ ಪಾರ್ವತೀಪತಿಯೇ ನಿನಗೋಸ್ಕರ ನಮಸ್ಕಾರ. ಅಗಮ್ಯನಾಗಿ ಅಣುವಿಗಿಂತಲು ಅಣುವಾಗಿ ಮಹತ್ತಿಗಿಂತಲೂ ಮಹತ್ತಾಗಿ ಸಕಲ ಕರ್ಮ ಬಂಧರಹಿತನಾಗಿ, ಓಂಕಾರಗಮ್ಯನಾಗಿ, ಶುಭಪ್ರದನಾಗಿ, ಸುಖಪ್ರಭಾವನಾಗಿ, ಮೋಕ್ಷದಾಯಕನಾಗಿ, ಮಹಾಮಹಿಮನೆಂದು ಹೊಗಳಿಸಿಕೊಳ್ಳುವ ಮಹಾದೇವನೆ! ನಿನಗೆ ನಮಸ್ಕಾರ. ಪುಣ್ಯಾತ್ಮರಿಗೆ ಅಘೋರರೂಪನಾಗಿ, ಪಾಪಿಷ್ಠರಿಗೆ ಮಹಾಘೋರರೂಪನಾಗಿ ಕಾಣಿಸುತ್ತ ಮಹಾಪಾತಕಗಳನ್ನು ಕೂಡ ನಾಶಮಾಡುವ ಮಹಾಮಹಿಮೆಯುಳ್ಳ ಭರ್ಗನೆಂದು ಶಿವನೆಂದೂ ಕರೆಯಲ್ಪಡುವ ಶುಭನಾಮಗಳುಳ್ಳವನಾಗಿ, ಸಂಸಾರವೆಂಬ ವೃಕ್ಷಗಳಿಗೆ ಬೀಜರೂಪವಾದ ಕರ್ಮಂಗಳನ್ನು ನಡೆಸುತ್ತ ತತ್ಸಾಕ್ಷಿರೂಪವಾಗಿರುವ ಚಂದ್ರಶೇಖರನೆ! ನಿನಗೆ ನಮಸ್ಕಾರ. ದೇವದೇವನೆ! ಜಗತ್ಕರ್ತನೆ! ಪಿನಾಕಪಾಣಿಯೆ! ಕುಮಾರಜನಕನೆ! ಕಾಮಾರಿಯೆ! ಗೌರಿಪತಿ, ದಕ್ಷಾಧ್ವರಧ್ವಂಸಿ, ತ್ರಿಪುರಾರಿ, ವೀರಭದ್ರ, ವಿರೂಪಾಕ್ಷ, ವಿಶ್ವೇಶ್ವರ, ಶಂಕರ, ಚಂದ್ರಶೇಖರ, ಶಂಭು, ಶಾಂತಮೂರ್ತಿ, ತ್ರಿಣೇತ್ರ, ಮೃತ್ಯುಂಜಯ, ಗಂಗಾಧರ, ಗಜಾಂತಕ, ಗೋಪವಾಹನ, ಗೌರವರೂಪ, ಗುರುಮೂರ್ತಿ, ಗುಣಾಂಗ, ಗುಣರಹಿತ ಮೊದಲಾದ ಬಹು ಬಗೆಯ ಸಾರ್ಥಕ ನಾಮಧೇಯವುಳ್ಳ ಎಲೈ ಭಕ್ತವತ್ಸಲನಾದ ಪರಮೇಶ್ವರನೆ! ನಿನಗೆ ನಮಸ್ಕಾರ ನಮಸ್ಕಾರ ಮತ್ತೂ ನಮಸ್ಕಾರ, ಶರಣಾಗತನಾದ ನನ್ನನ್ನು ಕರುಣದಿಂದ ಕಾಪಾಡು! ಕೃಪೆಯಿಂದ ಉದ್ಧರಿಸು! ಎಂದು ಬೇಡಿಕೊಂಡನು. ಆಗ ಭಕ್ತನ ಗುಣಾತಿಶಯದಿಂದ ಕರಗಿದ ಮನಸ್ಸುಳ್ಳ ಪಾರ್ವತಿ ಸಮೇತನಾದ ಪರಮೇಶ್ವರನು ತನ್ನ ಭಕ್ತನಾದ ಭದ್ರಾಯುವಿನ ನಯ ವಿನಯ ಭಯಭಕ್ತಿಗಳಿಗೆ ಮೆಚ್ಚಿ ಅವನನ್ನು ಕುರಿತು ಇಂತೆಂದನು.

ಎಲೈ ಭಕ್ತಾಗ್ರಣಿಯಾದ ಭದ್ರಾಯುವೆ? ನಿನ್ನ ಭಕ್ತಿಶ್ರದ್ಧೆಗಳಿಗೆ ಒಪ್ಪಿದೆನು. ನಿನ್ನ ಸುಗುಣಗಳಿಂದ ನನಗೆ ಸಂತೋಷವುಂಟಾಯಿತು. ನೀನು ಮಾಡಿದ ಸ್ತೋತ್ರದಿಂದ ನಾನು ಪ್ರಸನ್ನನಾದೆನು. ನಿನ್ನನ್ನು ಪರೀಕ್ಷಿಸಿ ನಿನ್ನ ಮನಸ್ಸನ್ನು ದೃಢಗೊಳಿಸಿ, ನಿನ್ನ ಮಹಿಮೆಯನ್ನು ಎಲ್ಲ ಲೋಕಗಳಿಗೂ ವಿಸ್ತರಿಸಿ ತಿಳಿಸಬೇಕೆಂಬ ವ್ಯಾಜದಿಂದ ನಾನೆ ಬ್ರಾಹ್ಮಣವೇಷದಿಂದ ಬಂದೆನು.

ಹುಲಿಗೆ ಸಿಕ್ಕಿದವಳೆ ನನ್ನ ಹೆಂಡತಿಯಾದ ಪಾರ್ವತಿ! ಅವಳನ್ನು ಎತ್ತಿಕೊಂಡು ಹೋದ ಹೆಬ್ಬುಲಿಯು ನನ್ನ ಮಾಯಾಶಕ್ತಿಯಿಂದ ನಿರ್ಮಿತವಾದದ್ದು. ನಿನ್ನ ಭಕ್ತಿಯನ್ನು ಪರೀಕ್ಷಿಸುವುದಕ್ಕಾಗಿ ನಿನ್ನ ಹೆಂಡತಿಯನ್ನು ದಾನವಾಗಿ ಕೊಡು ಎಂದು ಕೇಳಿದೆನು. ಈಗ ನಿನ್ನ ಭಕ್ತಿಗೂ ನಿನ್ನ ಹೆಂಡತಿಯ ಸದ್ಗುಣಗಳಿಗೂ ಮೆಚ್ಚಿ ನಾನು ಸಂತುಷ್ಟನಾಗಿರುವೆನು. ಆದಕಾರಣ ನಿನಗೆ ಬೇಕಾದ ವರವನ್ನು ಕೇಳು ಕೊಡುತ್ತೇನೆ ಎಂದು ಹೇಳಿದನು. ಬಳಿಕ ಭದ್ರಾಯುವು ಪರಶಿವನನ್ನು ಕುರಿತು ಎಲೈ ದೇವದೇವನೆ! ಸಂಸಾರ ತಾಪತ್ರಯಕ್ಕೆ ಸಿಕ್ಕಿ ನರಳುತ್ತಿರುವ ನನಗೆ ಅಮೃತಪ್ರಾಯನಾದ ನೀನೆ ಪ್ರತ್ಯಕ್ಷನಾಗಿರುವಲ್ಲಿ ನಾನು ಹೆಚ್ಚಾಗಿ ಕೇಳಿ ಕೊಳ್ಳತಕ್ಕದ್ದೇನಿದೆ, ನಿನ್ನ ಹೊರತು ಅನ್ಯ ವಸ್ತುಗಳಿಂದ ನನಗೇನು ಪ್ರಯೋಜನ? ನನಗೂ ನನ್ನ ತಂದೆ ತಾಯಿಗಳಿಗೂ ನನ್ನ ಹೆಂಡತಿಯಾದ ಕೀರ್ತಿಮಾಲಿನಿಗೂ ಬಾಲ್ಯದಿಂದಲೂ ನನ್ನ ಸ್ನೇಹಿತನಾಗಿರುವ ಈ ಸುನಯನನಿಗೂ ನಿನ್ನ ಸಾಲೋಕ್ಯಪದವಿಯನ್ನು ದಯಪಾಲಿಸಬೇಕೆಂದು ಕೇಳಿಕೊಂಡನು. ಆಗ ಪರಮೇಶ್ವರನು "ತಥಾಸ್ತು" ಎಂದು ಹೇಳಿ ಭದ್ರಾಯುವು ಕೇಳಿದ ವರಗಳನ್ನು ಕೊಟ್ಟು ಕೀರ್ತಿಮಾಲಿನಿಯ ಕಡೆಗೆ ತಿರಿಗಿ ಅಮ್ಮಾ! ಪತಿವ್ರತಾಶಿರೋಮಣಿ ನಿನ್ನ ಪತಿಭಕ್ತಿಗೆ ನಾನು ಮೆಚ್ಚಿದೆನು. ನಿನಗೆ ಬೇಕಾದವರವನ್ನು ಕೇಳು ಕೊಡುತ್ತೇನೆಂದು ಹೇಳಿದನು. ಆಗ ಅವಳು ತನ್ನ ತಂದೆ ತಾಯಿಗಳಿಗೆ ಸಾಲೋಕ್ಯಪದವಿಯನ್ನು ಅನುಗ್ರಹಿಸಬೇಕೆಂದು ಕೀರ್ತಿಮಾಲಿನಿಗೂ ತಥಾಸ್ತು ಎಂದು ವರಪ್ರದಾನಮಾಡಿ ಯಾರಿಗೂ ತಿಳಿಯದಂತೆ ಕ್ಷಣಮಾತ್ರದಲ್ಲಿ ಅಂತರ್ಧಾನನಾದನು.

ಬಳಿಕ ದೇವಾಧಿದೇವತೆಗಳಿಗೂ ದುರ್ಲಭವಾದ ದಿವ್ಯ ವರಗಳನ್ನು ಪಡೆದ ಸಂತೋಷದಿಂದ ಭದ್ರಾಯುವು ಆನಂದಭರಿತನಾಗಿ ಹತ್ತುಸಹಸ್ರ ವರ್ಷಕಾಲ ಕೀರ್ತಿಮಾಲಿನಿಯೊಡಗೂಡಿ ಸಕಲ ಭೋಗಭಾಗ್ಯಗಳನ್ನೂ ಅನುಭವಿಸಿ, ತನ್ನ ಮಕ್ಕಳಿಗೆ ರಾಜ್ಯಭಾರವನ್ನು ವಹಿಸಿ, ಶಿವಧ್ಯಾನ ತತ್ಪರನಾಗಿ ಶಿವಮಂತ್ರ ಜಪದಿಂದಲೆ ಈ ಲೋಕವನ್ನು ಬಿಟ್ಟು ಧರ್ಮಪತ್ನಿಯಾದ ಕೀರ್ತಿಮಾಲಿನಿಯೊಡನೆ ಕೈಲಾಸವನ್ನು ಸೇರಿದನು. ಅನಂತರ ಶಿವನ ವರಪ್ರಸಾದದಂತೆ ವಜ್ರಬಾಹು, ಸುಮತಿಯರೂ, ಚಂದ್ರಾಂಗದ ಸೀಮಂತಿನಿಯರೂ ಕಡೆಗೆ ವೈಶ್ಯಕುಮಾರನಾದ ಸುನಯನನೂ, ಶಿವಸಾಯುಜ್ಯವನ್ನು ಪಡೆದು ಮುಕ್ತರಾದರು. ಆದಕಾರಣ ಎಲೈ ಋಷಿವರ್ಯರಿರಾ! ಲೋಕದಲ್ಲಿ ಪರಮಪವಿತ್ರಕರವಾಗಿ ಸಕಲ ಪಾಪಪರಿಹಾರಕವಾಗಿ ಶ್ರವಣಾನಂದಕರವಾದ ಅಮೃತದಂತಿರುವ ಈ ಋಷಭೋಪಾಖ್ಯಾನವನ್ನು ಭಕ್ತಿಯಿಂದ ಯಾರು ಕೇಳುವರೊ! ಶ್ರದ್ಧೆಯಿಂದ ಯಾರು ಓದುವರೊ! ಪ್ರೀತಿಯಿಂದ ಯಾರು ಬರೆಯುವರೊ! ಅಕ್ಕರೆಯಿಂದ ಯಾರು ಬರೆಯಿಸುವರೊ! ಅವರೆಲ್ಲರೂ ಇಹಲೋಕದಲ್ಲಿ ಸಕಲ

ವಿಧವಾದ ಅರಿಷ್ಟಗಳನ್ನು ಕಳೆದು ದಿವ್ಯವಾದ ಭೋಗಭಾಗ್ಯಗಳನ್ನು ಅನುಭವಿಸಿ ಕೀರ್ತಿವಂತರಾಗಿ ಬಾಳಿ ಕಡೆಗೆ ದುರ್ಲಭವಾದ ಶಿವಕೈವಲ್ಯವನ್ನು ಪಡೆಯುವ ರೆಂದು ಸೂತಮಹಾಮುನಿಯು ಶೌನಕಾದಿಗಳಿಗೆ ಹೇಳುತ್ತಿದ್ದನೆಂಬಲ್ಲಿಗೆ,

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರನರಪತಿ ಬಿರುದೆಂತೆಂಬರಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡಾದಿ ನಾನಾ ಬಿರುದಾಂಕಿತ ಯಾದವಕುಲ ತಿಲಕ ಆತ್ರೇಯಸ ಗೋತ್ರ ಅಶ್ವಲಾಯನ ಸೂತ್ರವರ್ತಿ ಋಕ್ಶಾಖಾಧ್ಯಾಯಿ ಮ.ಹಿಶೂರ ರಾಜ ಒಡೆಯರವರ ಪೌತ್ರ ನರಸಭೂಪಾಲಕರ ಪುತ್ರ ಶ್ರೀ ಇಮ್ಮಡಿ ಚಾಮರಾಜ ಒಡೆಯರವರು ಕರ್ಣಾಟಕ ಬಾಷೆಯಲ್ಲಿ ವಿರಚಿಸಿದ ಸ್ಕಂದಪುರಾಣೋಕ್ತ ಬ್ರಹ್ಮೋತ್ತರಖಂಡದಲ್ಲಿ ಋಷಭಯೋಗೀಶ್ವರನಿಂದ ಭದ್ರಾಯುವಿಗೆ ಪರಮೇ ಶ್ವರಾನುಗ್ರಹವಾಗಿ ಅವನ ತಂದೆ ತಾಯಿ ಮೊದಲಾದವರಿಗೂ ಕೈಲಾಸ ಪದವಿ ಯಾದಿಲ್ಲಿಗೆ,

೧೪ನೆಯ ಅಧ್ಯಾಯಕ್ಕೆ ಮಂಗಳಮಸ್ತು.

---

# ವಾಮದೇವ ಮಹಿಮೆ.

## ಹದಿನೈದನೆಯ ಅಧ್ಯಾಯ.

ಅನಂತರದಲ್ಲಿ ಮಹಾಮಹಿಮನಾದ ಸೂತಪುರಾಣಿಕನು ಭಕ್ತಾಗ್ರಣಿ ಗಳಾದ ಶೌನಕಾದಿ ಮಹಾಮುನಿಗಳನ್ನು ಕುರಿತು:—ಎಲೈ ಋಷಿಗಳಿರಾ! ಕೇಳಿ ಇದುವರೆಗೆ ನಿಮಗೆ ಶಿವಯೋಗಿಯಾದ ಋಷಭಯೋಗೀಶ್ವರನ ಮಹಿಮೆಯನ್ನು ವಿಸ್ತರಿಸಿ ಹೇಳಿದೆನು. ಅದನ್ನು ಕೇಳಿ ನೀವೂ ಧನ್ಯರಾದಿರಿ, ಆದರೆ ಈಗ ಸರ್ವೋತ್ತಮ ಭಕ್ತಿವಂತನಾಗಿ ಸಕಲ ಪಾಪರಾಶಿಯನ್ನು ಪಾದಧೂಳಿಯಿಂದ ಪರಿಹಾರಮಾಡುವ ಮಹಾಶಕ್ತಿಯುಳ್ಳ ವಾಮದೇವನೆಂಬ ಮಹಾತ್ಮನ ಕಥೆ ಯನ್ನು ವಿಸ್ತರಿಸಿ ಹೇಳಬೇಕೆಂದಿರುವೆನು. ಆ ಕಥೆಯನ್ನು ಕೇಳುವುದರಿಂದ ನಿಮ್ಮ ಸಮಸ್ತ ಪಾಪರಾಶಿಗಳೂ ದೂರವಾಗಿ ನಿಮಗೆ ನಿತ್ಯ ಸುಖವುಂಟಾಗು ವುದು. ಇದರಿಂದ ನೀವು ಕೃತಕೃತ್ಯರಾಗಿ ಧನ್ಯರಾಗುವಿರಿ! ಎಂದು ಋಷಿ ಸಮೂಹವನ್ನು ಸಂಬೋಧಿಸಿ ಸೂತಮಹಾಮುನಿಯು ಇಂತೆಂದನು.

ಪೂರ್ವಕಾಲದಲ್ಲಿ ಮಹಾ ತಪಸ್ವಿಯಾದ ವಾಮದೇವನೆಂಬ ಒಬ್ಬ ಶಿವ ಯೋಗಿ ಇದ್ದನು. ಅವನು ಸದಾಚಾರ ತತ್ಪರನಾಗಿ, ಸಂಗಹೀನನಾಗಿ, ಶಾಂತನಾಗಿ, ಸ್ತ್ರೀಪರಿಗ್ರಹರಹಿತನಾಗಿ, ಸರ್ವರಲ್ಲಿಯೂ ಸಮಬುದ್ಧಿಯುಳ್ಳವ

ನಾಗಿ, ತಾನು ಅನ್ಯನು, ಇದು ತನ್ನದು, ಇದು ಅನ್ಯರದು ಎಂಬ ಭೇದಭಾವನೆ ಇಲ್ಲದವನಾಗಿ, ಶೀತೋಷ್ಣಗಳನ್ನು ಸಹಿಸತಕ್ಕವನಾಗಿ ವಿರಕ್ತನಾಗಿ, ಅಹಂ ಕಾರ ಮಮಕಾರಗಳನ್ನು ತೊರೆದು, ಮನಸ್ಸನ್ನು ನಿಗ್ರಹಿಸಿಕೊಂಡು, ಅನ್ಯರಿಂದ ಅರಿಯಲಸಾಧ್ಯವಾದ ಮಹಿಮೆಯುಳ್ಳವನಾಗಿ, ಸರ್ವದಾ ಸಂತುಷ್ಟನಾಗಿ ಆತ್ಮಾ ನಾತ್ಮ ವಿಚಾರವನ್ನು ತಿಳಿದವನಾಗಿ, ಆತ್ಮನಿಷ್ಠನಾಗಿ, ಬ್ರಹ್ಮಜ್ಞಾನಿಯಾಗಿ ವಾಸಮಾಡುವುದಕ್ಕೆ ನಿಯತವಾದ ಮನೆಯಿಲ್ಲದವನಾಗಿ, ಭಸ್ಮೋದ್ಧೂಳಿತ ಶರೀರನಾಗಿ, ಜಟಾಪಟಲ ಮಂಡಿತನಾಗಿ, ನಾರುಮಡಿಯನ್ನು ಧರಿಸಿ ಯಾರಿಂ ದಲೂ, ಯಾವಾಗಲೂ ದ್ರವ್ಯವನ್ನು ಪರಿಗ್ರಹಿಸದೆ ಭಿಕ್ಷಾನ್ನ ಮಾತ್ರದಿಂದ ತೃಪ್ತನಾಗಿ ಶಿವಮಂತ್ರವನ್ನು ಜಪಿಸುತ್ತ ಶಿವಧ್ಯಾನ ತತ್ಪರನಾಗಿ ಲೋಕ ಸಂಚಾರವನ್ನು ಮಾಡುತ್ತ ಹೊರಟು ಬಂದು ಒಂದು ದಿನ ಮಾರ್ಗವಶದಿಂದ ಬಂದು ಮಹಾಘೋರವಾಗಿ ಜನಸಂಚಾರರಹಿತವಾದ ಬಹುಭಯಂಕರವಾಗಿದ್ದ ಕ್ರೌಂಚಾರಣ್ಯಕ್ಕೆ ಬಂದನು. ಅಲ್ಲಿ ಬಹುಕಾಲದಿಂದ ಹಸಿವು ತೃಷೆಗಳಿಂದ ಬಳಲುತ್ತ ಆಹಾರವಿಲ್ಲದೆ ಅಲೆಯುತ್ತಿದ್ದ ಘೋರರೂಪನಾದ ಬ್ರಹ್ಮರಾಕ್ಷಸ ನೊಬ್ಬನು ನಿರ್ಜನಪ್ರದೇಶವಾದ ಆ ಅರಣ್ಯವನ್ನು ಹೊಕ್ಕ ಧೈರ್ಯದಿಂದ ಚರಿಸು ತ್ತಿದ್ದ ವಾಮದೇವನನ್ನು ತಿಂದು ಈದಿನ ತನ್ನ ಹಸಿವನ್ನು ಅಡಗಿಸಿಕೊಳ್ಳಬೇಕೆಂದು ಹಾ! ಹಾ! ಕಾರದಿಂದ ಹುಂಕರಿಸುತ್ತ ಅಡ್ಡವಾಗಿ ಬಂದು ವಾಮದೇವನನ್ನು ತಡೆದು ನಿಲ್ಲಿಸಿದನು. ಆಗ ಅತ್ಯುನ್ನತವಾದ ದೇಹವುಳ್ಳವನಾಗಿ ಕೆರಳಿಕಂಗೆಟ್ಟ ಮುಖವುಳ್ಳವನಾಗಿ ಕೋರೆದಾಡೆಗಳಿಂದ ಭಯಂಕರನಾಗಿ ದೀರ್ಘಬಾಹುವಾಗಿ ಘೋರವಾಗಿ ಆರ್ಭಟಿಸುತ್ತ ತನ್ನನ್ನು ನುಂಗುವುದಕ್ಕಾಗಿ ಬರುತ್ತಿದ್ದ ಬ್ರಹ್ಮ ರಾಕ್ಷಸನನ್ನು ಕಂಡರೂ ಭಯಪಡದೆ ಧೈರ್ಯದಿಂದ ವಾಮದೇವನು ನಿಂತ ಹೆಜ್ಜೆ ಯನ್ನು ಮೇಲಕ್ಕೆ ಎತ್ತದೆ ಸ್ತಬ್ಧನಾಗಿ ನಿಂತುಕೊಂಡನು ಬ್ರಹ್ಮರಾಕ್ಷಸನು ಆತುರ ದಿಂದ ಓಡಿಬಂದು ಆ ಶಿವಯೋಗಿಯನ್ನು ತಬ್ಬಿ ಹಿಡಿದು ತನ್ನ ಬಾಹುಗಳಿಂದ ಬಿಗಿದು ನಿಲ್ಲಿಸಿಕೊಂಡನು. ಬಳಿಕ ನಡೆದ ಆಶ್ಚರ್ಯವನ್ನು ಏನು ಹೇಳಲಿ! ಆ ಶಿವಯೋಗಿಯ ದೇಹಸ್ಪರ್ಶದಿಂದಲೂ, ಆತನ ಶರೀರದಲ್ಲಿ ವ್ಯಾಪಿಸಿದ್ದ ವಿಭೂತಿ ಯಪ್ರಭಾವದಿಂದಲೂ, ತೇಜೋಮಯವಾದ ರುದ್ರಾಕ್ಷಿಗಳ ಮಹಿಮೆಯಿಂ ದಲೂ, ಶಿವಮಂತ್ರ ಪ್ರಭಾವದಿಂದಲೂ, ಬ್ರಹ್ಮರಾಕ್ಷಸನ ಪಾಪರಾಶಿಯು ಸುಟ್ಟುಹೋಗಿ ಆತನಿಗೆ ಪೂರ್ವಜನ್ಮದ ಜಾತಿಸ್ಮರಣೆಯುಂಟಾಗಿ, ತನ್ನ ಕ್ರೂರ ರೂಪವನ್ನು ತೊರೆದು ಶಾಂತನಾದುದರಿಂದ ಆಹಾ! ಹೀಗಾಗುವುದರಲ್ಲಿ ಆಶ್ಚ ರ್ಯವೇನು? ಲೋಕದಲ್ಲಿ ಚಿಂತಾಮಣಿಯನ್ನು ಸೋಕಿದ ಲೋಹವು ಹೇಗೆ ಸುವರ್ಣವಾಗುವುದೊ! ಮಾನಸಸರೋವರವನ್ನು ಹೊಕ್ಕ ಕಾಗೆಗಳು ಹೇಗೆ ಹಂಸಪಕ್ಷಿಗಳಾಗುವುವೊ! ಅಮೃತಪಾನ ಮಾಡಿದ ಮನುಷ್ಯನು ಹೇಗೆ ದೇವತ್ವ

ವನ್ನು ಪಡೆಯುವನೊ ! ಜಂಬೂನದಿಯನ್ನು ಸೇರಿದ ಮಣ್ಣು ಹೇಗೆ ಹೊನ್ನಾಗುವುದೊ ! ಹಾಗೆ ಸತ್ಪುರುಷರ ಸಂಗಕ್ಕೆ ಸೇರಿದ ಪಾಪಾತ್ಮರು ಕ್ಷಣಕಾಲದಲ್ಲಿ ಪರಿಶುದ್ಧರಾಗಿ ತಮ್ಮ ಜನ್ಮಗುಣ ರೀತಿನೀತಿಗಳನ್ನೇ ಬೇರ್ಪಡಿಸಿಕೊಳ್ಳುವರು. ಎಲೈ ಋಷಿಗಳಿರಾ ! ಆದಕಾರಣ ಸತ್ಸಂಗವು ಲೋಕದಲ್ಲಿ ಮಹಾದುರ್ಲಭವಾದುದು. ಅಂಥ ಸತ್ಸಂಗಕ್ಕಾಗಿ ಪುಣ್ಯಾತ್ಮರು ತಮ್ಮ ತನುಮನಧನಂಗಳನ್ನು ನೀಗಿ ಅಲ್ಲಲ್ಲಿ ಸಂಚರಿಸುತ್ತಿರುವರು. ಹೀಗೆ ಶಿವಯೋಗಿಯ ಅಂಗಸ್ಪರ್ಶದಿಂದ ಬದಲಾಯಿಸಲ್ಪಟ್ಟ ಸುಗುಣವುಳ್ಳವನಾದ ಆ ಬ್ರಹ್ಮರಾಕ್ಷಸನು ತನ್ನ ಪೂರ್ವಜನ್ಮದ ಸ್ಮರಣೆಯುಳ್ಳವನಾಗಿ ಹಸಿವುತೃಷೆಗಳನ್ನು ನೀಗಿಕೊಂಡು ತೃಪ್ತನಾಗಿ; ಶಾಂತತೆಯನ್ನು ವಹಿಸಿ, ಸ್ವಸ್ಥಚಿತ್ತನಾಗಿ ಭಕ್ತಿಭಾವದಿಂದ ಆ ಶಿವಯೋಗಿಯ ಪಾದಗಳಿಗೆ ನಮಸ್ಕರಿಸಿ ಸಂಸಾರ ಭಯದಲ್ಲಿ ಸಿಕ್ಕಿ ತಾಪತ್ರಯಾಗ್ನಿಯಿಂದ ಸುಡಲ್ಪಟ್ಟ ಪ್ರಾಣಿವರ್ಗಕ್ಕೆ ಅಮೃತಪ್ರಾಯನಾಗಿ ಅರಣ್ಯದಲ್ಲಿ ಸಂಚರಿಸುತ್ತಿದ್ದ ಆ ಶಿವಯೋಗಿಯನ್ನು ಕುರಿತು ಇಂತೆಂದನು.

ಎಲೈ ಮಹಾಮಹಿಮನಾದ ಶಿವಯೋಗಿಯೇ ! ಭಕ್ತವತ್ಸಲನೇ ! ದಯಾಸಮುದ್ರನೇ ! ಅತಿಕ್ರೂರನಾಗಿ ಪಾಪಾತ್ಮನಾಗಿ ಸಕಲಲೋಕ ಭಯಂಕರನಾಗಿ ರಾಕ್ಷಸತ್ವವನ್ನು ಪಡೆದಿದ್ದ ನನ್ನ ಪಾಪರಾಶಿಗಳೆಲ್ಲ ನಿನ್ನ ಸಂದರ್ಶನ ಸಾನ್ನಿಧ್ಯ ಪ್ರಭಾವದಿಂದ ದೂರವಾಯಿತು. ನಾನು ಪರಿಶುದ್ಧನಾದೆ ನನ್ನ ದೇಹವೂ ಪವಿತ್ರವಾಯಿತು. ಕ್ರೂರತರವಾಗಿ ಕಲ್ಮಷಮಯವಾಗಿದ್ದ ನನ್ನ ಬುದ್ಧಿಯೂ ನಿರ್ಮಲವಾಗಿ ವಿಕಸಿತವಾಯಿತು. ಆಗಾಗ್ಗೆ ಆನಂದ ಪರಂಪರೆಗಳು ಉಕ್ಕಿ ಉಕ್ಕಿ ಹೊರಹೊಮ್ಮುತ್ತಿವೆ. ಭಯಂಕರವಾದ ದುಃಖಸಾಗರದಲ್ಲಿ ಮುಳುಗಿ ತೇಲುತ್ತಿರುವ ನನ್ನನ್ನು ಉದ್ಧರಿಸಿ ಕರುಣದಿಂದ ಕಾಪಾಡು ಎಂದು ಬೇಡಿಕೊಂಡನು. ಆಗ ದಯಾಪರನಾದ ಆ ವಾಮದೇವನು ಎಲೈ ಬ್ರಹ್ಮರಾಕ್ಷಸನೆ ! ನೀನು ಯಾರು ಏನುಕಾರಣ ಇಲ್ಲಿಗೆ ಬಂದೆ? ಘೋರವಾದ ಈ ಅರಣ್ಯದಲ್ಲಿ ಕ್ರೂರವಾದ ರೂಪವನ್ನು ಧರಿಸಿ ಅಲೆಯಲು ಕಾರಣವೇನು? ಹೇಳುವೆಯಾ? ಎಂದನು. ಆ ಮಾತನ್ನು ಕೇಳಿ ಬ್ರಹ್ಮರಾಕ್ಷಸನು ವಾಮದೇವನಿಗೆ ಕೈಮುಗಿದು ಕಾಲ್ಗೆರಗಿ ನಮಸ್ಕಾರಮಾಡಿ ಎದ್ದುನಿಂತು ಭಯಭಕ್ತಿಯುಳ್ಳವನಾಗಿ ಎಲೈಮಹಾಮುನಿಯೆ! ನನ್ನ ಪೂರ್ವಜನ್ಮದ ವೃತ್ತಾಂತವನ್ನು ನಿನಗೆ ಸಾಂಗವಾಗಿ ಹೇಳುವೆನು ! ನನಗೆ ಈ ಜನ್ಮ ಬರುವುದಕ್ಕಿಂತ ಮೊದಲು ಇಪ್ಪತ್ತೈದನೆಯಜನ್ಮದಲ್ಲಿ ಯವನರಾಜ್ಯಕ್ಕೆ ದೊರೆಯಾಗಿ ದುರ್ಜಯನೆಂಬ ಹೆಸರಿನಿಂದ ಹುಟ್ಟಿ ಮಾಡಬಾರದ ಅನೇಕ ದುರಾಚಾರ ದುರ್ಮಾರ್ಗಗಳಿಗೆ ಸಿಕ್ಕಿ ನಾನಾ ಕೋಟಲೆಯಿಂದ ಲೋಕವನ್ನು ನೋಯಿಸಿದೆನು. ಮುಖ್ಯವಾಗಿ ಬುದ್ಧಿಹೀನನಾಗಿ ದುರಹಂಕಾರಿಯಾಗಿ ಯುವ್ವನ ದೆಸೆಯುಲ್ಲಿದ್ದ ನಾನು ಯಾರನ್ನೂ ಲಕ್ಷ್ಯಮಾಡದೆ ಸ್ವೇಚ್ಛಾವಿಹಾರಿಯಾಗಿ

ದಿವ್ಯಸುಂದರಿಯರಾದ ಸ್ತ್ರೀಯರು ಎಲ್ಲಿದ್ದರೂ ಅವರನ್ನು ಹುಡುಕಿ ಹಿಡಿತರಿಸಿ ನಾನು ಅವರನ್ನು ಒಂದು ದಿನದಮಟ್ಟಿಗೆ ರಮಿಸಿ ಅನಂತರ ಅವರ ಗೊಡವೆಗೆ ಹೋಗದೆ ಸಾಯುವವರೆಗೂ ಅವರನ್ನು ಸೆರೆಯಲ್ಲಿಡುತ್ತಿದ್ದೆನು. ಹೀಗೆ ಪ್ರತಿ ದಿನವೂ ಹೊಸಹೊಸ ಹೆಂಡತಿಯರನ್ನು ಹುಡುಕಿಕೊಂಡು ಅವರೊಡನೆ ಒಂದು ರಾತ್ರಿ ಮಾತ್ರ ಸುಖದಲ್ಲಿದ್ದು ಅನಂತರ ಅವರನ್ನು ಸೆರೆಮನೆಗೆ ಕಳುಹಿಸುತ್ತಿದ್ದೆನು. ಹೀಗೆ ಸ್ವದೇಶ ಪರದೇಶಗಳೆರಡರಲ್ಲಿಯೂ ಆರಿಸಿಕೊಂಡು ಕರೆತಂದ ಅಂಗನೆಯರೊಡನೆ ರಮಿಸಿ ಅವರನ್ನು ಮತ್ತೆ ಕಣ್ಣೆತ್ತಿಯೂ ನೋಡದೆ ಇದ್ದಕಾರಣ ನನ್ನ ಅಂತಃಪುರವೆಲ್ಲ ಸ್ತ್ರೀಮಯವಾಗಿ, ಅನ್ನ ವಸ್ತ್ರಗಳಿಂದ ಅತಿಶಯಪೋಷಿತರಾಗಿ ಕೊಬ್ಬಿದ ಆ ಸ್ತ್ರೀಯರು ರತಿಸುಖವನ್ನು ಕಾಣದೆ ಹಂಬಲಿಸುತ್ತ ಅನ್ಯ ಪುರುಷ ಸಂಪರ್ಕಕ್ಕೂ ಅವಕಾಶಕೊಡದೆ ತಾನೂ ನಮ್ಮೊಡನೆ ರಮಿಸದೆ ಇರುವ ನನ್ನ ದುರ್ವೃತ್ತಿಯನ್ನು ಕಂಡು ಸಹಿಸಲಾರದೆ ಕೊರಗಿ ದುಃಖಪಡುತ್ತಿದ್ದರು.

ಹೀಗೆ ನಾನು ಮಾಡುತ್ತಿದ್ದ ಉರವಣೆ ಉಪದ್ರವಗಳಿಗೆ ಹೆದರಿ ನನ್ನ ರಾಜ್ಯದಲ್ಲಿದ್ದ ಬ್ರಾಹ್ಮಣರು ಕ್ಷತ್ರಿಯರು ವೈಶ್ಯರು ಶೂದ್ರರು ಮೊದಲಾಗಿ ನಾನಾ ಜಾತಿಯವರೂ ಆಗ್ರಹಯುಕ್ತರಾಗಿ ಈ ದುಷ್ಟರಾಜ್ಯದಲ್ಲಿರಬಾರದೆಂದು ತಮ್ಮ ತಮ್ಮ ಹೆಂಡತಿ ಮಕ್ಕಳನ್ನೂ ಬಂಧು ಬಳಗದವರನ್ನು ಕರೆದುಕೊಂಡು ನನ್ನ ರಾಜ್ಯವನ್ನು ಬಿಟ್ಟು ದೂರದೇಶಕ್ಕೆ ಹೋಗಿ ನೆಲೆಗೊಂಡರು. ಆದರೂ ನಾನು ನನ್ನ ದುರ್ಗುಣವನ್ನು ಬಿಡದೆ ಗಂಡನುಳ್ಳವಳನ್ನೂ, ಗಂಡನಿಲ್ಲದವಳನ್ನೂ, ಕನ್ಯೆಯನ್ನೂ, ಸೂತಕಿಯನ್ನೂ, ಸುಖಹೀನೆಯನ್ನೂ, ಸೌಂದರ್ಯವಿಲ್ಲದವಳನ್ನೂ, ಬಂಜೆಯನ್ನೂ, ಹಿತವಿಲ್ಲದವಳನ್ನೂ, ಗತಿಗೆಟ್ಟವಳನ್ನೂ, ವಿವೇಚನೆಯಿಲ್ಲದೆ ಕಾಮಾಂಧನಾಗಿ ರಮಿಸುತ್ತಿದ್ದೆನು. ಈ ದುರಾಚಾರದಿಂದ ನನಗೆ ಬಾಲ್ಯಾವಸ್ಥೆಯಲ್ಲಿರುವ ಪ್ರಾಯಕಾಲದಲ್ಲಿಯೆ ರಾಜಕ್ಷಯಾದಿಮಹಾರೋಗಗಳು ಪ್ರಾಪ್ತವಾದವು. ಅದೂ ಲಕ್ಷ್ಯವಿಲ್ಲದೆ ನಾನು ದಿನದಿನಕ್ಕೂ ಕಾಮಾತುರನಾಗಿ ಮುನ್ನೂರು ಬ್ರಾಹ್ಮಣ ವನಿತೆಯರನ್ನೂ, ನಾಲ್ಕುನೂರು ಕ್ಷತ್ರಿಯಸ್ತ್ರೀಯರನ್ನೂ, ಆರುನೂರು ವೈಶ್ಯ ಸ್ತ್ರೀಯರನ್ನೂ, ಸಾವಿರಮಂದಿ ಶೂದ್ರ ಸ್ತ್ರೀಯರನ್ನೂ ಬಲಾತ್ಕಾರದಿಂದ ಹಿಡಿತರಿಸಿ ಹೆಂಡತಿಯಾಗಿ ಮಾಡಿಕೊಂಡು ವೇಶ್ಯೆಯರನ್ನು ಲೆಕ್ಕವಿಲ್ಲದಂತೆ ಭೋಗಿಸಿದೆನು. ಬೇಡರ ಹೆಂಗಸರಲ್ಲಿ ಬೆರೆದಿದ್ದೆನು. ಬೆಸ್ತರನ್ನೂ ಬಲಾತ್ಕರಿಸಿ ಕೂಡಿದೆನು. ಅಗಸರವಳನ್ನೂ ಅಸಂಖ್ಯಾತವಾಗಿ ರಮಿಸಿದೆನು. ಇನ್ನೂ ದೊಂಬರು, ಚಂಡಾಲರು ಮೊದಲಾದವರ ಸ್ತ್ರೀಯರನ್ನು ನಾನು ಕೆಡಿಸಿದ ಕಾರಣ ನನ್ನ ತೇಜಸ್ಸು ಕುಗ್ಗಿ ವೀರ್ಯವು ಸುಟ್ಟು ಬೂದಿಯಾಯಿತು. ಈ ಕಾರಣದಿಂದ ನನಗೆ ಸಂತಾನ ವಿಲ್ಲದೆ ಹೋಯಿತು. ಕೆಲವು ಕಾಲದಮೇಲೆ ನಾನು ಸತ್ತುಹೋದೆನು. ಆಹಾ!

ಏನು ಹೇಳಲಿ ! ಲೋಕದಲ್ಲಿ ಪರಸ್ತ್ರೀ ಗಮನದಿಂದ ಇದ್ದ ಆಯುಸ್ಸು ಕ್ಷಯಿಸಿ ಹೋಗುವದು. ಅಪಕೀರ್ತಿಯು ಆವರಿಸುವುದು. ಭಾಗ್ಯವು ಬಯಲಾಗುವದು. ನರಕವು ಪ್ರಾಪ್ತವಾಗುವದು. ಪುಣ್ಯಲೋಕಗಳು ದೊರೆಯಲಾರವು. ಪಾಪಾತ್ಮನಾದ ಪರಸ್ತ್ರೀಗಾಮಿಯೊಬ್ಬನಲ್ಲದೆ ಸ್ವರ್ಗವಾಸಿಗಳಾಗಿದ್ದ ಅವನ ಪಿತೃಗಳೂ ಕೂಡ ನರಕಕ್ಕೆ ಬೀಳುವರು. ಆ ಬಳಿಕ ಯಮದೂತರು ನನ್ನನ್ನು ಎಳದುಕೊಂಡು ಹೋಗಿ ಧರ್ಮರಾಯನ ಬಳಿಗೆ ಬಿಟ್ಟರು. ಅವನು ಕೋಪಾಕ್ರಾಂತನಾಗಿ ನನ್ನನ್ನು ನೋಡಿ ಇವನನ್ನು ರೇತಃಕುಂಭವೆಂಬ ನರಕದಲ್ಲಿ ಹಾಕಿ ಬಿಡಿ ಎಂದು ಹೇಳಿದನು. ನಾನು ಅದರಂತೆ ಮೂವತ್ತು ಸಾವಿರ ವರ್ಷ ಆ ರೇತಃಕುಂಭದಲ್ಲಿ ಯಮಕಿಂಕರರ ಕೋಟಲೆಯನ್ನು ತಾಳಲಾರದೆ ಬಹು ಸಂಕಟಪಟ್ಟು ಬಳಿಕ ನನ್ನ ಪಾಪಶೇಷದಿಂದ ಪಿಶಾಚರೂಪದಿಂದ ಸಾವಿರ ಶಿಶ್ನಗಳುಳ್ಳವನಾಗಿ ಕಾಮಾತುರನಾದರೂ ಅನ್ನವಸ್ತ್ರಗಳಿಗೆ ಅನುಕೂಲವಿಲ್ಲದೆ ಹಸಿವು ತೃಷೆಗಳಿಂದ ಬಳಲಿ ಕುಗ್ಗಿ ಕೊರಗುತ್ತ ಸಾವಿರ ವರ್ಷದಿಂದ ಭಯಂಕರವಾದ ಈ ಅರಣ್ಯದಲ್ಲಿ ವಾಸಿಸುತ್ತಿರುವೆನು. ಎರಡನೆಯ ಜನ್ಮದಲ್ಲಿ ಲೋಕ ಭಯಂಕರವಾದ ಹೆಬ್ಬುಲಿಯಾಗಿ ಹುಟ್ಟಿದೆನು. ಮೂರನೆ ಹುಟ್ಟಿನಲ್ಲಿ ದೊಡ್ಡ ಸರ್ಪವಾದೆನು. ನಾಲ್ಕನೆ ಜನ್ಮದಲ್ಲಿ ತೋಳವಾಗಿ ಹುಟ್ಟಿದೆನು. ಐದನೆಯ ಜನ್ಮದಲ್ಲಿ ಹಂದಿಯಾದೆನು. ಆರನೆಯ ಜನ್ಮದಲ್ಲಿ ಕೋತಿಯಾಗಿದ್ದೆನು. ಏಳನೆಯ ಜನ್ಮದಲ್ಲಿ ಕೋಳಿಯಾದೆನು. ಎಂಟನೆಯ ಜನ್ಮದಲ್ಲಿ ನರಿಯಾದೆನು. ಒಂಭತ್ತನೆಯ ಜನ್ಮದಲ್ಲಿ ಕಿರುಬನಾದೆನು. ಹತ್ತನೆಯ ಜನ್ಮದಲ್ಲಿ ಹುಲ್ಲೆಯಾದೆನು. ಹನ್ನೊಂದರಲ್ಲಿ ಕೊಕ್ಕರೆಯಾದೆನು. ಹನ್ನೆರಡರಲ್ಲಿ ಹದ್ದಾಗಿ ಹುಟ್ಟಿದೆನು. ಹದಿಮೂರರಲ್ಲಿ ಮುಂಗಸಿಯಾದೆನು. ಹದಿನಾಲ್ಕರಲ್ಲಿ ಕಾಗೆಯಾಗಿ, ಹದಿನೈದನೆಯ ಜನ್ಮದಲ್ಲಿ ಕರಡಿಯಾಗಿ, ಹದಿನಾರರಲ್ಲಿ ಕಾಡುಕೋಳಿಯಾಗಿ, ಹದಿನೇಳರಲ್ಲಿ ಕತ್ತೆಯಾಗಿ, ಹದಿನೆಂಟರಲ್ಲಿ ಕಪ್ಪೆಯಾಗಿ, ಹತ್ತೊಂಭತ್ತರಲ್ಲಿ ಬೆಕ್ಕಾಗಿ ಹುಟ್ಟಿ, ಇಪ್ಪತ್ತನೆಯ ಜನ್ಮದಲ್ಲಿ ಆಮೆಯಾಗಿ ಹುಟ್ಟಿದೆನು. ಇಪ್ಪತ್ತೊಂದನೆ ಜನ್ಮದಲ್ಲಿ ಮೀನಾಗಿ, ಇಪ್ಪತ್ತೆರಡನೆ ಜನ್ಮದಲ್ಲಿ ಹುಲಿಯಾಗಿ, ಇಪ್ಪತ್ತಮೂರನೆ ಜನ್ಮದಲ್ಲಿ ಗೂಬೆಯಾಗಿ, ಇಪ್ಪತ್ತನಾಲ್ಕನೆಯ ಜನ್ಮದಲ್ಲಿ ಕಾಡಾನೆಯಾಗಿ ಹುಟ್ಟಿ, ಕಷ್ಟನಷ್ಟಗಳನ್ನು ಅನುಭವಿಸಿ ಸಾಕಾಗಿ ಇಪ್ಪತ್ತೈದನೆಯದಾದ ಈ ಜನ್ಮದಲ್ಲಿ ಬ್ರಹ್ಮರಾಕ್ಷಸನಾಗಿ ಹುಟ್ಟಿ ಈ ಅರಣ್ಯದಲ್ಲಿ ಅನ್ನಾಹಾರಗಳಿಲ್ಲದೆ ಕೊರಗಿ ನರಳುತ್ತಿದ್ದೆನು. ದೈವವಶಾತ್ ಈ ಮಾರ್ಗವಾಗಿ ಬಂದ ನಿನ್ನನ್ನು ಕಂಡು ಕೊಂದು ತಿನ್ನಬೇಕೆಂಬ ಆಸೆಯಿಂದ ನಿನ್ನನ್ನು ತಬ್ಬಿಕೊಳ್ಳಲು ನಿನ್ನ ದೇಹ ಸ್ಪರ್ಶ ಸಂಪರ್ಕದಿಂದ ನನ್ನ ಪಾಪರಾಶಿಗಳೆಲ್ಲ ಸುಟ್ಟು ಬೂದಿಯಾಗಿ ನನಗೆ ಜ್ಞಾನೋದಯವಾಯಿತು. ಆದಕಾರಣ ನನ್ನ ಪೂರ್ವಜನ್ಮಗಳ ವೃತ್ತಾಂತವನ್ನು ನಿನಗೆ ವಿವ

ರಿಸಿ ಹೇಳಿದೆನು ಈಗ ನನಗೆ ಪಶ್ಚಾತ್ತಾಪವುಂಟಾಯಿತು. ನಾನು ಧನ್ಯನಾದೆನು ಎಲೈ ಮಹಾತ್ಮನೆ ! ನಿನಗೆ ಇಂಥ ಅತಿಶಯವಾದ ಪ್ರಭಾವವು ಏತರಿಂದ ಉಂಟಾಯಿತು. ಶಿವಭಕ್ತಿಯಿಂದಲೋ ? ಅಥವ ಶಿವಧ್ಯಾನದಿಂದಲೊ? ಇಲ್ಲದೆ ಶಿವಪೂಜೆಯಿಂದಲೊ ? ತೀರ್ಥಯಾತ್ರೆಯಿಂದಲೊ ? ವ್ರತಾಚರಣೆಯಿಂದಲೊ ? ಅಥವ ಮಂತ್ರಶಕ್ತಿಯಿಂದಲೊ ? ಈ ಪುಣ್ಯಕ್ಷೇತ್ರರೂಪದ ಪ್ರಭಾವವು ನಿನಗೆ ಹೇಗೆ ಉಂಟಾಯಿತು ? ದೀನನಾಗಿ ಬೇಡಿಕೊಳ್ಳುತ್ತಿರುವ ಶಿಷ್ಯನಾದ ನನಗೆ ಕರುಣಿಸಿ ಹೇಳು ಎಂದು ಕೇಳಲು ವಾಮದೇವನು ಬ್ರಹ್ಮರಾಕ್ಷಸನನ್ನು ಕುರಿತು ಇಂತೆಂದನು.

ಎಲೈ ಬ್ರಹ್ಮರಾಕ್ಷಸನೆ ! ನೀನು ಕೇಳುವ ಪ್ರಶ್ನೆಯು ಬಹು ಶ್ರೇಷ್ಠವಾದುದು. ನನ್ನ ಯೋಗ್ಯತೆಯನ್ನು ಪರೀಕ್ಷಿಸಬೇಕೆಂದು ನೀನು ಪ್ರಶ್ನೆಮಾಡುತ್ತಿರಬಹುದು. ಆದರೂ ಚಿಂತೆಯಿಲ್ಲ ಮಹಾಪಾತಕಾದಿಗಳನ್ನು ಮಾಡಿ ದುರ್ಗತಿಗೆ ಸಂದ ನರಕವಾಸಿಗಳನ್ನೂ ಉದ್ಧರಿಸುವ ಈಮಹಾಮಹಿಮೆಯು ನನಗೆ ವಿಭೂತಿ ಧಾರಣ ಮಂತ್ರದಿಂದ ಲಭಿಸಿತಲ್ಲದೆ ಮತ್ತೊಂದರಿಂದ ಅಲ್ಲ. ಆದಕಾರಣ ಭಸ್ಮೋದ್ಧೂಳಿತವಾದ ನನ್ನ ಅವಯವಗಳನ್ನು ಸೋಕಿದ ಮಾತ್ರದಿಂದಲೆ ನಿನ್ನ ಪಾಪರಾಶಿಗಳು ಸುಟ್ಟುಹೋಗಿ ನೀನು ನಿರ್ಮಲನಾದೆ ಆ ಬಳಿಕ ನಿನಗೆ ಪೂರ್ವ ಜನ್ಮದ ಸ್ಮರಣೆಯುಂಟಾಯಿತು. ಈ ಭಸ್ಮಪ್ರಭಾವವು ಪರಶಿವನಿಗೊಬ್ಬನಿಗಲ್ಲದೆ ಅನ್ಯರಿಗೆ ಯಾರಿಗೂ ತಿಳಿಯದು. ಪರಮೇಶ್ವರನ ಮಹಾಮಹಿಮೆಗಳು ಹೇಗೆ ತಿಳಿಯಲಗಮ್ಯವಾಗಿರುವುವೊ ಹಾಗೆ ಈ ಭಸ್ಮಪ್ರಭಾವವೂ, ತಿಳಿಯಲಶಕ್ಯವಾದುದು. ಈ ವಿಷಯದಲ್ಲಿ ಅಪೂರ್ವವಾದ ಒಂದಾನೊಂದು ಇತಿಹಾಸವುಂಟು. ನಿನಗೋಸ್ಕರವಾಗಿ ಅದನ್ನು ಸಂಕ್ಷೇಪವಾಗಿ ಹೇಳುವೆನು ಕೇಳು:— ಪೂರ್ವಕಾಲದಲ್ಲಿ ದ್ರಾವಿಡದೇಶದಲ್ಲಿ ನಿನ್ನ ಹಾಗೆ ಮಹಾಪಾಪಿಷ್ಠನಾಗಿ ಧರ್ಮಾಧರ್ಮಂಗಳನ್ನು ಅರಿಯದೆ ಮೂಢನಾಗಿ ಕಳ್ಳತನದಿಂದ ದೂಷಿಸಲ್ಪಟ್ಟ ನಡತೆಯುಳ್ಳವನಾದ ಒಬ್ಬ ಬ್ರಾಹ್ಮಣನಿದ್ದನು. ಅವನು ಸರ್ವದಾ ಶೂದ್ರಸ್ತ್ರೀಯರನ್ನೆ ಹುಡುಕಿಕೊಂಡು ಹೋಗಿ ಅವರೊಡನೆ ರಮಿಸುತ್ತಿದ್ದ ಕಾರಣ ಆತನು ಒಂದಾನೊಂದು ದಿನ ಒಬ್ಬಶೂದ್ರನ ಮನೆಗೆ ಹೋಗಿ ಅವನ ಹೆಂಡತಿಯೊಡನೆ ಕ್ರೀಡಿಸಬೇಕೆಂದು ಹೊಂಚು ಹಾಕುತ್ತಿದ್ದನು. ಈ ಸುಳಿವನ್ನು ತಿಳಿದು ಆ ಶೂದ್ರನು ಅವನನ್ನು ಹೊಡೆದು ಕೊಂದು ಊರ ಹೊರಕ್ಕೆ ಎಳೆದು ಹಾಕಿದನು. ದಿಕ್ಕಿಲ್ಲದೆ ಅಸಂಸ್ಕಾರಿಯಾಗಿ ಬಿದ್ದಿರುವ ಆ ಬ್ರಾಹ್ಮಣನ ಶವದಮೇಲೆ ಭಸ್ಮದಲ್ಲಿ ಹೊರಳಾಡಿ ಎದ್ದು ಬಂದ ಒಂದು ನಾಯಿ ತಿರುಗಾಡಿ ತನ್ನ ಕಾಲಿನಲ್ಲಿದ್ದ ವಿಭೂತಿಯನ್ನು ಆ ಬ್ರಾಹ್ಮಣನ ಶವದ ಹಣೆಗೆ ಬಳಿದು ಎಲ್ಲಿಗೊ ಹೊರಟುಹೋ

ಯಿತು. ಬಳಿಕ ಯಮದೂತರು ಬಂದು ಅವನನ್ನು ಹಿಡಿದು ಯಮನ ಬಳಿಗೆ ಕರೆದುಕೊಂಡು ಹೋಗಿ ನರಕದಲ್ಲಿ ಕೆಡಹುತ್ತಿದ್ದರು.

ಅಷ್ಟು ಹೊತ್ತಿಗೆ ಸರಿಯಾಗಿ ವಿಭೂತಿ ರುದ್ರಾಕ್ಷಗಳಿಂದ ಅಲಂಕೃತರಾಗಿ ಶಿವನಾಮವನ್ನು ಜಪಿಸುತ್ತಿದ್ದ ಶಿವದೂತರು ಅಲ್ಲಿಗೆ ಬಂದು ಯಮನಾಳುಗಳನ್ನು ತಡೆದು ನಿಲ್ಲಿಸಿ, ಆ ಬ್ರಾಹ್ಮಣನನ್ನು ವಿಮಾನದಲ್ಲಿ ಕೂರಿಸಿಕೊಂಡು ಶಿವಲೋಕಕ್ಕೆ ಹೋಗುತ್ತಿದ್ದರು. ಇದನ್ನು ತಿಳಿದು ಯಮನು ತಾನೆ ಅಲ್ಲಿಗೆ ಬಂದು ಎಲೈ ಶಿವದೂತರಿರಾ! ಇದೇನು ಆಶ್ಚರ್ಯ? ಪರಸ್ತ್ರೀ ಗಮದಾದಿ ಮಹಾ ಪಾತಕಗಳನ್ನು ಮಾಡಿ ಪರಮ ಪಾಪಿಷ್ಠನಾಗಿರುವ ಈ ಬ್ರಾಹ್ಮಣನನ್ನು ಹೇಗೆ ಶಿವಲೋಕಕ್ಕೆ ಕರೆದುಕೊಂಡು ಹೋಗುವಿರಿ! ಎಂದು ಕೇಳಲು, ಶಿವಭಕ್ತಿ ಸಂಪನ್ನರಾದ ಆ ಶಿವ ಕಿಂಕರರು ಯಮನನ್ನು ಲಕ್ಷ್ಯಮಾಡದೆ ಎಲೈ ಧರ್ಮರಾಯನೆ! ಕೇಳು! ನಿನಗೆ ಇನ್ನೂ ಶಿವಮಹಿಮೆಯು ಶಿವ ಸಮಯವೂ, ಶಿವ ಚಿಹ್ನೆಗಳೂ ತಿಳಿಯಲರಿದಾಗಿದೆ, ಈ ಬ್ರಾಹ್ಮಣನ ಹಣೆಯಲ್ಲಿಯೂ ಭುಜಗಳಲ್ಲಿಯೂ, ಎದೆಯಲ್ಲಿಯೂ ತೋಳುಗಳಲ್ಲಿಯೂ ವಿಭೂತಿಯು ಹೊಳೆಯುತ್ತಿರುವುದರಿಂದ ನಾವು ಇವನನ್ನು ಶಿವಲೋಕಕ್ಕೆ ಕರೆದುಕೊಂಡು ಹೋಗುತ್ತಿದ್ದೇವೆ ನಮ್ಮನ್ನು ತಡೆದು ನಿಲ್ಲಿಸುವುದಕ್ಕೆ ನಿನಗೆ ಅಧಿಕಾರವಿಲ್ಲ, ಶಿವನಲ್ಲಿ ಭಕ್ತಿಯುಳ್ಳವನೂ, ಶಿವನನ್ನು ಧ್ಯಾನಿಸುವವನೂ, ಶಿವನನ್ನು ಪೂಜಿಸುವವನೂ, ಶಿವನ ಹೆಸರುಳ್ಳವನ್ನೂ, ವಿಭೂತಿ ರುದ್ರಾಕ್ಷಿಗಳನ್ನು ಧರಿಸಿದವನೂ, ಇವರೆಲ್ಲರೂ ಎಂಥ ಪಾಪಿಷ್ಠರಾದರೂ ಅವರಿಗೆ ಶಿವಲೋಕ ಪ್ರಾಪ್ತಿಯಾಗುವುದು. ಈ ಅರ್ಥದಲ್ಲಿ ಸಂಶಯವಿಲ್ಲ ಎಂದು ಹೇಳಿ ಸರ್ವರೂ ನೋಡುತ್ತಿದ್ದ ಹಾಗೆ ಶಿವದೂತರು ಆ ಬ್ರಾಹ್ಮಣನನ್ನು ಶಿವಲೋಕಕ್ಕೆ ಕರೆದುಕೊಂಡು ಹೋದರು. ಆದಕಾರಣ ಪರಮಪವಿತ್ರವಾಗಿ ಸಕಲ ಪಾಪಗಳನ್ನು ಸಂಹಾರಮಾಡುವ ಸಾಮರ್ಥ್ಯವುಳ್ಳ ಈ ಭಸ್ಮವನ್ನು ನಾನು ನಿತ್ಯದಲ್ಲಿಯೂ ಧರಿಸುತ್ತಿದ್ದೇನೆ. ಎಂದು ಹೇಳಿದ ಬಳಿಕ ಆ ಬ್ರಹ್ಮರಾಕ್ಷಸನು ಆ ವಿಭೂತಿಯ ಮಹಿಮೆಯನ್ನು ಇನ್ನೂ ವಿಶದವಾಗಿ ಕೇಳಿ ತಿಳಿದುಕೊಳ್ಳಬೇಕೆಂಬ ಕುತೂಹಲದಿಂದ ಕೂಡಿ ಮರಳಿ ವಾಮದೇವನನ್ನು ಕುರಿತು ಸ್ವಾಮಿ! ತಾವು ಹೇಳಿದುದು ಬಹಳ ಒಳ್ಳೆಯದಾಯಿತು. ನಾನೂ ಧನ್ಯನಾದೆನು. ನಾನು ಪೂರ್ವಜನ್ಮದಲ್ಲಿ ಅಧಿಪತಿಯಾಗಿ ಆಳುತ್ತಿದ್ದಾಗ ಒಂದಾನೊಂದು ಸಮಯದಲ್ಲಿ ಬೆಳೆ ಸಹಿತವಾದ ಭೂಮಿಯನ್ನು ಒಬ್ಬ ಬ್ರಾಹ್ಮಣನಿಗೆ ದಾನಮಾಡಿದ್ದೆನು. ಆ ಪುಣ್ಯವಿಶೇಷದಿಂದ ನನಗೆ ಈ ಜನ್ಮದಲ್ಲಿ ನಿನ್ನ ಸಂದರ್ಶನ ದೊರೆಯಿತು. ಕರುಣಾಳುವಾದ ನೀನು ಈ ರಾಕ್ಷಸ ಜನ್ಮವನ್ನು ಪರಿಹರಿಸಿ ನನ್ನನ್ನು ಉದ್ಧರಿಸು! ಪೂರ್ವದಲ್ಲಿ ನನ್ನ ಹಸ್ತದಿಂದ ಭೂದಾನವನ್ನು ಪರಿಗ್ರಹಿಸಿದ ಒಬ್ಬ ಬ್ರಾಹ್ಮಣನು ಇಲ್ಲಿಗೆ ಇಪ್ಪತ್ತೈದನೆಯ ಜನ್ಮದಲ್ಲಿ ನೀನು ಒಬ್ಬ ಯೋಗಿಯ

ಪ್ರಭಾವದಿಂದ ಸಂಸಾರಬಂಧನದಿಂದ ಚ್ಯುತನಾಗಿ ಮುಕ್ತನಾಗುವೆ ಎಂದು ಹೇಳಿದ್ದನು. ಆತನು ಹೇಳಿದ ಮಾತು ಈಗ ಫಲಿಸಿತು. ನನ್ನ ಪುಣ್ಯ ವಿಶೇಷವು ವೃದ್ಧಿಯಾಯಿತು. ಹಾಗಿಲ್ಲವಾದರೆ ಜನಸಂಚಾರವೇ ಇಲ್ಲದ ಈ ಗೊಂಡಾರಣ್ಯ ದಲ್ಲಿ ನಿನ್ನನ್ನು ನೋಡುತ್ತಿದ್ದುದು ಹೇಗೆ? ಇದೆಲ್ಲ ಕಾಲಮಹಿಮೆ ಪುಣ್ಯದಪರಿ ಪಾಕವೇ ಸರಿ! ಆದಕಾರಣ ದಯಾಳುವಾದ ನೀನು ಸಮಂತ್ರಕವಾಗಿ ವಿಭೂತಿ ಧಾರಣಕ್ರಮವನ್ನು ನನಗೆ ಉಪದೇಶಿಸಿ ಈ ನನ್ನ ರಾಕ್ಷಸಜನ್ಮವನ್ನು ಹೋಗ ಲಾಡಿಸಿ ನನ್ನನ್ನು ಉದ್ಧರಿಸು! ಕಾಪಾಡು! ಕಾಪಾಡು! ಇದೂ ಅಲ್ಲದೆ ಎಲೈ ವಾಮದೇವನೆ! ವಿಭೂತಿ ಎಂದರೇನು? ಇದನ್ನು ಹೇಗೆ ಧರಿಸಿಕೊಳ್ಳಬೇಕು? ಇದಕ್ಕೆ ಮಂತ್ರವಾವುದು? ದೇಶವಾವುದು? ಕಾಲವಾವುದು? ಎಂಬು ದೊಂದೂ ನನಗೆ ತಿಳಿಯದು, ಮಹಾತ್ಮರಾದ ನಿನ್ನಂಥ ಪುಣ್ಯಪುರುಷರು ಸದಾ ಕಲ್ಪವೃಕ್ಷದೋಪಾದಿಯಲ್ಲಿ ಪರೋಪಕಾರ ಮಾಡುತ್ತಿರುವರೆ ಹೊರತು ಪರರಿಂದ ತಮಗೆ ಕಿಂಚಿತ್ತಾದರೂ ಉಪಕಾರವನ್ನು ಬಯಸತಕ್ಕವರಲ್ಲ, ಎಲೈ ಋಷಿ ವರ್ಯನೆ! ನನ್ನ ಪ್ರಾರ್ಥನೆಯನ್ನು ಲಾಲಿಸುನನ್ನಲ್ಲಿ ದಯೆಮಾಡು ಎಂದು ಬೇಡಿ ಕೊಳ್ಳಲು, ದಯಾಮಯನಾದ ವಾಮದೇವನು ಪಶ್ಚಾತ್ತಾಪಯುಕ್ತನಾಗಿ ಕನಿ ಕರದಿಂದ ಆ ಬ್ರಹ್ಮರಾಕ್ಷಸನನ್ನು ಕುರಿತು ವಿಭೂತಿಧಾರಣ ಮಹಿಮೆಯನ್ನು ವಿಸ್ತರಿಸಿ ಹೇಳತೊಡಗಿದನೆಂದು ಸೂತಪುರಾಣಿಕನು ಶೌನಕಾದಿ ಮಹಾಮುನಿ ಗಳಿಗೆ ಹೇಳುತ್ತಿದ್ದನೆಂಬಲ್ಲಿಗೆ,

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮವೀರ
ನರಪತಿ ಬಿರುದೆಂತೆಂಬರ ಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ
ಗಂಡಭೇರುಂಡಾದಿನಾನಾ ಬಿರುದಾಂಕಿತ ಯಾದವಕುಲತಿಲಕ ಆತ್ರೇಯ
ಸಗೋತ್ರ ಅಶ್ವಲಾಯನಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರ
ರಾಜಒಡೆಯರ ಪೌತ್ರ ನರಸರಾಜಒಡೆಯರ ಪುತ್ರರಾದ ಶ್ರೀಇಮ್ಮಡಿ
ಚಾಮರಾಜ ಒಡೆಯರವರು ಕರ್ಣಾಟಕ ಭಾಷೆಯಲ್ಲಿ ವಿರಚಿಸಿದ
ಸ್ಕಾಂದಪುರಾಣೋಕ್ತಮಾದ ಬ್ರಹ್ಮೋತ್ತರಖಂಡದಲ್ಲಿ,
ವಾಮದೇವನ ಮಹಿಮೆಯಿಂದ ಬ್ರಹ್ಮರಾಕ್ಷಸನಿಗೆ ಪೂರ್ವಜನ್ಮ
ಜ್ಞಾನವುಂಟಾಗಿ ನಿಜ ವೃತ್ತಾಂತವನ್ನು ತಿಳಿಸಿದ ಬಳಿಕ
ಭಸ್ಮಪ್ರಭಾವವು ಉಪದೇಶವಾದಿಲ್ಲಿಗೆ,
೧೫ನೆಯ ಅಧ್ಯಾಯಕ್ಕೆ ಮಂಗಳಮಸ್ತು.



# ಭಸ್ಮ ತ್ರಿಪುಂಡ್ರ ಮಹಿಮೆ.

## ಹದಿನಾರನೆಯ ಲ್ಲಧ್ಯಾಯ.

ಆ ಬಳಿಕ ಸೂತಮಹಾಮುನಿಯು ಶೌನಕಾದಿ ಋಷಿವರ್ಯರನ್ನು ಕುರಿತು ಮರಳಿ ಅವರಿಗೆ ವಿಭೂತಿ ಧಾರಣ ಮಹಿಮೆಯನ್ನು ವಿಸ್ತರಿಸಿ ಹೇಳುವುದಕ್ಕೆ ಆರಂಭಿಸಿದನು. ಅದು ಹೇಗೆಂದರೆ:—

ಎಲೈ ಋಷಿವರ್ಯರಿರಾ! ಲಾಲಿಸಿ, ಈ ಪ್ರಕಾರದಲ್ಲಿ ಬ್ರಹ್ಮರಾಕ್ಷಸನಿಂದ ಪ್ರಾರ್ಥಿಸಲ್ಪಟ್ಟು ಸಂತುಷ್ಟನಾದ ವಾಮದೇವ ಮಹರ್ಷಿಯು ಶಿಷ್ಯನಲ್ಲಿ ದಯೆಯುಳ್ಳವನಾಗಿ ಆವನಿಗೆ ವಿಭೂತಿಧಾರಣ ಮಹಿಮೆಯನ್ನು ಸವಿಸ್ತಾರವಾಗಿ ಹೇಳಲಾರಂಭಿಸಿದನು. ಎಲೈ ಬ್ರಹ್ಮರಾಕ್ಷಸನೆ! ನೀನು ಆಶೆಯಿಂದ ಕೇಳಿದ ಪ್ರಶ್ನೆಗಳಿಗೆ ಈಗ ಸದುತ್ತರವನ್ನು ಹೇಳುವೆನು ಕೇಳು. ಪೂರ್ವಕಾಲದಲ್ಲಿ ಗೈರಿಕಾದಿ ಸಪ್ತಧಾತುಗಳಿಂದ ಕೂಡಿ ನಾನಾ ಮೃಗಜಾತಿಗಳಿಂದ ಆವೃತವಾಗಿ ಬಗೆ ಬಗೆಯ ಫಲಪುಷ್ಪ ಮನೋಹರವಾದ ವೃಕ್ಷಸಮೂಹದಿಂದ ವ್ಯಾಪ್ತವಾಗಿ ಕಂಗೊಳಿಸುತ್ತಿದ್ದ ಮಂದರ ಪರ್ವತದ ಶಿಖರಾಗ್ರದಲ್ಲಿ ವಿಶ್ವರೂಪನಾಗಿ ಭೂತಪತಿಯಾಗಿ, ದೇವದೇವನಾಗಿ ಕಾಲಾಗ್ನಿರುದ್ರನೆಂಬ ಹೆಸರಿನಿಂದ ಕರೆಸಿಕೊಳ್ಳಲ್ಪಡುವ ಪರಮೇಶ್ವರನು ಒಂದಾನೊಂದುದಿನ ಸಭೆಯನ್ನು ಹೂಡಿ ಬಹುಕೋಟಿ ರುದ್ರಗಣಗಳ ಮಧ್ಯದಲ್ಲಿ ವಿರಾಜಿಸುತ್ತಿದ್ದ ರತ್ನಸಿಂಹಾಸನದಲ್ಲಿ ಕುಳಿತು ಪಾರ್ವತೀ ಸಮೇತನಾಗಿ ಒಡ್ಡೋಲಗದಲ್ಲಿದ್ದನು. ಆಗ ಇಂದ್ರ, ಅಗ್ನಿ, ಯಮ, ನಿರಋತಿ, ವರುಣ, ವಾಯು, ಕುಬೇರ, ಈಶಾನಾದಿ ಅಷ್ಟದಿಕ್ಪಾಲಕರೂ, ಸಪ್ತಋಷಿ, ಸಪ್ತಮಾತೃಕೆಯರೂ, ಅಷ್ಟವಸುಗಳೂ, ನವಬ್ರಹ್ಮರೂ, ದಶವಿಧ ಧರ್ಮದೇವತೆಗಳೂ, ಏಕಾದಶರುದ್ರರೂ, ದ್ವಾದಶಾದಿತ್ಯರೂ, ತ್ರಯೋದಶ ವಿಶ್ವೇದೇವತೆಗಳು ಮೊದಲಾಗಿ ಮೂವತ್ತುಮೂರು ಕೋಟಿ ದೇವತೆಗಳಿಂದಲೂ, ಚಿತ್ರಸೇನಾದಿ ಗಂಧರ್ವರಿಂದಲೂ, ಸಿದ್ಧ ಕಿನ್ನರ ಕಿಂಪುರುಷ ವಿದ್ಯಾಧರರಿಂದಲೂ, ಚಾರಣ ಖೇಚರ ಶೇಷ ವಾಸುಕಿ ಮೊದಲಾದವರಿಂದಲೂ, ವಶಿಷ್ಠಾದಿ ಬ್ರಹ್ಮಋಷಿಗಳಿಂದಲೂ, ನಾರದಾದಿ ದೇವರ್ಷಿಗಳಿಂದಲೂ ಸನಕಾದಿಮಹಾಮುನಿಗಳಿಂದಲೂ, ಕೂಡಿ ಶೋಭಾಯಮಾನವಾಗಿದ್ದಿತು. ಅಂಥ ಮಹಾಸಭೆಯಲ್ಲಿ ಪ್ರತ್ಯಕ್ಷ ಪ್ರಮಾಣವೊ ಎನ್ನುವಂತೆ ಸದ್ಭಕ್ತಿ ಸಂಪನ್ನರಾದ ಮಹಾಕಾಳಿ, ಮಹಾನಂದಿ, ವೀರಭದ್ರ, ಶಂಖಕರ್ಣ, ಘಂಟಾಕರ್ಣ, ಮಣಿಭದ್ರ, ವೃಕೋದರ, ಕುಮುದೋದರ, ಕುಂಡಲೋದರ, ಮಹೋದರ, ವಿಷ್ಣುಕಟಕ, ಕರ್ಣಧಾರ, ಕೇತು, ಭೃಂಗಿರಿಟ ಮೊದಲಾದ ಶಿವಗಣಗಳು, ಅನೇಕ ಕೋಟಿ ಆಭರಣಗಳನ್ನು ಧರಿಸಿಕೈಮುಗಿದು ಕಾಲ್ಗೆರಗಿ ಭಕ್ತಿಯಿಂದ ಪರ

ಶಿವನನ್ನು ಸೇವಿಸುತ್ತಿದ್ದರು. ಆಗ ಅಲ್ಲಿ ಹರಿರುದ್ರಬ್ರಹ್ಮಾದಿಗಳು ವೇತ್ರಹಸ್ತ ರಾಗಿ ಅಲ್ಲಿಗಲ್ಲಿಗೆ ತಿರುಗಾಡುತ್ತ ಸಭಾಗಾಂಭೀರ್ಯವನ್ನು ಕಾಪಾಡುತ್ತಿದ್ದರು.

ಹೀಗೆ ಒಪ್ಪುತ್ತಿದ್ದ ಶಿವಸಭೆಯಲ್ಲಿದ್ದವರೆಲ್ಲರೂ ಹಣೆಯಲ್ಲಿ ಭಸ್ಮ ತ್ರಿಪುಂಡ್ರವನ್ನು ಧರಿಸಿಕೊಂಡು, ಮುಖದಲ್ಲಿ ಶಿವಪಂಚಾಕ್ಷರಿಯನ್ನು ಜಪಿಸುತ್ತ ಬಗೆಬಗೆಯಾದ ಆಯುಧಗಳನ್ನು ಹಿಡಿದು ನಾನಾ ವಾಹನಗಳುಳ್ಳವರಾಗಿ, ಮಹೋನ್ನತರಾಗಿ, ಮಹಾಬಲಶಾಲಿಗಳಾಗಿ ವಿಚಿತ್ರವಾದ ವಿಲಾಸಗಳಿಂದ ಶೋಭಿಸುತ್ತಿದ್ದರು. ಅವರಲ್ಲಿ ಕೆಲವರು ನೀಲವರ್ಣದವರು, ದಾಸವಾಳದಹೂವಿ ನಂತೆ ಕೆಂಪಾದವರು ಕೆಲವರು, ಹಸುರುಬಣ್ಣದವರು ಕೆಲವರು, ಹಳದಿಬಣ್ಣದ ವರು ಹಲಬರು, ಮಾಸಲು ಬಿಳುಪಿನ ಬಣ್ಣದವರು ಕೆಲವರು, ಕೆಲವರು ಕೆಂಪು ಮಿಶ್ರವಾದ ನೀಲವರ್ಣದವರು. ವಿಚಿತ್ರವಾದ ವರ್ಣವುಳ್ಳವರು ಕೆಲವರು, ಮಹೋನ್ನತರಾಗಿ ಕುಳಿತಿರಲು ಸಿಂಹದಂತೆ ಮುಖವುಳ್ಳವರು, ವ್ಯಾಘ್ರಮುಖ ದಂತೆ ಮುಖವುಳ್ಳವರು, ಹಂದಿಯಂತೆ ಮುಖವುಳ್ಳವರು, ಕರಡಿಯಂತಿರುವವರು ಶರಭದಂತೆ ಆಕಾರವುಳ್ಳವರು, ಗಂಡಭೇರುಂಡದಂತಿದ್ದವರು ಕೆಲವರೂ, ಏಕ ಮುಖರಾಗಿ ಕೆಲವರು, ದ್ವಿಮುಖದಿಂದ ಕೆಲವರು, ತ್ರಿಮುಖದಿಂದ ಕೆಲವರು, ನಾಲ್ಕು ಮೊಗವುಳ್ಳವರು ಕೆಲವರು, ಐದು ಮುಖದವರು ಕೆಲವರು, ಆರುಮುಖ ಏಳುಮುಖವುಳ್ಳವರು ಅವರಂತೆ ಶತ ಸಹಸ್ರ ಲಕ್ಷ ಮುಖಗಳಿಂದ ಕೂಡಿದವರು ಮುಖಹೀನರಾದವರು, ಏಕಹಸ್ತದಿಂದಲೂ, ದ್ವಿಹಸ್ತಗಳಿಂದ ತ್ರಿಹಸ್ತ ಚತು ರ್ಹಸ್ತ, ಪಂಚಹಸ್ತ ಮೊದಲಾಗಿ ಲಕ್ಷ ಹಸ್ತಗಳುಳ್ಳವರೂ, ಅದರಿಂದ ಒಂದು ಕೂಡಿ ಲಕ್ಷದ ವರೆಗೆ ಕಾಲುಗಳುಳ್ಳವರೂ, ಒಂದು ಕಣ್ಣು ಎರಡು ನೇತ್ರ ಮೂರು ಕಣ್ಣು ನಾಲ್ಕು ನಯನ ಐದಕ್ಷಿಗಳು, ಆರು ಕಣ್ಣು ಮೊದಲಾದ ಸಾವಿರ ಸಂಖ್ಯೆಯ ಕಣ್ಣುಗಳುಳ್ಳವರೂ, ಕಣ್ಣುಗಳೇ ಇಲ್ಲದವರೂ, ಏಕಕರ್ಣಿಗಳು ದ್ವಿಕರ್ಣಿಗಳೂ, ತ್ರಿಕರ್ಣಿಗಳೂ, ಬಹುಕರ್ಣಿಗಳೂ, ಸಹಸ್ರ ಕರ್ಣಿಗಳೂ, ಕರ್ಣರಹಿತರೂ, ಅಲ್ಪದೇಹಿಗಳೂ, ದೀರ್ಘದೇಹಿಗಳೂ, ಸ್ಥೂಲದೇಹಿಗಳೂ, ಶುಷ್ಕದೇಹಿಗಳೂ, ಆದರೂ ಕ್ಷಣಮಾತ್ರದಲ್ಲಿ ಮೂರು ಲೋಕಗಳನ್ನು ಸೃಷ್ಟಿ ಮಾಡಿ ಅದನ್ನು ಸಂಹರಿಸುವ ಶಕ್ತಿಯುಳ್ಳ ಮಹಾಮಹಿಮರು, ಭಯಭಕ್ತಿ ವಿನಯಸಂಪನ್ನರಾಗಿ ಪರಮೇಶ್ವರನನ್ನು ಸೇವಿಸುತ್ತಿದ್ದರು. ಆ ಸಮಯದಲ್ಲಿ ಭಕ್ತಾಗ್ರೇಸರನಾದ ಸನತ್ಕುಮಾರ ಋಷೀಶ್ವರನು ಪರಮೇಶ್ವರನನ್ನು ಓಲೈಸಿ ಧನ್ಯನಾಗುವ ನಿಮಿತ್ತ ತನ್ನ ವಾಸಸ್ಥಾನದಿಂದ ಹೊರಟು ಬಂದು ಮಂದರ ಪರ್ವತದಶಿಖರಾಗ್ರದಲ್ಲಿ ರಮ್ಯವಾಗಿ ರಂಜಿಸುತ್ತಿದ್ದ ಪರಶಿವನ ಸಭೆಯನ್ನು ಪ್ರವೇಶಿಸಿದನು. ಆ ಸಭಾಮಧ್ಯದಲ್ಲಿ ಕೋಟಿಸೂರ್ಯ ಪ್ರಕಾಶಮಾನನಾಗಿ

ಕುಳಿತು ಪ್ರಳಯಕಾಲದಲ್ಲಿ ಮೊರೆಯುತ್ತಿರುವ ಸಪ್ತ ಸಮುದ್ರಂಗಳ ಧ್ವನಿಯನ್ನು ವಿಾರಿಸುವ ಗಂಭೀರಧ್ವನಿಯುಳ್ಳವನಾಗಿ, ಕಲ್ಪಾಂತದ ಜ್ವಾಲೆಯಂತೆ ಹೊಳೆಯುತ್ತಿರುವ ಕೆಂಜೆಡೆಗಳಿಂದ ಕೂಡಿ, ಫಾಲನೇತ್ರದ ಅಗ್ನಿಜ್ವಾಲೆಯಿಂದ ಬಾಡಿಹೋದ ಶಿರೋಭೂಷಣವಾದ ಚಂದ್ರಕಳೆಯುಳ್ಳವನಾಗಿ, ತಕ್ಷಕವಾಸುಕಿಗಳೆಂಬ ಸರ್ಪರಾಜರನ್ನು ಕರ್ಣಕುಂಡಲಗಳಾಗಿ ಧರಿಸಿಕೊಂಡು, ಕರ್ಕೋಟಕ ಮಹಾಪದ್ಮ, ಧೃತರಾಷ್ಟ್ರ, ಧನಂಜಯಾದಿ ಮಹಾಸರ್ಪಗಳನ್ನು ಕಾಲಂದಿಗೆಯಾಗಿ ಮಾಡಿಕೊಂಡು, ಪಾಶ, ತೋಮರ, ಖಟ್ವಾಂಗ, ಟಂಕ, ಶೂಲ, ಗದೆ, ಪಿನಾಕ, ಪಾಶ, ಅಂಕುಶ, ವರದ, ಅಭಯಗಳೆಂಬ ಬಿರುದುಗಳುಳ್ಳ ಹಸ್ತಗಳುಳ್ಳವನಾಗಿ, ನೀಲಕಂಠನಾಗಿ, ಆಜಾನುಬಾಹುವಾಗಿ, ಅಪರಾಜಿತನಾಗಿ, ಅವಾಗ್ಮಾನಸಗೋಚರನಾಗಿ, ಜಗತ್ತಿಗೆ ಒಡೆಯನಾಗಿ, ದೇವದೇವನಾಗಿ ಕಂಗೊಳಿಸುತ್ತಿದ್ದ ಕರುಣಾಮೂರ್ತಿಯಾದ ಪರಮೇಶ್ವರನಿಗೆ ನಮಸ್ಕರಿಸಿ, ಕೈಮುಗಿದು ಎದುರಿಗೆ ನಿಂತು ಬದ್ಧಾಂಜಲಿಯಾಗಿ ವೇದಮಂತ್ರಗಳಿಂದ ಆಗಮಸ್ತೋತ್ರಗಳಿಂದಲೂ ಬಗೆಬಗೆಯಾಗಿ ಸ್ತೋತ್ರಮಾಡಿ ಮೆಚ್ಚಿಸಿ, ಎಲೈ ! ಕರುಣಾನಿಧಿಯೆ ಭಕ್ತವತ್ಸಲನಾದ ನಿನ್ನ ಮುಖದಿಂದ ಸಕಲ ಧರ್ಮ ರಹಸ್ಯಗಳನ್ನು ಕೇಳಿ ಸಂತೋಷಪಡಬೇಕೆಂದು ಈಗ ನಾನು ಇಲ್ಲಿಗೆ ಬಂದೆನು ಎಂದು ಪ್ರಾರ್ಥಿಸಲು, ಸರ್ವಜ್ಞನಾದ ಪರಶಿವನು ಅವನ ಭಕ್ತಿಗೆ ಮೆಚ್ಚಿ ತನಗೆ ತಿಳಿದ ಸರ್ವ ಮಂತ್ರ ತಂತ್ರಾದಿ ಧರ್ಮರಹಸ್ಯಗಳನ್ನು ಸಾಂಗವಾಗಿ ಆ ಸನತ್ಕುಮಾರನಿಗೆ ಬೋಧಿಸಿದನು. ಆದರೂ ಆ ಸನತ್ಕುಮಾರನು ಅಷ್ಟಕ್ಕೆ ತೃಪ್ತನಾಗದೆ ಮರಳಿ ಪರಶಿವನನ್ನು ಕುರಿತು, ಎಲೈ ಷಡ್ಗುಣೈಶ್ವರ್ಯ ಸಂಪನ್ನನಾದ ಪರಶಿವನೆ ! ಲೋಕದಲ್ಲಿರುವ ಜೀವಕೋಟಿಗಳು ಯಾವ ಧರ್ಮಗಳನ್ನು ಅನುಸರಿಸಿದರೆ ಅವರಿಗೆ ಕಾಲಾಂತರದಲ್ಲಿ ಸಂಸಾರಬಂಧವು ತೊಲಗಿ ಮೋಕ್ಷವಾಗುವದೊ ? ಆ ಧರ್ಮ ರಹಸ್ಯಗಳನ್ನು ನಿನ್ನ ಮುಖದಿಂದ ನಾನು ಕೇಳಿದೆನು. ಇವೆಲ್ಲ ಕಷ್ಟಸಾಧ್ಯವಾದುವು ಕಡೆಗೆ ಎಂದಿಗೂ ಯಾವಾಗಲೊ, ಎಲ್ಲಿಯೊ! ಮುಕ್ತಿಯನ್ನು ಕೊಡುವಂಥವುಗಳು ಇಂಥವುಗಳನ್ನು ಬಿಟ್ಟು ಸುಲಭಸಾಧ್ಯವಾಗಿ ಆಚರಿಸಿದವರಿಗೆ ಈ ಜನ್ಮದಲ್ಲಿ ಮುಕ್ತಿಯನ್ನು ಕೊಟ್ಟು ಮುಂದಕ್ಕೆ ಸಂಸೃತಿ ಬಂಧಕ್ಕೆ ಸಿಕ್ಕದಂತೆ ಮಾಡುವ ಮಹಾಮಹಿಮೆಯುಳ್ಳ ಸುಲಭವಾದ ಧರ್ಮಗಳನ್ನು ನನಗೆ ರಹಸ್ಯವಾಗಿ ಬೋಧಿಸಬೇಕೆಂದು ಪ್ರಾರ್ಥಿಸಿಕೊಂಡನು.

ಬಳಿಕ ದಯಾಮಯನಾದ ಧೂರ್ಜಟಿಯು ಶಿಷ್ಯನಾದ ಸನತ್ಕುಮಾರನನ್ನು ಕುರಿತು ಎಲೈ ಯೋಗೀಂದ್ರನೇ ! ಸಕಲ ಧರ್ಮಗಳಲ್ಲಿಯೂ ಶ್ರೇಷ್ಠವಾಗಿಯೂ, ವೇದಸಮ್ಮತವಾಗಿಯೂ, ಅತಿ ರಹಸ್ಯವಾಗಿಯೂ ಮೋಕ್ಷಸಾಧಕವಾಗಿಯೂ, ಇರುವುದು. ಭಸ್ಮತ್ರಿಪುಂಡ್ರಧಾರಣೆಯಲ್ಲದೆ ಮತ್ತೊಂದಲ್ಲ. ಇದನ್ನು ನಿನಗೋ

ಸ್ಕರವಾಗಿ ನಿರೂಪಿಸಿದೆನು ಎನಲು, ಸಂತುಷ್ಟನಾದ ಸನತ್ಕುಮಾರನು ಮರಳಿ ಪರಮೇಶ್ವರನನ್ನು ಕುರಿತು, ಎಲೈ ಶಂಭುವೆ? ನೀನು ಹೇಳಿದುದು ಸತ್ಯವೇ ಸರಿ! ಆದರೆ ತ್ರಿಪುಂಡ್ರವೆಂದರೇನು? ಅದಕ್ಕೆ ಅಧಿದೇವತೆಯಾರು? ಶಕ್ತಿಯಾವುದು? ದ್ರವ್ಯವೆಂಥದು? ಅಧಿಕಾರಿಯಾರು? ಎಲ್ಲಿ ಧಾರಣೆ ಮಾಡಬೇಕು? ಮಂತ್ರವಾವುದು? ಆ ಮಂತ್ರ ಜಪದಿಂದ ಆಗುವ ಸಿದ್ಧಿಯೇನು? ಇದೆಲ್ಲವನ್ನು ಸವಿಸ್ತಾರವಾಗಿ ವಿವರಿಸಿ ನನಗೆ ಉಪದೇಶಿಸಿದರೆ ಲೋಕಾನುಗ್ರಹಕ್ಕೆ ಕಾರಣವಾಗುವುದೆಂದು ಕೈಮುಗಿದು ಕೇಳಿಕೊಳ್ಳಲು, ಪಾರ್ವತೀಪತಿಯು ನಸುನಕ್ಕು ಆ ಸನತ್ಕುಮಾರನ ಬುದ್ಧಿಶಕ್ತಿಗೆ ಮೆಚ್ಚಿ ಕೊಂಡಾಡುತ್ತ ಅವನನ್ನು ಕುರಿತು ಮತ್ತೆ ಇಂತೆಂದನು.

ಎಲೈ ಸನತ್ಕುಮಾರನೆ! ಕೇಳು ನಿನ್ನ ಬುದ್ಧಿ ಶಕ್ತಿಗೆ ನಾನು ಮೆಚ್ಚಿದೆನು. ನಿನ್ನಲ್ಲಿ ನೆಲೆಗೊಂಡಿರುವ ಶಿವಭಕ್ತಿಯನ್ನು ನೋಡಿ ನಾನು ಸಂತುಷ್ಟನಾದೆನು. ನಿನ್ನ ಹಾಗೆ ಭಕ್ತಿವಂತರಾದ ಭಕ್ತರ ಶ್ರೇಯಸ್ಸಿಗೋಸ್ಕರ ಲೋಕಾನುಗ್ರಹಾರ್ಥವಾಗಿ ಪರಮ ರಹಸ್ಯವಾದ ಭಸ್ಮ ತ್ರಿಪುಂಡ್ರಗಳ ವಿಧಾನವನ್ನು ವಿಸ್ತರಿಸಿ ಹೇಳಬೇಕಾಯಿತು. ಪರಿಶುದ್ಧವಾದ ಗೋಮಯವನ್ನು ತಂದು ಉಂಡೆಗಳಾಗಿ ಮಾಡಿ ಒಣಗಿಸಿ, ಆ ಮಂತ್ರಗಳಿಂದ ಶಿವನಿಗೆ ಪ್ರೀತಿಕರವಾದ ಶಿವರಾತ್ರಿಯಲ್ಲಾಗಲಿ! ರುದ್ರಾದಿ ಮಹಾಮಂತ್ರಗಳಿಂದ ಅಭಿಷೇಕಿಸಿ, ಒಡ್ಡು ಕಟ್ಟಿ ಅಗ್ನಿರಿತಿ ಎಂಬ ಮಂತ್ರವನ್ನು ಜಪಿಸುತ್ತ ನಿಷ್ಠನಾಗಿ ಶಿವನಿಗೆ ಸಮರ್ಪಿತವಾದ ನೀರಾಜನದ ಆರತಿಯಿಂದ ಅದನ್ನು ಹೊತ್ತಿಸಿ ಭಸ್ಮವನ್ನು ಮಾಡಿ ಇಟ್ಟುಕೊಳ್ಳಬೇಕು ಇದಕ್ಕೆ ಆಗ್ನೇಯ ಭಸ್ಮವೆಂದು ಹೆಸರು. ಇದೇ ತ್ರಿಪುಂಡ್ರಕ್ಕೆ ಯೋಗ್ಯವಾದ ದ್ರವ್ಯವು, ಇಂಥ ಭಸ್ಮವನ್ನು ಪಂಚಬ್ರಹ್ಮ ಮಂತ್ರಗಳೊಂದಿಗೆ ತೆಗೆದುಕೊಂಡು ಅಗ್ನಿರಿತಿ ಎಂಬ ಮಂತ್ರದಿಂದ ಅಭಿಷೇಕಿಸಿ, ಮಾನಸ್ತೋಕಾದಿ ಮಂತ್ರದಿಂದ ಕಲಸಿ, ತ್ರಿಯಂಬಕ ಮಂತ್ರದಿಂದ ಮಸ್ತಕದಲ್ಲಿಯೂ, ತ್ರಿಯಾಯುಷಮಂತ್ರದಿಂದ ಲಲಾಟದಲ್ಲಿಯೂ, ಹೃದಯದಲ್ಲಿಯೂ, ಭುಜಗಳಲ್ಲಿಯೂ, ಹೆಗಲುಗಳಲ್ಲಿಯೂ, ಒಂದೊಂದು ಕಡೆಯಲ್ಲಿ ಮೂರು ಮೂರು ರೇಖೆಗಳು ಆಗುವಂತೆ ಧರಿಸಿಕೊಳ್ಳಬೇಕು, ಹಣೆಯಲ್ಲಿ ಹುಬ್ಬುಗಳ ಕೊನೆಯುವರೆಗೂ, ಮಧ್ಯಮ ಅನಾಮಿಕಗಳೆಂಬ ಎರಡು ಬೆರಳುಗಳಿಂದ ಅನುಲೋಮವಾಗಿ ಅಂಗುಷ್ಠದಿಂದ ಪ್ರತಿಲೋಮವಾಗಿ ಮತ್ತೊಂದು ರೇಖೆಯನ್ನು ಧರಿಸಿಕೊಳ್ಳಬೇಕು. ಹೀಗೆ ಏರ್ಪಟ್ಟ ಮೂರು ರೇಖೆಗಳಿಗೆ ತ್ರಿಪುಂಡ್ರವೆಂದು ಹೆಸರು. ಈ ತ್ರಿಪುಂಡ್ರದಲ್ಲಿರುವ ಮೂರು ರೇಖೆಗಳಲ್ಲಿಯೂ ಒಂದೊಂದಕ್ಕೆ ಒಂಭತ್ತು ಅಧಿದೇವತೆಗಳುಂಟು. ಹೇಗೆಂದರೆ ಮೊದಲನೆ ರೇಖೆಗೆ ಅಕಾರ ಗಾರ್ಹ್ಯಪತ್ಯಾಗ್ನಿ, ಭೂಮಿ, ರಜೋಗುಣ, ಆತ್ಮ, ಋಗ್ವೇದ, ಕ್ರಿಯಾಶಕ್ತಿ, ಪ್ರಾತಸ್ಸವನ, ವಾಸುದೇವ, ಎಂದ

ಓಂಭತ್ತು ಅಧಿದೇವತೆಗಳಾದರು. ಎರಡನೆಯ ರೇಖೆಗೆ ಉಕಾರ, ದಕ್ಷಿಣಾಗ್ನಿ, ಆಕಾಶ, ಸತ್ವಗುಣ, ಯುಜುರ್ವೇದ, ಮಧ್ಯಂದಿನ ಸವನ, ಇಚ್ಛಾಶಕ್ತಿ, ಅಂತ ರಾತ್ಮ, ಮಹಾದೇವ ಎಂಬ ಒಂಭತ್ತು ಅಧಿದೇವತೆಗಳಾದರು. ಮೂರನೆಯ ರೇಖೆಗಾವದೊ ಮಕಾರ, ಆಹವನೀಯಾಗ್ನಿ, ಪರಮಾತ್ಮ, ತಮೋಗುಣ ದ್ಯುಲೋಕ, ಜ್ಞಾನಶಕ್ತಿ, ಸಾಮವೇದ, ತೃತೀಯ ಸವನ, ಶಿವ ಎಂಬ ಒಂಭತ್ತು ಅಧಿದೇವತೆಗಳುಂಟು ಈ ದೇವತೆಗಳಿಗೆ ಮೊದಲು ನಮಸ್ಕಾರವಾಡಿ, ಅನಂತರ ತ್ರಿಪುಂಡ್ರವನ್ನು ಧರಿಸಬೇಕು. ಹೀಗೆ ಮಾಡಿದರೆ ಸರ್ವ ವೇದ ಸಮ್ಮತವಾದ ಮಾಹೇಶ್ವರವ್ರತವೆಂದು ಕರೆಯಲ್ಪಡುವದು. ಮೋಕ್ಷಾಪೇಕ್ಷಿಗಳಾದ ಅಧಿಕಾ ರಿಗಳಲ್ಲಿ ಯಾವನು ವಿಧ್ಯುಕ್ತವಾದ ಕ್ರಮದಿಂದ ಈ ತ್ರಿಪುಂಡ್ರವನ್ನು ಧರಿಸಿಕೊ ಳ್ಳುವನೋ ಅವನು ಮಹಾಪಾತಕಗಳಿಂದಲೂ, ಉಪಪಾತಕಗಳಿಂದಲೂ ಮುಕ್ತನಾಗುವನು ಅದರಂತೆ ಕ್ಷತ್ರಿಯರಾದರೂ, ವೈಶ್ಯನಾದರೂ, ಶೂದ್ರನಾ ದರೂ, ಯಾವನು ಈ ಭಸ್ಮ ತ್ರಿಪುಂಡ್ರವನ್ನು ಧರಿಸುವನೋ ? ಅಂಥವನು ಸ್ತ್ರೀಹತ್ಯ, ಗೋಹತ್ಯ, ಭ್ರೂಣಹತ್ಯ, ಬ್ರಹ್ಮಹತ್ಯಗಳಿಂದ ಬಿಡಲ್ಪಟ್ಟು ಪರಿಶುದ್ಧ ನಾಗುವನು. ಇದರ ಪ್ರಭಾವವನ್ನು ತಿಳಿಯದೆ ಮಂತ್ರಹೀನನಾಗಿ ಆದರೂ ಯಾರು ತ್ರಿಪುಂಡ್ರವನ್ನು ಧರಿಸುತ್ತಿರುವರೋ ? ಅವರು ಸಕಲ ಪಾಪವಿಮುಕ್ತ ರಾಗುವರು, ಪರರ ದ್ರವ್ಯವನ್ನು ಅಪಹರಿಸುವುದು, ಪರಸ್ತ್ರೀಗಮನ, ಪರನಿಂದೆ, ಪರರನ್ನು ಪೀಡಿಸುವುದು, ಪರರ ಪೈರುಪಚ್ಚೆ ತೋಟ ಕುಡಿಕೆಗಳನ್ನು ಕೆಡಿಸು ವುದು, ಪರರ ಕ್ಷೇತ್ರಸ್ವಾಸ್ಥ್ಯಗಳನ್ನು ಅಪಹರಿಸುವುದು, ಪರರ ಬೆಳೆಯನ್ನು ಸುಡುವುದು, ಹೆರವರ ಮನೆಗೆ ಬೆಂಕಿ ಹಾಕುವುದು, ಅಸತ್ಯವನ್ನಾಡುವುದು, ಚಾಡಿಹೇಳುವದು, ಅನ್ಯಾಯದ ಬಡ್ಡಿಯನ್ನು ತೆಗೆದುಕೊಳ್ಳುವುದು, ವೇದವಿಕ್ರ ಯಮಾಡುವುದು, ಸುಳ್ಳುಸಾಕ್ಷಿ ಹೇಳುವುದು, ಹಿಡಿದ ವ್ರತವನ್ನು ಬಿಟ್ಟುಬಿಡು ವುದು, ಇದೂ ಅಲ್ಲದೆ ನೀಚರಾದ ಪಾಪಾತ್ಮರಿಂದ ಗೋದಾನ, ಭೂದಾನ, ಹಿರ ಣ್ಯದಾನ, ತಿಲದಾನ, ವಸ್ತ್ರದಾನ, ಅನ್ನದಾನ, ಮಹಿಷದಾನ, ಕಂಬಳಿದಾನ, ಧಾನ್ಯದಾನ, ಉದಕದಾನಗಳನ್ನು ಪರಿಗ್ರಹಿಸುವುದು, ಮತ್ತು ವೇಶ್ಯೆಯಲ್ಲಿಯೂ ಕುಂಟಣಿಯಲ್ಲಿಯೂ, ಮದುವೆಯಾಗುವುದಕ್ಕೆ ಮುಂಚೆ ಮೈನೆರೆದವಳಲ್ಲಿಯೂ, ಹೊಲೆಯಾದವಳಲ್ಲಿಯೂ, ದೇವದಾಸಿಯಲ್ಲಿಯೂ, ಮೈನೆರೆಯದ ಕನ್ನಿಕೆಯ ಲ್ಲಿಯೂ, ವಿಧವೆಯಲ್ಲಿಯೂ, ಅನುರಕ್ತನಾಗಿ ರಮಿಸುವದು, ಮಾಂಸವನ್ನು ವಿಕ್ರಯಿಸುವದು, ಚರ್ಮವನ್ನು ಮಾರುವುದು, ರಸವಿಕ್ರಯ, ಧರ್ಮವಿಕ್ರಯ, ಮೊದಲಾದುವೆಲ್ಲ ಮಹಾಪಾತಕಗಳಿಗಿಂತಲೂ ಅಧಿಕವಾದ ಪಾತಕಗಳು, ಇವೆ ಲ್ಲವೂ ಕೂಡ ತ್ರಿಪುಂಡ್ರಧಾರಣೆಯೊಂದರಿಂದಲೆ ಪರಿಹಾರವಾಗುವವು, ಆದರೆ ಶಿವನಿಂದೆಯೂ, ಶಿವಸ್ವಾಪಹಾರವೂ, ಎಂದಿಗೂ ಯಾವ ಪ್ರಾಯಶ್ಚಿತ್ತಗಳಿಂ

ದಲೂ ಪರಿಹಾರವಾಗುವದಿಲ್ಲ, ಯಾರ ಹಣೆಯಲ್ಲಿ ವಿಭೂತಿಯಿಂದ ಧರಿಸಿದ ಭಸ್ಮತ್ರಿಪುಂಡ್ರವೂ, ಕೊರಳಿನಲ್ಲಿ ರುದ್ರಾಕ್ಷಿಯ ಸರವೂ, ಕಂಗೊಳಿಸುತ್ತಿರುವುದೊ ಅಂಥವರು ಎಂಥನೀಚರಾದರೂ ಉತ್ತಮರೆಂದು ತಿಳಿಯಬೇಕು. ಯಾವನು ಭಸ್ಮತ್ರಿಪುಂಡ್ರವನ್ನು ಧರಿಸಿಕೊಳ್ಳುವನೋ ಅವನು ಸರ್ವತೀರ್ಥಗಳ್ಲಿಯೂ ಸ್ನಾನಮಾಡಿದವನೇ ಸರಿ! ಸಮಸ್ತ ನದಿಗಳಲ್ಲಿಯೂ ಮಿಂದವನು ಮುಕ್ತಿದಾಯಕವಾದ ಶಿವಪಂಚಾಕ್ಷರಿಯೆ ಮೊದಲಾದ ಸಪ್ತಕೋಟಿ ಮಹಾ ಮಂತ್ರಗಳನ್ನು ಜಪಿಸಿದವನು ಅಂಥ ತ್ರಿಪುಂಡ್ರಧಾರಿಯು ತನ್ನ ವಂಶದಲ್ಲಿ ತನಗಿಂತ ಮೊದಲು ಹುಟ್ಟಿದ್ದ ಸಾವಿರ ತಲೆಯುವರನ್ನು ತನ್ನ ಅನಂತರದಲ್ಲಿ ಹುಟ್ಟುವ ಸಾವಿರ ಜನರನ್ನೂ ಉದ್ಧರಿಸುವನು, ಇದೂ ಅಲ್ಲದೆ ಅಂಥ ಪುಣ್ಯಪುರುಷನು, ಇಹಲೋಕವಲ್ಲಿ ವ್ಯಾಧಿರಹಿತನಾಗಿ ದೀರ್ಘಾಯುಷ್ಯದಿಂದ ಬಹು ವಿಧವಾದ ಭೋಗಭಾಗ್ಯಗಳನ್ನು ಅನುಭವಿಸಿ ಕಡೆಗೆ ಅನಾಯಾಸದಿಂದ ಇಹಲೋಕವನ್ನು ತ್ಯಜಿಸಿ ಪರಲೋಕದಲ್ಲಿ ದಿವ್ಯಶರೀರಧಾರಿಯಾಗಿ, ವಿಮಾನರೂಢನಾಗಿ, ಅಪ್ಸರಸ್ತ್ರೀಯರಿಂದ ಸೇವಿಸಲ್ಪಡುತ್ತ ದೇವಲೋಕವನ್ನೈದಿ ಇಂದ್ರಲೋಕ, ಚಂದ್ರಲೋಕ, ಗಂಧರ್ವಲೋಕ, ಗುಹ್ಯಲೋಕ ಮೊದಲಾದ ಒಂದೊಂದು ಲೋಕದಲ್ಲಿ ಬಹುಕಾಲ ಸುಖವನ್ನನುಭವಿಸಿ ಬಳಿಕ ಬ್ರಹ್ಮಲೋಕದಲ್ಲಿ ನೂರುಕಲ್ಪಕಾಲವಾಸ ಮಾಡಿ ಅಲ್ಲಿಂದ ವಿಷ್ಣುಲೋಕಕ್ಕೆ ಹೋಗಿ ಅಲ್ಲಿಯೂ ಶತಕಲ್ಪಗಳಿದ್ದು ಕಡೆಗೆ ಶಿವಲೋಕವನ್ನು ಸೇರಿ ಅಲ್ಲಿನ ವೈಭವಗಳನ್ನು ಅನುಭವಿಸಿದನಂತರ ಶಿವಸಾಯುಜ್ಯವನ್ನು ಪಡೆಯುವನು. ಈ ತ್ರಿಪುಂಡ್ರ ಮಹಿಮೆಯು ಪರಮ ರಹಸ್ಯವಾದದ್ದು ಸಕಲ ಉಪನಿಷತ್ತುಗಳಿಗೂ ಸಾರಭೂತವಾದದ್ದು ವೇದಗಳಿಗೆ ಮಾತೃಕೆಯಂತಿರುವದು. ಇದರಿಂದ ಜೀವಿಗಳಿಗೆ ಸಕಲ ಶ್ರೇಯಸ್ಸುಗಳೂ ಉಂಟಾಗುವ ಕಾರಣ ಪರಮರಹಸ್ಯವಾದ ಇದನ್ನು ನಿನಗೋಸ್ಕರವಾಗಿ ವಿಸ್ತರಿಸಿ ಹೇಳಿದೆನು. ಇಂಥ ಮಹಾಮಹಿಮೆಯುಳ್ಳ ಈ ಭಸ್ಮತ್ರಿಪುಂಡ್ರ ಮಹಿಮೆಯನ್ನು ಭಕ್ತಿ ಹೀನರಾದ ಭಂಡರಿಗೆ ಎಂದಿಗೂ ಹೇಳಬೇಡ! ಎಂದು ನಿರೂಪಿಸಿ ಶಿವನು ಅಂತರ್ಧಾನವಾಗಲು ಸನತ್ಕುಮಾರನು ಬ್ರಹ್ಮಲೋಕಕ್ಕೆ ಹೊರಟುಹೋದನು. ಎಲೈ ಬ್ರಹ್ಮರಾಕ್ಷಸನೆ ನಿನಗೆ ಪೂರ್ವಜನ್ಮಗಳ ಜಾತಿ ಸ್ಮರಣೆಯುಂಟಾದುದು ಈ ಭಸ್ಮಪ್ರಭಾವದಿಂದಲ್ಲದೆ ಮತ್ತೊಂದರಿಂದಲ್ಲ ಆದಕಾರಣ ನೀನು ಈ ಭಸ್ಮತ್ರಿಪುಂಡ್ರವನ್ನು ಧರಿಸು ಎಂದು ಹೇಳಿ ಆತನಿಗೆ ಶಿವಮಂತ್ರವನ್ನು ಉಪದೇಶಿಸಿ ಭಸ್ಮತ್ರಿಪುಂಡ್ರಕ್ಕೆ ಯೋಗ್ಯವಾದ ವಿಭೂತಿಯನ್ನು ಕೊಡಲು, ಆ ಬ್ರಹ್ಮರಾಕ್ಷಸನು ಅದರಿಂದ ತ್ರಿಪುಂಡ್ರವನ್ನು ಧರಿಸಿಕೊಂಡು ಶಿವಮಂತ್ರವನ್ನು ಜಪಿಸುತ್ತ ವಿಕಾರವಾದ ತನ್ನ ಬ್ರಹ್ಮರಾಕ್ಷಸತ್ವವನ್ನು ಕಳೆದುಕೊಂಡು ದಿವ್ಯಸುಂದರವಾದ ದೇಹವನ್ನು ಧರಿಸಿ ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳವನಾಗಿ ಹೊಳೆ

ಯುತ್ತ ವಾಮದೇವನಿಗೆ ನಮಸ್ಕರಿಸಿ, ಅವನನ್ನು ಬಗೆಬಗೆಯಾಗಿ ಹೊಗಳುತ್ತ ದಿವ್ಯ ವಿಮಾನದಲ್ಲಿ ಕುಳಿತು ಶಿವಲೋಕಕ್ಕೆ ಹೊರಟುಹೋದನು. ಹೀಗೆ ಮಹಾಮಹಿಮನಾದ ವಾಮದೇವನು ಬ್ರಹ್ಮರಾಕ್ಷಸನ ದುರ್ಗತಿಯನ್ನು ನೀಗಿ ಶ್ರೇಷ್ಠವಾದ ಸದ್ಗತಿಯನ್ನು ಕೊಟ್ಟು ತನ್ನ ಮಹಿಮಾಬಲದಿಂದ ಸಂಪಾದಿಸಲ್ಪಟ್ಟ ಭಸ್ಮ ತ್ರಿಪುಂಡ್ರಗಳ ಪ್ರಭಾವವನ್ನು ಲೋಕಪಸ್ತರವಾಗುವಂತೆ ಮಾಡಿದನು. ಇಂಥ ಕಥೆಯನ್ನು ಯಾರು ಹೇಳುವರೊ! ಯಾರು ಕೇಳುವರೊ! ಯಾರು ಭಕ್ತಿಯಿಂದ ಓದುವರೊ! ಮತ್ತಾರು ಶ್ರದ್ಧೆಯಿಂದ ಬರೆಯುವರೊ! ಅವರೆಲ್ಲರೂ, ಕೃತಕೃತ್ಯರಾಗಿ ಧನ್ಯರಾಗುವರು. ಆದಕಾರಣ ಶಿವಭಕ್ತಿ ಸಂಪನ್ನರಾಗಿ ವಿಭೂತಿರುದ್ರಾಕ್ಷಿಗಳನ್ನು ತ್ರಿಪುಂಡ್ರಮಹಿಮೆಯನ್ನು ಅರಿತು ಅದನ್ನು ಧರಿಸುತ್ತಿರುವ ನೀವುಗಳು ಮರಳಿ ಮಾತೃಗರ್ಭದಲ್ಲಿ ಹುಟ್ಟುವ ಕಷ್ಟವನ್ನು ಪಡೆಯ ಬೇಡಿ ಎಂದು ಸೂತಮಹಾಮುನಿಯು ಶೌನಕಾದಿ ಋಷಿಗಳಿಗೆ ನಿರೂಪಿಸಿದನೆಂಬಲ್ಲಿಗೆ,

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮವೀರ ನರಪತಿ ಬಿರುದೆಂತೆಂಬರ ಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡಾದಿ ನಾನಾ ಬಿರುದಾಂಕಿತ ಯಾದವಕುಲತಿಲಕ ಆತ್ರೇಯ ಸಗೋತ್ರ ಅಶ್ವಲಾಯನಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರ ರಾಜಒಡೆಯರ ಪೌತ್ರ ನರಸರಾಜಒಡೆಯರ ಪುತ್ರರಾದ ಶ್ರೀಇಮ್ಮಡಿ ಚಾಮರಾಜ ಒಡೆಯರವರು ಕರ್ಣಾಟಕ ಭಾಷೆಯಲ್ಲಿ ವಿರಚಿಸಿದ ಸ್ಕಾಂದಪುರಾಣೋಕ್ತಮಾದ ಬ್ರಹ್ಮೋತ್ತರಖಂಡದಲ್ಲಿ, ವಾಮದೇವನ ಮಹಿಮೆಯಿಂದ ಬ್ರಹ್ಮರಾಕ್ಷಸನಿಗೆ ತ್ರಿಪುಂಡ್ರ ಮಹಿಮೆಯ ಉಪದೇಶವಾಗಿ ಅವನಿಗೆ ಶಿವಸಾಯುಜ್ಯವಾದಿಲ್ಲಿಗೆ,

೧೬ನೆಯ ಅಧ್ಯಾಯಕ್ಕೆ ಮಂಗಳಮಸ್ತು.



## ಭಕ್ತಿಪ್ರಾಧಾನ್ಯ ಮಹಿಮೆ.

### ಹದಿನೇಳನೆಯ ಅಧ್ಯಾಯ.

ಅನಂತರದಲ್ಲಿ ಪುರಾಣಿಕೋತ್ತಮನಾದ ಸೂತಮಹಾಮುನಿಯು ತನ್ನ ಶಿಷ್ಯರಾದ ಶೌನಕಾದಿ ಮಹರ್ಷಿಗಳನ್ನು ಕುರಿತು ಮರಳಿ ಪರಶಿವನ ಮಾಹಾತ್ಮ್ಯೆಯನ್ನು ಹೇಳಲಾರಂಭಿಸಿ, ಭಕ್ತಿಪ್ರಾಧಾನ್ಯ ರಹಸ್ಯವನ್ನು ವಿವರಿಸಿ ಹೇಳತೊಡಗಿದಾಗ ಸಂಶಯಗ್ರಸ್ತರಾದ ಆ ಶೌನಕಾದಿಗಳು ಸೂತಪುರಾಣಿಕನನ್ನು ಕುರಿತು ಇಂತೆಂದರು.

ಎಲೈ ಮಹಾಮಹಿಮನಾದ ಸೂತಪುರಾಣಿಕನೆ! ಇದುವರೆಗೂ ನಿನ್ನ ವಚನಾಮೃತವನ್ನು ಸವಿದು ತೃಪ್ತರಾದ ನಮಗೆ ಹಠಾತ್ತಾಗಿ ಒಂದಾನೊಂದು ಸಂಶಯವುಂಟಾಗಿದೆ ಅದನ್ನು ಪರಿಹರಿಸಲು ನೀನೆ ಸಮರ್ಥನಲ್ಲದೆ ಅನ್ಯರಿಂದಾಗದು, ಆದಕಾರಣ ನಮ್ಮಗಳ ಸಂದೇಹವನ್ನು ನಿವೃತ್ತಿಮಾಡಿ ನಮ್ಮನ್ನು ತೃಪ್ತಿಪಡಿಸುವ ಭಾರವು ನಿನ್ನದಾಗಿದೆ. ನಮಗುಂಟಾಗಿರುವ ಸಂಶಯುವಾವುದೆಂದರೆ ಲೋಕದಲ್ಲಿ ಬ್ರಹ್ಮನಿಷ್ಠನಾಗಿ, ಸದಾಚಾರ ತತ್ಪರನಾಗಿ, ಊಹಾಪೋಹ ವಿಚಕ್ಷಣನಾಗಿ, ವೇದಶಾಸ್ತ್ರಾರ್ಥಜ್ಞನಾಗಿ ಇರುವ ಗುರುವಿನಿಂದ ಉಪದೇಶ ಪಡೆದವರಿಗೆ ಹಲವು ಬಾರಿ ಸಿದ್ಧಿಯಾಗುವುದು ಕಷ್ಟವಾಗಿದೆ. ಇನ್ನು ವಿಶೇಷಜ್ಞರಲ್ಲದ ಸಾದಾರಣ ಗುರುಗಳಿಂದ ಉಪದೇಶವು ಎಷ್ಟರಮಟ್ಟಿಗೆ ಸಿದ್ಧಿಯಾಗುವುದೋ! ಎಂಬ ಮಹತ್ತಾದ ಸಂದೇಹವು ನಮ್ಮನ್ನು ಪೀಡಿಸುತ್ತಿದೆ ಇದಕ್ಕೆ ಪರಿಹಾರವೇನಾದರೂ ಇದ್ದರೆ ತಿಳಿಸಿ ನಮ್ಮನ್ನು ಉದ್ದರಿಸಬಲ್ಲೆಯಾ? ಎಂದು ಬೆಸಗೊಳ್ಳಲು, ಸೂತಮಹಾಮುನಿಯು ಆ ಶೌನಕಾದಿಗಳನ್ನು ಕುರಿತು ಹೀಗೆ ಹೇಳಲಾರಂಭಿಸಿದನು:—

ಎಲೈ ಋಷಿಗಳಿರಾ! ನೀವು ಕೇಳಿದ ಪ್ರಶ್ನೆಯು ಪರಮಶ್ರೇಷ್ಠವಾದದ್ದು ಲೋಕಕ್ಕೆ ಹಿತಕರವಾದದ್ದು ಬಹು ಅರ್ಥಗರ್ಭಿತವಾದದ್ದು ಇದಕ್ಕೆ ತಕ್ಕ ಉತ್ತರವನ್ನು ನನಗೆ ತಿಳಿದಮಟ್ಟಿಗೆ ವಿವರಿಸಿ ಹೇಳುವೆನು ಕೇಳಿ ಪ್ರಾಣಿಕೋಟಿಗಳಲ್ಲಿ ಸಕಲರಿಗೂ ಮುಖ್ಯವಾದದ್ದು ವಿಶ್ವಾಸವು ಆ ವಿಶ್ವಾಸವು ತನ್ನನ್ನು ಆಶ್ರಯಿಸಿಕೊಂಡಿರುವವರಿಗೆ ತಾಯಿಯ ಹಾಗೆ ಹಿತವನ್ನೆ ಉಂಟುಮಾಡುವುದು. ಧೃಢವಾದ ಈ ವಿಶ್ವಾಸದಿಂದಲೆ ಇಹದಲ್ಲಿ ಭೋಗವೂ, ಪರದಲ್ಲಿ ಸುಖವೂ ಲಭಿಸುವುದು, ವಿಶ್ವಾಸವುಳ್ಳವರಾಗಿ ದೇವರೆಂದು ನಂಬಿ ಭಜಿಸುವ ಭಕ್ತರಿಗೆ ಕಲ್ಲು ಮರ ಮೊದಲಾದುವು ಕೂಡ ಇಷ್ಟಾರ್ಥಗಳನ್ನು ಕೊಡುವುವು. ವಿಶ್ವಾಸಪೂರ್ವಕವಾಗಿ ಗುರುವೆಂದು ಭಾವಿಸಿದವರಿಗೆ ಮನುಷ್ಯ ಮಾತ್ರದವನೇ! ಗುರುವಾಗುವನು. ಆ ಗುರುವು ಕೊಟ್ಟ ಮಂತ್ರವನ್ನು ಭಕ್ತಿಯಿಂದ ಜಪಿಸುತ್ತಿದ್ದರೆ ಅದು ಅಪಶಬ್ದವಾಗಿದ್ದರೂ, ಒಂದುವೇಳೆ ಸುಳ್ಳಾಗಿದ್ದರೂ ವಿಶ್ವಾಸಪೂರ್ವಕವಾಗಿ ಜಪಿಸುತ್ತಿದ್ದಕಾರಣ ತನಗೆ ಹಿತವನ್ನೆ ಮಾಡುವುದು. ವಿಶ್ವಾಸಪುರಸ್ಸರವಾಗಿ ಪೂಜಿಸಿದುದೇ ಆದರೆ ಪರಮೇಶ್ವರನೂ ಕೂಡ ಪ್ರತ್ಯಕ್ಷನಾಗುವನು. ವಿಶ್ವಾಸ ಹೀನವಾಗಿ ಅಥವಾ ವಿಶ್ವಾಸ ರಹಿತನಾಗಿ ಮಾಡಿದ ಪೂಜೆಯೂ, ದಾನವೂ, ಜಪವೂ, ತಪಸ್ಸು, ಯಜ್ಞಗಳೂ, ಯಾಗಗಳೂ, ಗೊಡ್ಡು ಮರದಲ್ಲಿ ಬಿಡುವ ಹೂ ಗೊಂಚಲುಗಳ ಹಾಗೆ ನಿಷ್ಫಲಗಳಾಗುವುವು. ಸಕಲ ವಸ್ತುಗಳಲ್ಲಿಯೂ ಸಂಶಯಪಡುವ ವಿಶ್ವಾಸ ಹೀನನಾದ ಮನುಷ್ಯನು ಪರಮಾರ್ಥ ತತ್ವವನ್ನು ತಿಳಿಯದೆ ಮೂಢನಾಗಿ ಸದಾ ಸಂಸಾರ ಚಕ್ರಕ್ಕೆ ಸಿಕ್ಕಿ

ಅಲೆಯುತ್ತಿರುವನು. ಯಾವ ಪ್ರಾಣಿಗೆ ಯಾರಲ್ಲಿ ಹೇಗೆ ವಿಶ್ವಾಸವುಂಟಾಗುವುದೊ! ಆ ಪ್ರಾಣಿಗೆ ಹಾಗೆ ಅವರಿಂದಲೇ ಸಿದ್ಧಿಯುಂಟಾಗುವುದು. ದೇವರಲ್ಲಿಯೂ, ಬ್ರಾಹ್ಮಣರಲ್ಲಿಯೂ, ಮಂತ್ರದಲ್ಲಿಯೂ, ತೀರ್ಥಗಳಲ್ಲಿಯೂ, ಜೋಯಿಸರಲ್ಲಿಯೂ, ವೈದ್ಯರಲ್ಲಿಯೂ ಹೇಗೆ ವಿಶ್ವಾಸ ಉಂಟಾಗುವುದೊ! ಹಾಗೆ ಸಿದ್ಧಿಸುವುದು. ಈ ಅರ್ಥದಲ್ಲಿ ಸಂಶಯ ನಿವಾರಕವಾದ ಆಶ್ಚರ್ಯಕರವಾದ ಒಂದು ಕಥೆಯುಂಟು ಅದನ್ನು ನಿಮಗೋಸ್ಕರ ಹೇಳುವೆನು ಕೇಳಿ, ಎಂದು ಎಚ್ಚರಿಸಿ ಸೂತಪುರಾಣಿಕನು ಹೇಳತೊಡಗಿದನು.

ಪೂರ್ವಕಾಲದಲ್ಲಿ ಪಾಂಚಾಲದೇಶವನ್ನಾಳುತ್ತಿದ್ದ ಮಹಾರಾಜನಿಗೆ ಸಿಂಹಕೇತುವೆಂಬ ಮಗನಿದ್ದನು. ಅವನು ಪರಾಕ್ರಮದಲ್ಲಿ ಅರ್ಜುನನಿಗೆ ಸಮಾನನಾಗಿ, ಸದಾ ವೀರಾವೇಶದಿಂದ ಕೂಡಿ ಬೇಟೆಯಾಡುವುದರಲ್ಲಿ ನಿಪುಣರಾದ ಭಟರೊಡನೆ ಹೊರಟು ಅರಣ್ಯ ಮೃಗಗಳನ್ನು ಬೇಟೆಯಾಡುವುದರಲ್ಲಿ ಆಸಕ್ತಿಯುಳ್ಳವನಾಗಿದ್ದನು. ಹೀಗಿರುವಲ್ಲಿ ಅವನು ಒಂದಾನೊಂದು ದಿನ ತನ್ನ ಪರಿವಾರ ಸಹಿತನಾಗಿ ಚತುರಂಗ ಬಲದೊಡನೆ ಬೇಟೆಗಾಗಿ ಅರಣ್ಯಕ್ಕೆ ಹೋಗಿ ಕ್ರೂರವಾದ ಜಂತುಗಳನ್ನು ಹೊಡೆದು ಕೊಲ್ಲುತ್ತ ವಿಹರಿಸುತ್ತಿದ್ದನು. ಹೀಗೆ ಬೇಟೆಯಾಡಿ ಬಳಲಿದ ಮೇಲೆ ಅವನ ಆಪ್ತ ಭಟನಾದ ಚಂಡನೆಂಬ ಬೇಡನು ವಿಶ್ರಮಿಸಿಕೊಳ್ಳುವುದಕ್ಕಾಗಿ ತಕ್ಕ ಸ್ಥಳವನ್ನು ಹುಡುಕುತ್ತ ಬಂದು ಹಾಳುಬಿದ್ದು ಕುಸಿದು ಹೋಗಿದ್ದ ಒಂದು ಶಿವದೇವಾಲಯವಳ್ನು ಕಂಡು, ಈ ದೇವಸ್ಥಾನವು ಇಷ್ಟು ಜೀರ್ಣವಾಗಿ ಶಿಥಿಲವಾಗಿದೆ ಇಲ್ಲಿ ಪೂಜೆ ಪುರಸ್ಕಾರಗಳು ನಡೆಯುವುವೊ ಇಲ್ಲವೊ ನೋಡಬೇಕೆಂದು ನಿಶ್ಚಯಿಸಿ ಆ ಹಾಳುಗುಡಿಯನ್ನು ಹೊಕ್ಕು ಎಲ್ಲಾ ಕಡೆಯಲ್ಲಿಯೂ ಸುತ್ತಿ ನೋಡಿ, ಕಡೆಗೆ ಒಂದಾನೊಂದು ಕಡೆ ನೆಲದ ಮೇಲೆ ಬಿದ್ದಿರುವ ನುಣ್ಣಗೆ ಸಣ್ಣಗಿದ್ದ ಒಂದು ಶಿವಲಿಂಗವನ್ನು ಕಂಡು ಸಂತೋಷಭರಿತನಾಗಿ ಅದನ್ನು ಕೈಗೆ ತೆಗೆದುಕೊಂಡು ಅಲ್ಲಿಂದ ಹೊರಟು ಬಂದು ಸಿಂಹಕೇತುವಿಗೆ ಆ ಶಿವಲಿಂಗವನ್ನು ತೋರಿಸಿ ಎಲೈ ರಾಜಕುಮಾರನೆ! ಕೇಳು, ನಾನು ಬೇಟೆಯಾಡಿ ಬಳಲಿ ವಿಶ್ರಮಿಸಿಕೊಳ್ಳುವುದಕ್ಕೆ ಯೋಗ್ಯವಾದ ಸ್ಥಳವನ್ನು ಹುಡುಕುತ್ತಿರುವಲ್ಲಿ ಜೀರ್ಣವಾಗಿ ಶಿಥಿಲಗೊಂಡಿದ್ದ ಒಂದು ಶಿವದೇವಾಲಯದಲ್ಲಿ ಈ ಶಿವಲಿಂಗವು ನನಗೆ ಸಿಕ್ಕಿತು. ಇದು ಎಷ್ಟು ಚೆನ್ನಾಗಿದೆ ನೋಡಿದೆಯಾ? ನನ್ನ ವಿಭವಕ್ಕೆ ತಕ್ಕಂತೆ ಈ ಲಿಂಗವನ್ನು ಭಕ್ತಿಯಿಂದ ಪೂಜಿಸಬೇಕೆಂಬ ಆಸೆ ನನಗೆ ಬಹಳವಾಗಿದೆ ನಾನು ನೀಚ ಕುಲದಲ್ಲಿ ಹುಟ್ಟಿದವನಾದಕಾರಣ ನನಗೆ ಪೂಜಾವಿಧಾನವೇ ತಿಳಿಯದು. ಆದಕಾರಣ ಕ್ಷತ್ರಿಯೋತ್ತಮನಾದ ನೀನು ನನಗೆ ಶಿವಪೂಜಾ ವಿಧಾನವನ್ನು ಹೇಳಿಕೊಡು ಎಂದು

ಪ್ರಾರ್ಥಿಸಲು ಸಿಂಹಕೇತುವು ನಸುನಕ್ಕು ಅವನನ್ನು ಹಾಸ್ಯಮಾಡುತ್ತ ವಿನೋದಾರ್ಥವಾಗಿ ಅವನಿಗೆ ಹೀಗೆ ಹೇಳಿದನು.

ಎಲೈ ಕಿರಾತಭಟನೆ! ಕೇಳು. ಶಿವಪೂಜೆಯನ್ನು ಮಾಡಬೇಕೆಂಬ ಆಸೆಯುಳ್ಳವನು ಶುದ್ಧವಾದ ಸ್ಥಳದಲ್ಲಿ ಶುಚಿರ್ಭೂತವಾದ ಆಸನದಲ್ಲಿ ಕುಳಿತು, ಪರಮೇಶ್ವರನ ಪ್ರೀತಿಗೋಸ್ಕರವಾಗಿ ಈಗ ನಾನು ಶಿವಪೂಜೆಯನ್ನು ಮಾಡುವೆನೆಂದು ಸಂಕಲ್ಪಿಸಿ, ಶುದ್ಧೋದಕದಿಂದ ಶಿವಲಿಂಗಕ್ಕೆ ಅಭಿಷೇಕವನ್ನು ಮಾಡಿ, ಪೀಠವನ್ನು ಕೊಟ್ಟು ಕುಳ್ಳಿರಿಸಿ ಬಳಿಕ, ಅರ್ಘ್ಯ, ಪಾದ್ಯ, ಆಚಮನ, ಗಂಧ, ಅಕ್ಷತೆ ಧೂಪದೀಪಂಗಳನ್ನು ಕ್ರಮವಾಗಿ ಸಮರ್ಪಿಸಿ, ಮೊದಲು ಚಿತಾಭಸ್ಮವನ್ನು ಸಮರ್ಪಿಸಿ, ಆ ಬಳಿಕ ತಾನು ಉಣ್ಣುವ ಅನ್ನವನ್ನು ನಿವೇದನೆಮಾಡಿ ಮರಳಿ ಧೂಪದೀಪಾದಿಗಳನ್ನು ಸಮರ್ಪಿಸಿ ಕಡೆಗೆ ನೃತ್ಯಗೀತ ವಾದ್ಯಗಳಿಂದ ಪರಶಿವನನ್ನು ತೃಪ್ತಿಪಡಿಸಬೇಕು. ಆ ಮೇಲೆ ಪ್ರದಕ್ಷಿಣೆ ನಮಸ್ಕಾರಪೂರ್ವಕವಾಗಿ ಪೂಜೆಯನ್ನು ಸಾಂಗಗೊಳಿಸಿ ಅನಂತರ ಪ್ರಸಾದವನ್ನು ಸ್ವೀಕರಿಸಬೇಕು. ಇದು ಸರ್ವಸಾಧಾರಣವಾಗಿ ಎಲ್ಲಾ ಜಾತಿಯವರಿಗೂ ಅನುಕೂಲವಾದ ಪೂಜಾವಿಧಾನವು. ಚಿತಾಭಸ್ಮವನ್ನು ನಿವೇದನೆ ಮಾಡಿದ ಕ್ಷಣವೆ ಪರಶಿವನು ಪ್ರತ್ಯಕ್ಷನಾಗುವನೆಂದು ಹಾಸ್ಯೋಕ್ತಿಯಿಂದ ನುಡಿಯಲು ಆ ಕಿರಾತಭಟನು ಅದನ್ನೆ ಮಹಾವಾಕ್ಯವೆಂದು ನಂಬಿ ಅದರಲ್ಲಿ ಸಂಪೂರ್ಣವಾದ ನಂಬುಗೆಯನ್ನಿಟ್ಟು, ತಾನು ಪ್ರತಿದಿನವೂ ತಪ್ಪದೆ ಅಂಥ ಪೂಜೆಯನ್ನು ಮಾಡಬೇಕೆಂದು ಗೊತ್ತುಮಾಡಿಕೊಂಡು ತದೇಕಚಿತ್ತನಾಗಿ ಮನೆಗೆ ಬಂದು, ಶಿವನಿಗೆ ಪ್ರೀತಿಕರವಾದ ಚಿತಾಭಸ್ಮವನ್ನು ತಂದು ಒಂದು ಭರಣಿಯಲ್ಲಿ ತುಂಬಿ ಇರಿಸಿಕೊಂಡವನಾಗಿ ಸಂಕಲ್ಪಪೂರ್ವಕ ಶಿವಪೂಜೆಯನ್ನು ಮಾಡತೊಡಗಿ ಆ ರಾಜಕುಮಾರನಲ್ಲಿದ್ದ ಲಿಂಗಮೂರ್ತಿಯಾದ ಪರಶಿವನನ್ನು ಆವಾಹನೆ ಆಸನ ಅರ್ಘ್ಯಪಾದ್ಯ ಅಭಿಷೇಕಾದಿಗಳಿಂದ ಪೂಜಿಸಿ ಬಳಿಕ ಅನ್ನಪಾನೀಯ ಕ್ಷೀರದಧಿ ಫಲಮೂಲಾದಿಗಳನ್ನು ನೈವೇದ್ಯಮಾಡಿ ಕಡೆಗೆ ಧೂಪದೀಪಾದಿಗಳಿಂದ ಪರಮೇಶ್ವರನನ್ನು ತೃಪ್ತಿಪಡಿಸಿ ಭಕ್ತಿಪೂರ್ವಕವಾಗಿ ಪ್ರತಿದಿನವೂ ತಪ್ಪದೆ ಶಿವಪೂಜೆಯನ್ನು ಮಾಡುತ್ತಿದ್ದನು ಆತನ ಹೆಂಡತಿಯೂ ಸಹ ಭಕ್ತಿವಂತಳಾಗಿ ತನ್ನ ಗಂಡನು ಮಾಡುತ್ತಿದ್ದ ಶಿವಪೂಜೆಯನ್ನು ನೋಡಿ ಆನಂದಭರಿತಳಾಗಿ ಕಡೆಗೆ ಶಿವನ ಪ್ರಸಾದವನ್ನು ತೆಗೆದುಕೊಂಡು ಹಣೆಯಲ್ಲಿ ಧರಿಸಿ, ಹರ್ಷಚಿತ್ತರಾಗಿ ಸತಿಪತಿಗಳಿಬ್ಬರೂ ಊಟಮಾಡಿ ಸಂತೋಷದಿಂದ ಸದಾಶಿವಮೂರ್ತಿಯನ್ನು ಧ್ಯಾನಮಾಡುತ್ತ ತಮಗೆ ಇಷ್ಟವಾದ ಹೂ, ಹಣ್ಣು, ತಾಂಬೂಲ, ಅನ್ನಪಾನ ಕ್ಷೀರಾದಿಗಳಲ್ಲಿ ಯಾವುದನ್ನು ಶಿವನಿಗೆ ಸಮರ್ಪಣೆ ಮಾಡದೆ ತಾವು ಉಪಯೋಗಿಸುತ್ತಿರಲಿಲ್ಲ. ಹೀಗೆ ಬಹುಭಕ್ತಿಯಿಂದ ಶಿವಪೂಜೆಯನ್ನು ಮಾಡುತ್ತಿದ್ದ

ಕಿರಾತಭಟನು ಒಂದು ದಿನ ಚಿತಾಭಸ್ಮವನ್ನು ತೆಗೆದಿಟ್ಟುಕೊಳ್ಳುವುದನ್ನು ಮರೆತುಹೋಗಿ ಆತುರದಲ್ಲಿ ಪೂಜೆಮಾಡಲು ಕುಳಿತು ಚಿತಾಭಸ್ಮ ಸಮರ್ಪಣೆಯ ಸಮಯದಲ್ಲಿ ಭರಣಿಯನ್ನು ಹುಡುಕಿನೋಡಿ ಸ್ವಲ್ಪವಾದರೂ ಚಿತಾಭಸ್ಮ ವಿಲ್ಲದಿದ್ದಕಾರಣ ಆತುರದಿಂದ ಸ್ಮಶಾನಕ್ಕೆ ಹೋಗಿ ಹುಡುಕಿದರೂ ಅಲ್ಲಿಯೂ ಸಿಕ್ಕದಿದ್ದಕಾರಣ ಚಿಂತಾಕ್ರಾಂತನಾಗಿ ಮನೆಗೆ ಬಂದು ತನ್ನ ಹೆಂಡತಿಯನ್ನು ಕಂಡು ಓ ಪ್ರಿಯೆ ! ನನಗೆ ಅರ್ಧಾಂಗಿಯಾದ ನೀನು ಇದುವರೆಗೆ ನನ್ನ ಶಿವ ಪೂಜೆಗೆ ಅನುಕೂಲಳಾಗಿ ನಡೆಸಿಕೊಂಡು ಬಂದೆ, ಈಗ ನನಗೆ ಒದಗಿರುವ ಕಷ್ಟವನ್ನು ಏನು ಹೇಳಲಿ ! ಚಿತಾಭಸ್ಮವನ್ನು ತರುವುದಕ್ಕಾಗಿ ಹೋಗಿ ಎಲ್ಲಿ ಹುಡುಕಿದರೂ ಸಿಕ್ಕದೆ ರಿಕ್ತಹಸ್ತದಿಂದ ಮನೆಗೆ ಬಂದೆನು. ಆಹಾ ! ಈಗ ನನ್ನ ಶಿವಪೂಜೆಗೆ ವಿಘ್ನಬಂದಿತಲ್ಲ ಏನುಮಾಡಲಿ ! ಹಿಡಿದ ವ್ರತವನ್ನು ಬಿಡು ವುದು ಹೇಗೆ ? ಪ್ರಾಣಗಳನ್ನಾದರೂ ಸುಖವಾಗಿ ಬಿಟ್ಟುಬಿಡಬಹುದು. ಹಿಡಿದ ವ್ರತವನ್ನು ಎಂದಿಗೂ ಬಿಡಬಾರದು ನೈವೇದ್ಯವಿಲ್ಲದೆ ಮಾಡುವ ಪೂಜೆಯು ಪವಿತ್ರವಾದುದಲ್ಲ. ಅಂಥ ಪೂಜೆಯಿಂದ ಪರಶಿವನು ಪ್ರಸನ್ನನೂ ಆಗುವುದಿಲ್ಲ ರಾಜಕುಮಾರನು ಹೇಳಿದ ವಾಕ್ಯವು ಮೀರತಕ್ಕದ್ದಲ್ಲ ಇದಕ್ಕೆ ಉಪಾಯ ವೇನೂ ತೋರಲಿಲ್ಲ, ಏನು ಮಾಡಲಿ ? ಎಂದು ಚಿಂತಿಸುತ್ತಿರುವಾಗ ತನ್ನ ಗಂಡನನ್ನು ಕುರಿತು ಆ ಕಿರಾತೆಯು ಎಲೈ ಪ್ರಾಣಕಾಂತನೆ ! ಇದಕ್ಕೆ ಇಷ್ಟೊಂದು ಚಿಂತೆಯೇಕೆ ? ನಾನೊಂದು ಉಪಾಯವನ್ನು ಹೇಳುವೆನು ಕೇಳು. ಈ ಮನೆಗೆ ಬೆಂಕಿಯನ್ನು ಹೊತ್ತಿಸಿದರೆ ನಾನು ಇಲ್ಲೆ ಇದ್ದುಕೊಂಡು ಉರಿದುಹೋಗು ವೆನು, ಆಗ ನಿನಗೆ ನಿರಾಯಾಸದಿಂದ ಚಿತಾಭಸ್ಮವು ದೊರೆಯುವುದು ನಿನ್ನ ಶಿವಪೂಜೆಯೂ ಸಾಂಗವಾಗುವುದು ಎಂದಳು. ಆಗ ಆ ಕಿರಾತಭಟನು ಎಲೈ ಪ್ರಿಯಳೆ ! ಈ ಶರೀರವು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ಸಾಧಿಸತಕ್ಕದ್ದು ಸಮಸ್ತ ಸುಖ ದುಃಖಗಳಿಗೂ ಈ ದೇಹವೇ ಮುಖ್ಯ ಸಾಧನವಾಗಿದೆ ನೀನೂ ಇನ್ನೂ ಚಿಕ್ಕ ಪ್ರಾಯದವಳು, ಮಕ್ಕಳು ಮರಿಗಳನ್ನು ಹಡೆದವಳಲ್ಲ, ಇಚ್ಛಾನುಸಾರವಾಗಿ ಭೋಗವನ್ನು ಅನು ಭವಿಸಿದವಳಲ್ಲ, ಪ್ರಪಂಚದ ಸಾರವನ್ನರಿತು ಸಂಸಾರಮಾಡಿ ಕಂಗೆಟ್ಟವಳಲ್ಲ, ನೀನು ಅನುಭವಿಸಬೇಕಾದ ಭೋಗಭಾಗ್ಯಗಳು ಇನ್ನು ಬಹಳವಾಗಿವೆ ಹೀಗಿರು ವಲ್ಲಿ ನೀನು ಈ ದೇಹವನ್ನು ಕಳೆದುಕೊಳ್ಳುವುದಕ್ಕೆ ಹೇಗೆ ಒಪ್ಪುತ್ತೀಯೆ ? ಶಿವಶಿವ ! ಇದು ಆಶ್ಚರ್ಯ, ಎಂದು ಹೇಳಿದನು. ಆಗ ಕಿರಾತಸ್ತ್ರೀಯು ತನ್ನ ಗಂಡನನ್ನು ಕುರಿತು ಎಲೈ ಪ್ರಾಣನಾಥನೆ ! ಇದೇನು ಶಿವಭಕ್ತಿ ಸಂಪನ್ನನಾದ ನೀನು ಹೀಗೆ ಹೇಳುವುದು ನ್ಯಾಯವೆ ? ಈ ಶರೀರವು ಇಂದೇ ಆಗಲಿ ! ಅಥವಾ ನಾಳೆಯೆ ಆಗಲಿ ! ಮತ್ತೆ ಎಷ್ಟುದಿನಗಳ ಮೇಲಾದರೂ ಸಾಯತಕ್ಕದೆ

ಹೊರತು ಶಾಶ್ವತವಾಗಿ ಇರತಕ್ಕದಲ್ಲ. ಹೀಗೆ ನಶ್ವರವಾದ ಈ ದೇಹವು ಪರಾರ್ಥಕ್ಕಾಗಿ ಸಲ್ಲುವುದಾದರೆ ಬಹಳ ಫಲಕಾರಿಯಾಗುವುದು ಎನ್ನುವಲ್ಲಿ ಶಿವ ಸಮರ್ಪಣೆಗಾಗಿ ಸಂದರೆ ಪುಣ್ಯವಲ್ಲವೆ? ಹೀಗೆ ನನ್ನ ದೇಹವನ್ನು ಶಿವ ಸಮರ್ಪಣೆ ಮಾಡಬೇಕಾದರೆ ನಾನೂ ಬಹು ಪುಣ್ಯವನ್ನು ಮಾಡಿರಬೇಕು. ನಮ್ಮ ತಂದೆತಾಯಿಗಳೂ ಪುಣ್ಯರೂಪವಾದ ಶಿವಭಕ್ತಿ ಸಂಪನ್ನರಾಗಿರಬೇಕು. ಹಾಗಿಲ್ಲವಾದರೆ ನನಗೆ ಇಂಥ ಸುಯೋಗವೂ, ದೃಢಭಕ್ತಿಯೂ, ನಿನ್ನಂಥ ಗಂಡನೂ ಎಂದಿಗೂ ದೊರೆಯುತ್ತಿರಲಿಲ್ಲ. ನನ್ನ ಮಾತಿಗೆ ನೀನು ಪ್ರತಿಯಾಡ ಬೇಡ ನಿನ್ನ ಶಿವಪೂಜೆಗೆ ನೆರವಾಗುವೆನೆಂದು ಹೇಳಲು, ಕಿರಾತಭಟನು ತನ್ನ ಹೆಂಡತಿಯ ಶಿವಭಕ್ತಿಗೂ ಮನೋನಿಶ್ಚಯಕ್ಕೂ ಮೆಚ್ಚಿ ಅವಳನ್ನು ಹೊಗಳುತ್ತ ಒಡಂಬಟ್ಟವನಾದನು. ಬಳಿಕ ಆ ಕಿರಾತೆಯು ಭಕ್ತಿ ಸಂಪನ್ನಳಾಗಿ ಶಿವನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ತನ್ನ ಮನೆಗೆ ಬೆಂಕಿಯನ್ನು ಹೊತ್ತಿಸಿ ತಾನು ಅಲಂ ಕಾರವಿಶಿಷ್ಟಳಾಗಿ ಆ ಮನೆಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಸಮರ್ಪಿಸಿ ತನ್ನ ಗಂಡನಿಗೂ ನಮಸ್ಕರಿಸಿ ಅವಳನ್ನು ಕೇಳಿಕೊಂಡು ತನ್ನ ದೇಹವನ್ನು ಅಗ್ನಿಗೆ ಆಹುತಿಯಾಗಿ ಕೊಟ್ಟು ಶಿವಾರ್ಪಣಮಸ್ತು ಎಂದು ಹೇಳುತ್ತ ಕರ್ಪೂರ ಖಂಡ ದಂತೆ ಕ್ಷಣಮಾತ್ರದಲ್ಲಿ ಆ ಉರಿಗೆ ಸಿಕ್ಕಿ ಭಸ್ಮವಾಗುವಕಾಲದಲ್ಲಿ ಶಿವಸ್ಮರಣೆ ಯನ್ನು ಮಾಡುತ್ತ ಇಂತೆಂದಳು.

ಎಲೈ ಪರಶಿವನೆ! ಶಿವಾರ್ಪಿತವಾಗಲೆಂದು ಈಗ ನಾನು ಈ ಅಗ್ನಿಗೆ ಸಮರ್ಪಿಸುತ್ತಿರುವ ನನ್ನ ದೇಹವು ನಿನಗೆ ಧೂಪಕಾಷ್ಠಗಳಾದ ಅಗಿಲು ಚಂದನ ಗಳಾಗಲಿ! ನನ್ನ ಘ್ರಾಣರಸನಾದಿ ಬಾಹ್ಯೇಂದ್ರಿಯಗಳು ನಿನಗೆ ಪುಷ್ಪ ಸಮೂ ಹವಾಗಲಿ! ನನ್ನ ಮನಸ್ಸು ದೀಪವಾಗಲಿ! ನನ್ನ ಭಕ್ತಿಯು ನಿನಗೆ ಫಲವಾ ಗಲಿ! ನನ್ನ ಈ ಪಂಚಪ್ರಾಣಗಳೂ ನಿನಗೆ ನೈವೇದ್ಯವಾಗಲಿ! ನನ್ನ ಕೈಕಾಲು ಮೊದಲಾದ ಅವಯವಗಳು ನಿನಗೆ ತಿಲಾಕ್ಷತೆಗಳಾಗಲಿ! ನನ್ನ ಜೀವವು ಶಿವ ಪೂಜಾಫಲವನ್ನು ಪಡೆಯಲಿ! ನಾನಾದರೋ ಇಹಲೋಕದ ಭೋಗಗಳ ನ್ನಾಗಲಿ ಪರಲೋಕದ ಸುಖಗಳನ್ನಾಗಲಿ ಬಯಸತಕ್ಕವಳಲ್ಲ; ಆದರೆ ನನ್ನ ಕರ್ಮವಿಪಾಕದಿಂದ ಮುಂದೆ ನನಗೆ ಜನ್ಮಂಗಳು ಬರಬಹುದಾಗಿದ್ದರೆ ಆ ಜನ್ಮಗಳಲ್ಲಿಯೂ ಕೂಡ ಭೃಂಗಗಳು ಮಕರಂದವನ್ನು ಪಾನಮಾಡುವುದ ಕ್ಕಾಗಿ ಕಮಲವನ್ನು ಆಶ್ರಯಿಸುವಂತೆ ನಾನು ನಿನ್ನ ಚರಣಾರವಿಂದಗಳಲ್ಲಿ ಆಸ ಕ್ತಳಾಗಿರುತ್ತೇನೆ ಆದರೆ ಮರ್ಕಟದಂತೆ ಸದಾ ಚಂಚಲವಾದ ನನ್ನ ಮನಸ್ಸು ಸಂಸಾರಕ್ಕೆ ಮೂಲಭೂತವಾದ ಮಾಯಾಶಕ್ತಿಗೆ ಸಿಕ್ಕಿ ನರಳದೆ ಸದಾ ನಿನ್ನ ಚರಣ ಸುಧೆಯನ್ನು ಸವಿಯುವಂತೆ ಅನುಗ್ರಹಮಾಡು ನಿನಗೆ ನಮಸ್ಕಾರ ಎಂದು ಹೇಳಿ ದೃಢಚಿತ್ತಳಾಗಿ ಬೆಂಕಿಯಲ್ಲಿ ಬಿದ್ದು ಕ್ಷಣಮಾತ್ರದಲ್ಲಿ ಉರಿದು

ಹೋದಳು. ಆ ಬಳಿಕ ಕಿರಾತನು ಸುಟ್ಟುಹೋದ ತನ್ನ ಮನೆಯ ಬಳಿಯಲ್ಲಿಯೆ ಶಿವಪೂಜೆಯನ್ನು ಮಾಡಿ ಚಿತಾಭಸ್ಮವನ್ನು ಶಿವನಿಗೆ ಸಮರ್ಪಿಸಿ ತನ್ನ ಪೂಜೆಯು ಸಾಂಗವಾದಮೇಲೆ ಪ್ರಸಾದವನ್ನು ಸ್ವೀಕರಿಸುವದಕ್ಕಾಗಿ ಭಕ್ತಿಭರದಿಂದ ಕೈಜೋಡಿಗಸೆಯನ್ನೊಡ್ಡಿಕೊಂಡು ತನ್ನ ಬಳಿಗೆ ಬರುತ್ತಿದ್ದ ಹೆಂಡತಿಯನ್ನು ಸ್ಮರಿಸಿಕೊಳ್ಳಲು ಅವಳು ಎಂದಿನಂತೆ ದಿವ್ಯವಾದ ತನ್ನ ನಿಜ ಶರೀರದಿಂದ ಒಪ್ಪುತ್ತ ಅಲಂಕಾರವಿಶಿಷ್ಟಳಾಗಿ ಮುಗುಳುನಗೆಯಿಂದ ಕೂಡಿ ಪ್ರಸಾದವನ್ನು ತೆಗೆದುಕೊಳ್ಳುವದಕ್ಕಾಗಿ ನಿಂತಿರಲು ಆ ಕಿರಾತನು ಆಶ್ಚರ್ಯಭರಿತನಾಗಿ ಇದೇನು ವಿಚಿತ್ರ ಅಗ್ನಿ ದಗ್ಧವಾದ ಮನೆಯು ಎಂದಿನಂತೆ ಹೊಳೆಯುತ್ತಿದೆ ಅದರಲ್ಲಿ ಬಿದ್ದು ಪ್ರಾಣವನ್ನು ಕಳೆದುಕೊಂಡ ಹೆಂಡತಿಯೂ ಸಹ ಪ್ರಾಣಸಹಿತಳಾಗಿ ಬಂದು ನಿಂತಿದ್ದಾಳೆ ಇದಕ್ಕೆ ಕಾರಣವೇನು? ಇದೇನು ಸ್ವಪ್ನವೋ ಅಥವಾ ಬುದ್ಧಿಭ್ರಮಣೆಯೋ ತಿಳಿಯದು ಎಂದು ತನ್ನ ಹೆಂಡತಿಯಕಡೆಗೆ ತಿರುಗಿ ಎಲೌ ಪ್ರಾಣಕಾಂತೆ ಬೆಂಕಿಯಲ್ಲಿ ಬಿದ್ದು ಸತ್ತುಹೋದ ನೀನು ಮರಳಿ ದೇಹಧಾರಿಯಾಗಿ ಹೇಗೆ ಬಂದೆ! ಸುಟ್ಟುಹೋದ ಮನೆಯು ಮೊದಲಿಗಿಂತಲೂ ರಮ್ಯವಾಗಿ ಪ್ರಕಾಶಿಸುತ್ತಿದೆ, ಇದಕ್ಕೆ ಕಾರಣವೇನು? ಈ ಆಶ್ಚರ್ಯವನ್ನು ನೀನು ಏನಾದರೂ ಬಲ್ಲೆಯಾ ಎಂದು ಕೇಳಲು ಆ ಕಿರಾತಸ್ತ್ರೀಯು ತನ್ನ ಗಂಡನನ್ನು ಕುರಿತು ಸ್ವಾಮಿಾ! ನಿನ್ನ ಅಪ್ಪಣೆ ಪಡೆದು ನಾನು ಮನೆಗೆ ಬೆಂಕಿಯನ್ನು ಹೊತ್ತಿಸಿ ಅದರಲ್ಲಿ ಧುಮಿಕಿದಾಗ ನನ್ನನ್ನು ನಾನು ತಿಳಿಯದವಳಾದೆ, ಹಾಗಾದರೆ ಕಿಂಚಿತ್ತಾದರೂ ತಾಪವಿಲ್ಲದೆ ಅಮೃತಸರೋವರದಲ್ಲಿ ಮುಳುಗಿ ಆನಂದದಿಂದಿದ್ದವರಹಾಗೆ ಕ್ಷಣಕಾಲ ಇದ್ದು ಆ ಬಳಿಕ ಕಣ್ಣು ಬಿಟ್ಟು ನೋಡುವಲ್ಲಿ ಮನೆಯು ಮನೋಹರವಾಗಿ ಕಾಣಿಸಿತು. ನಿನ್ನ ಪೂಜೆಯು ಅಷ್ಟು ಹೊತ್ತಿಗೆ ಮುಗಿದಿದ್ದಕಾರಣ ಸಂತೋಷಚಿತ್ತಳಾಗಿ ನಾನು ಪ್ರಸಾದವನ್ನು ಸ್ವೀಕರಿಸುವುದಕ್ಕೆ ಬಂದೆನು. ಇಷ್ಟು ಹೊರತು ಇನ್ನಾವ ಸಂಗತಿಯೂ ನನಗೆ ತಿಳಿಯದು ಎಂದು ಹೇಳಲು ಗಂಡನು ಅಶ್ಚರ್ಯಭರಿತನಾಗಿ ಶಿವಮಹಿಮೆಯು ಸಾಧಾರಣವಾದುದಲ್ಲ ಯಾವ ಕಾಲಕ್ಕೆ ಯಾವರೀತಿಯಲ್ಲಿ ಹೇಗೆ ಪರಿಣಮಿಸುವುದೊ ತಿಳಿಯ್ಯಲಾಗದು ಎಂದು ಪ್ರಸ್ತಾಪಿಸುತ್ತಿರಲು ಕೂಡಲೆ ಮನೋಹರವಾದ ಚಂದ್ರಬಿಂಬದಂತೆ ಹೊಳೆಯುತ್ತಿದ್ದ ಶುಭ್ರವಾದ ಒಂದು ವಿಮಾನವು ಅವರಿದ್ದ ಕಡೆಗೆ ಬಂದಿತು ಅದರ ಜೊತೆಯಲ್ಲಿ ಬಂದಿದ್ದ ವಿಭೂತಿರುದ್ರಾಕ್ಷಿ ಭೂಷಿತರಾದ ನಾಲ್ಕು ಜನ ಕಿಂಕರರು ಆ ಕಿರಾತನನ್ನೂ ಅವನ ಹೆಂಡತಿಯನ್ನು ಹಿಡಿದೆತ್ತಿ ಆ ವಿಮಾನದಲ್ಲಿ ಕುಳ್ಳಿರಿಸಿಕೊಂಡು ಹೊರಟರು. ಬಳಿಕ ಶಿವಕಿಂಕರರ ಹಸ್ತಸ್ಪರ್ಶದಿಂದ ಆನಂದಭರಿತರಾದ ಆ ಕಿರಾತ ದಂಪತಿಗಳು ಮೋಕ್ಷಸ್ಥಾನವಾದ ಕೈಲಾಸವನ್ನು ಸೇರಿದರು. ಹೀಗೆ ದೃಢಭಕ್ತಿಯುಳ್ಳವರಾಗಿ ಶ್ರದ್ಧೆಯಿಂದ ಶಿವನನ್ನು

ಪೂಜಿಸುತ್ತಿದ್ದ ಕಾರಣ ಆ ಕಿರಾತ ದಂಪತಿಗಳು ಕೈಲಾಸವನ್ನು ಪಡೆದು ಅಲ್ಲಿ ಅನಂತವಾದ ನಿತ್ಯ ಸುಖವನ್ನು ಅನುಭವಿಸುತ್ತಿದ್ದರು. ಆದಕಾರಣ ಸರ್ವರೂ ಸಮಸ್ತ ಕಾರ್ಯಗಳಲ್ಲಿಯೂ ಚೆನ್ನಾಗಿ ವಿಶ್ವಾಸವಿಡಬೇಕು. ವಿಶ್ವಾಸವೇ ಲೋಕ ದಲ್ಲಿ ಪರಮಶ್ರೇಷ್ಠವಾದದ್ದು ಈ ವಿಶ್ವಾಸದಿಂದಲೆ ನೀಚಕುಲದಲ್ಲಿ ಹುಟ್ಟಿ ಕಿರಾತ ಜೀವಿಯಾದ ಚಂಡನೆಂಬವನು ಸದ್ಭಕ್ತಿವಂತಳಾಗಿದ್ದ ತನ್ನ ಹೆಂಡತಿ ಯೊಡನೆ ಕೈಲಾಸವನ್ನು ಪಡೆದನು. ಆದಕಾರಣ ಉತ್ತಮ ಜಾತಿಯಿಂದಲೂ ಶ್ರೇಷ್ಠವಾದ ಕುಲದಿಂದಲೂ, ವೇದಶಾಸ್ತ್ರಗಳ ವಿಚಾರದಿಂದಲೂ, ಪುರಾಣ ಕಥೆಗಳನ್ನು ಹೇಳಿ ಕೇಳುವುದರಿಂದಲೂ, ಮನುಷ್ಯನು ಎಂದಿಗೂ ಧನ್ಯನಾಗುವು ದಿಲ್ಲ. ಮತ್ತೇನೆನ್ನುವಿರೊ! ಯಾರ ಮನಸ್ಸಿನಲ್ಲಿ ಚಂಚಲರಹಿತವಾದ ದೃಢ ಭಕ್ತಿಯು ಬೇರೂರಿಕೊಂಡಿರುವುದೊ ಆ ಮನುಷ್ಯನೇ! ಧನ್ಯನು ಪರಮಶ್ರೇ ಷ್ಠನು ತ್ರಿಲೋಕಪೂಜ್ಯನು ಇದಕ್ಕೆ ಕಿಂಚಿತ್ತಾದರೂ ಸಂದೇಹವೇ ಇಲ್ಲವೆಂದು ಸೂತಪುರಾಣಿಕನು ಶೌನಕಾದಿ ಮಹಾಮುನಿಗಳಿಗೆ ನಿರೂಪಿಸಿದನೆಂಬಿಲ್ಲಿಗೆ—

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರ ನರಪತಿ ಬಿರುದೆಂತೆಂಬರಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡಾದಿ ನಾನಾ ಬಿರುದಾಂಕಿತ ಯಾದವಕುಲತಿಲಕ ಆತ್ರೇಯಸ ಗೋತ್ರ ಅಶ್ವಲಾಯನ ಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರ ರಾಜ ಒಡೆಯರ ಪೌತ್ರ ನರಸಭೂಪಾಲಕರ ಪುತ್ರ ಶ್ರೀ ಇಮ್ಮಡಿ ಚಾಮರಾಜ ಒಡೆ ಯರವರು ಕರ್ಣಾಟಕ ಭಾಷೆಯಲ್ಲಿ ವಿರಚಿಸಿದ ಸ್ಕಂದಪುರಾಣೋಕ್ತ ಬಹ್ಮೋ ತ್ತರಖಂಡದಲ್ಲಿ ಭಕ್ತಿಪ್ರಾಧಾನ್ಯ ಮಹಿಮೆಯಿಂದ ಕಿರಾತ ದಂಪತಿಗಳಿಗೆ ಶಿವ ಸಾಯುಜ್ಯವಾದಿಲ್ಲಿಗೆ,

೧೭ನೆಯ ಅಧ್ಯಾಯಕ್ಕೆ ಮಂಗಳಮಸ್ತು.

---

## ರುದ್ರಾಕ್ಷ ಮಹಿಮೆ.

### ಹದಿನೆಂಟನೆಯ ಅಧ್ಯಾಯ.

ಅನಂತರದಲ್ಲಿ ಸೂತಪುರಾಣಿಕನು ಶೌನಕಾದಿ ಮಹಾಮುನಿಗಳನ್ನು ಕುರಿತು, ಎಲೈ ಋಷಿಗಳಿರಾ! ಕೇಳಿ ಇದುವರೆಗೂ ನಾನು ಹೇಳಿದ ಕಥೆಗಳಿ ಗಿಂತ ಬಹು ಆಶ್ಚರ್ಯದಾಯಕವಾಗಿಯೂ ಹೇಳಿದವರಿಗೂ ಕೇಳಿದವರಿಗೂ ಸಕಲ ಪಾಪಗಳನ್ನು ಪರಿಹರಿಸತಕ್ಕದ್ದಾಗಿಯೂ, ವೇದಸಮ್ಮತವಾಗಿಯೂ, ಶಿವಪ್ರೀತಿ ಕರವಾಗಿಯೂ, ಸರ್ವಧರ್ಮಗಳಲ್ಲಿಯೂ ಶ್ರೇಷ್ಠವಾದುದಾಗಿಯೂ ಇರುವ

ರುದ್ರಾಕ್ಷ ಮಹಿಮೆಯುನ್ನು ಶಿವಭಕ್ತಿಸಂಪನ್ನರಾದ ನಿಮಗೋಸ್ಕರ ವಿವರಿಸಿ ನಿರೂಪಿಸುವೆನೆಂದು ಋಷಿಗಳನ್ನು ಮರಳಿ ಎಚ್ಚರಿಸಿ ಹೀಗೆ ಹೇಳಲಾರಂಭಿಸಿದನು.

ಈ ಲೋಕದಲ್ಲಿ ರುದ್ರಾಕ್ಷಧಾರಣೆಗೆ ಸಮಾನವಾದ ಧರ್ಮವು ಮತ್ತಾವುದೂ ಇಲ್ಲ. ಆದುದರಿಂದ ತತ್ವಜ್ಞರಾದ ಮಹಾಋಷಿಗಳು ಸಮಸ್ತ ವ್ರತಗಳಿಗಿಂತಲೂ ಶ್ರೇಷ್ಠವಾದ ಈ ರುದ್ರಾಕ್ಷ ಧಾರಣ ವ್ರತವನ್ನು ಕೈಗೊಂಡು ತಪ್ಪದೆ ಆಚರಿಸುತ್ತಿರುವರು. ಲೋಕದಲ್ಲಿ ನೀಚನಾಗಲಿ, ಉತ್ತಮನಾಗಲಿ, ಭಕ್ತಿಹೀನನಾಗಲಿ, ಅಥವಾ ಭಕ್ತಿಯುಳ್ಳವನೇ ಆಗಲಿ, ಯಾವನೊಬ್ಬನು ಈ ರುದ್ರಾಕ್ಷಗಳನ್ನು ಧರಿಸಿಕೊಳ್ಳುವನೊ, ಅಂಥವನು ಯಾವ ಮಹಾಪಾತಕಗಳನ್ನಾದರೂ ಜಯಿಸಬಲ್ಲನು, ಸಕಲ ಪಾಪಗಳೂ ಪರಿಹಾರವಾಗುವಲ್ಲಿ ಪಂಚ ಮಹಾ ಪಾತಕಗಳೆಲ್ಲಿ ನಿಂತಾವು ? ಇದೂ ಅಲ್ಲದೆ ಯಾವನೊಬ್ಬನು ದೃಢವ್ರತನಾಗಿ ಸಾವಿರ ರುದ್ರಾಕ್ಷಗಳನ್ನು ಧರಿಸಿಕೊಳ್ಳುವನೋ, ಅಂಥವನನ್ನು ಕಂಡರೆ ಪರಮೇಶ್ವರನಿಗೆ ನಮಸ್ಕರಿಸುವಂತೆ ಸರ್ವರೂ ನಮಸ್ಕರಿಸುವರು. ಸಾವಿರ ರುದ್ರಾಕ್ಷಗಳು ದೊರೆಯದಿದ್ದರೆ ಭುಜಗಳಲ್ಲಿ ಹದಿನಾರು ಹದಿನಾರು, ಹಸ್ತಗಳಲ್ಲಿ ಹನ್ನೆರಡು ಹನ್ನೆರಡು, ಕಂಠದಲ್ಲಿ ಮೂವತ್ತೆರಡು, ಶಿಖೆಯಲ್ಲಿ ಒಂದು, ಶಿರಸ್ಸಿನಲ್ಲಿ ನಲವತ್ತು, ಕರ್ಣಗಳಲ್ಲಿ ಆರು ಆರು, ಅಥವ ಒಂದೊಂದು ವಕ್ಷಸ್ಥಳದಲ್ಲಿ ನೂರೆಂಟು. ಹೀಗೆ ಪಾದಸಹಸ್ರಗಣನೆಯಿಂದ ಇನ್ನೂರೈವತ್ತು ಮಣಿಗಳನ್ನಾದರೂ ಧರಿಸಿಕೊಳ್ಳಬೇಕು. ಮುತ್ತುಗಳನ್ನೂ, ಹವಳಗಳನ್ನೂ, ವಜ್ರಗಳನ್ನೂ, ಸ್ಫಟಿಕಗಳನ್ನೂ, ವೈಡೂರ್ಯ, ಗೋಮೇಧಿಕ, ಪುಷ್ಯರಾಗದ ಮಣಿಗಳನ್ನು ಚಿನ್ನದ ಗುಂಡುಗಳನ್ನು, ಬೆಳ್ಳಿಯ ಮಣಿಗಳನ್ನೂ ಒಟ್ಟಾಗಿ ಸೇರಿಸಿ ಸರವನ್ನು ಮಾಡಿ ಧರಿಸಿಕೊಳ್ಳುವ ಪುಣ್ಯಾತ್ಮನು ಕೇವಲ ಸುಲಭೋಪಾಯದಿಂದ ಕೈಲಾಸ ಪದವಿಯನ್ನು ಸಂಪಾದಿಸುವನು ಅಂಥ ಮುತ್ತುಗಳೂ, ರತ್ನಗಳೂ, ಸಿಕ್ಕಸಿದ್ದರೆ ಬರಿಯ ರುದ್ರಾಕ್ಷಿಗಳನ್ನಾದರೂ ಧರಿಸಿದವನಿಗೆ ಪಾಪಸಮೂಹಗಳೆಲ್ಲವೂ ಸೂರ್ಯನನ್ನು ಕಂಡು ಹೆದರಿ ಹಿಮ್ಮೆಟ್ಟುವ ಕಗ್ಗತ್ತಲೆಯಂತೆ ದೂರವಾಗಿ ಓಡಿ ಹೋಗುವುವು. ರುದ್ರಾಕ್ಷ ಮಾಲೆಯಿಂದ ಮಾಡಿದ ಜಪವು ಅನಂತರೂಪವಾದ ಫಲಗಳನ್ನು ಕೊಡುವುದು. ರುದ್ರಾಕ್ಷವಿಲ್ಲದ ಸಾಮಾನ್ಯ ಮಾಲಿಕೆಯಿಂದ ಮಾಡಿದ ಜಪವು ಸಾಧಾರಣ ಫಲವನ್ನೆ ಕೊಡುವುದು. ಯಾವನು ಒಂದು ರುದ್ರಾಕ್ಷಿಯನ್ನಾದರೂ ತನ್ನ ದೇಹದಲ್ಲಿ ಧರಿಸಿಕೊಳ್ಳದೆ ಇರುವನೊ ಅವನ ಜನ್ಮವು ತ್ರಿಪುಂಡ್ರಹೀನನಾದ ಮಾನವನ ಜನ್ಮದಂತೆ ನಿರರ್ಥಕವಾದುದು ಇಂಥಾ ರುದ್ರಾಕ್ಷಿಯನ್ನು ನಡುನೆತ್ತಿಯಮೇಲಿಟ್ಟುಕೊಂಡು ಸ್ನಾನಮಾಡಿದರೆ ಗಂಗಾಸ್ನಾನಫಲ ಪ್ರಾಪ್ತಿಯಾಗುವದು. ಇದಕ್ಕೆ ಸ್ವಲ್ಪವಾದರೂ ಅನುಮಾನ ವಿಲ್ಲ. ಅಲ್ಲದೆ ಅಭಿಷೇಕವೊಂದನ್ನು ಬಿಟ್ಟು ಉಳಿದ ಸಕಲೋಪಚಾರಗಳಿಂ

ದಲೂ ರುದ್ರಾಕ್ಷವನ್ನು ಪೂಜೆಮಾಡಿದವರಿಗೆ ಸಂಪೂರ್ಣವಾದ ಶಿವಪೂಜಾಫಲವೇ ಪ್ರಾಪ್ತವಾಗುವುದು. ಈ ರುದ್ರಾಕ್ಷಗಳಲ್ಲಿ ಹಲವು ಬಗೆಯುಂಟು. ಅವುಗಳಲ್ಲಿ ಒಂದು ಮುಖವುಳ್ಳ ಏಕಮುಖಿ ಎಂಬುದೂ, ಐದುಮುಖಗಳುಳ್ಳ ಪಂಚಮುಖಿಯೂ, ಹನ್ನೊಂದು ಮುಖವುಳ್ಳ ಏಕಾದಶ ಮುಖಿಯೂ, ಹದಿನಾಲ್ಕು ಮುಖಗಳುಳ್ಳ ಚತುರ್ದಶ ಮುಖಿಯೂ, ಬಹು ಶ್ರೇಷ್ಠವಾದದ್ದು ಪರಶಿವನ ಸ್ವರೂಪವಾದ ಈ ರುದ್ರಾಕ್ಷಗಳನ್ನು ಭಕ್ತಿಯಿಂದ ಪೂಜಿಸಿದ ಮಾತ್ರದಲ್ಲಿ ದರಿದ್ರನಾದವನು ಕುಬೇರನಂತೆ ಧನಿಕನಾಗುವನು. ಇದನ್ನು ಸ್ಪಷ್ಟಪಡಿಸುವ ಆಶ್ಚರ್ಯಕರವಾದ ಒಂದಾನೊಂದು ಇತಿಹಾಸವನ್ನು ಹೇಳುವೆನು ಕೇಳಿ, ಎಂದು ಎಚ್ಚರಿಸಿ ಸೂತಪುರಾಣಿಕನು ರುದ್ರಾಕ್ಷಿಯ ಕಥೆಯನ್ನು ಹೇಳಲಾರಂಭಿಸಿದನು.

ಪೂರ್ವಕಾಲದಲ್ಲಿ ಕಾಶ್ಮೀರದಲ್ಲಿ ಭದ್ರಸೇನನೆಂಬ ಮಹಾರಾಯನಿದ್ದನು. ಆತನಿಗೆ ಸುಧರ್ಮನೆಂಬ ಒಬ್ಬ ಪುತ್ರನಾದನು. ಅವನು ಮತ್ತು ಆ ರಾಜ್ಯದ ಮುಖ್ಯ ಪ್ರಧಾನಿಯ ಮಗನಾದ ತಾರಕನೆಂಬವನೂ ಚಿಕ್ಕಂದಿನಿಂದಲೂ ಜೊತೆಗಾರರಾಗಿದ್ದುಕೊಂಡು ಪರಮ ಸ್ನೇಹಭಾವದಿಂದ ವಿದ್ಯೆಯನ್ನು ಕಲಿತು, ಗುರು ಸೇವೆಯನ್ನು ಮಾಡಿ, ಬಿಂಬ ಪ್ರತಿಬಿಂಬಗಳಂತೆ ಒಬ್ಬರನ್ನೊಬ್ಬರು ಅಗಲದೆ ಸಂತೋಷಭರಿತರಾಗಿದ್ದರು. ಸಕಲ ಶಾಸ್ತ್ರಾರ್ಥಗಳನ್ನು ತಿಳಿದು ವೇದ ಸಮ್ಮತವಾದ ಮಾರ್ಗದಲ್ಲಿ ನಡೆಯುತ್ತ ದೈವಭಕ್ತಿ ಸಮನ್ವಿತರಾಗಿದ್ದ ಕಾರಣ ಅವರಿಬ್ಬರೂ, ಸೌಂದರ್ಯಯುಕ್ತವಾದ ತಮ್ಮ ದೇಹಗಳಲ್ಲಿಯೂ, ಅವಯುವಗಳಲ್ಲಿಯೂ, ದಿವ್ಯವಾದ ರುದ್ರಾಕ್ಷಿಗಳನ್ನು ಧರಿಸಿ ಭಸ್ಮೋದ್ಧೂಳವನ್ನು ಮಾಡಿಕೊಂಡು ತೃಪ್ತರಾಗಿದ್ದರು. ರಾಜಕುಮಾರರಾದ ಅವರಿಗೆ ರತ್ನಾಭರಣ ಹಾರನೂಪುರ ಕಂಕಣಾದಿಗಳು, ಹೆಂಚು ಬಕ್ಕರೆಗಳಂತೆ ಉದಾಶೀನತೆಗೆ ಕಾರಣವಾದುವು. ಇದನ್ನು ಕಂಡು ರಾಜನೂ ಪ್ರಧಾನಿಯೂ ತಮ್ಮ ಮಕ್ಕಳನ್ನು ಕರೆದು ಅಯ್ಯಾ! ನೀವು ರಾಜಪುತ್ರರು ರಾಜಯೋಗ್ಯವಾದ ಆಭರಣಗಳನ್ನು ಧರಿಸಿಕೊಳ್ಳದೆ ಸನ್ಯಾಸಿಗಳಂತೆ ಬರಿಯ ರುದ್ರಾಕ್ಷಗಳನ್ನು ಧರಿಸಿಕೊಳ್ಳುವುದು ಸರಿಯಲ್ಲ, ಇನ್ನುಮೇಲಾದರೂ ರಾಜಚಿಹ್ನೆಗೆ ಭೂಷಣವಾದ ರತ್ನಾಭರಣಗಳಿಂದ ಅಲಂಕೃತರಾಗಿರಿ, ಎಂದು ಹೇಳಿದರು. ಆದರೂ ಆ ಮಕ್ಕಳು ರುದ್ರಾಕ್ಷಗಳಲ್ಲಿ ಆಸಕ್ತಿಯುಳ್ಳವರಾಗಿರುತ್ತಿದ್ದರು. ಹೀಗಿರುವಲ್ಲಿ ಒಂದುದಿನ ಶುಭಮುಹೂರ್ತದಲ್ಲಿ ಬ್ರಹ್ಮದೇವನಿಗೆ ಸಮಾನನಾದ ಪರಾಶರ ಮಹಾಮುನಿಯು ಆ ರಾಯನ ಅರಮನೆಗೆ ಬಂದನು. ಆಗ ಭಕ್ತಿಸಂಪನ್ನನಾದ ಆ ಭದ್ರಸೇನನು ಅರ್ಘ್ಯಪಾದ್ಯಾಚಮನೀಯಗಳಿಂದ ಆ ಪರಾಶರಮಹಾಮುನಿಯನ್ನು ಪೂಜಿಸಿ ಕುಶಲಪ್ರಶ್ನೆಯನ್ನು ಮಾಡಿ ಹಸ್ತಲಾಘವವನ್ನು ಕೊಟ್ಟು

ಹೊಗಳುತ್ತ ಭದ್ರಾಸನದಲ್ಲಿ ಕುಳ್ಳಿರಿಸಿ ಭಕ್ತಿ ನಮ್ರಹೃದಯನಾಗಿ ಕೈಮುಗಿದು ಆ ಋಷೀಶ್ವರನನ್ನು ಕುರಿತು ಇಂತೆಂದನು.

ಎಲೈ ಋಷೀಶ್ವರನೆ ! ಕೇಳು ಸರ್ವಜ್ಞನಾದ ನೀನು ಕರುಣಾದೃಷ್ಟಿಯಿಂದ ನನ್ನನ್ನು ನೋಡಿ ಈಗ ನಾನು ಕೇಳುವ ಪ್ರಶ್ನೆಗೆ ಸದುತ್ತರವನ್ನು ಹೇಳಿ ನನ್ನ ಸಂಶಯವನ್ನು ಪರಿಹರಿಸಿ ಕಾಪಾಡು ! ಏನೆಂದರೆ:-ನನ್ನ ಮಗನಾದ ಈ ಸುಧರ್ಮನೂ, ನಮ್ಮ ಪ್ರಭಾನಿಯ ಮಗನಾದ ತಾರಕನೂ ಸಹ ಬಾಲ್ಯದಿಂದಲೂ ಸ್ನೇಹಿತರಾಗಿ ಬೆಳೆದು ಸ್ನೇಹದಿಂದಿರುತ್ತಾರೆ ಇವರಿಬ್ಬರಿಗೂ ರಾಜಯೋಗ್ಯವಾದ ರತ್ನಾಭರಣಗಲ್ಲಿ ಕಿಂಚಿತ್ತಾದರೂ ಅಭಿಮಾನವೇ ಇಲ್ಲ. ವಿಭೂತಿ ರುದ್ರಾಕ್ಷಗಳನ್ನು ಕಂಡರೆ ರತ್ನಾಭರಣಗಳಿಗಿಂತ ಹೆಚ್ಚಾದ ಭಕ್ತಿಯಿಂದಲೂ, ಪ್ರೀತಿಯಿಂದಲೂ ಧರಿಸಿಕೊಳ್ಳುವರು, ನಾವು ಎಷ್ಟುಸಾರಿ ತಿಳಿಯ ಹೇಳಿದರೂ ಅವರಿಬ್ಬರಿಗೂ ರತ್ನಾಭರಣಗಳ ಮೇಲೆ ಅಪೇಕ್ಷೆಯೆ ಉಂಟಾಗದು ಹೀಗಾಗಲು ಕಾರಣವೇನು ? ಈ ಸ್ವಭಾವವು ಹೇಗೆ ಅವರಿಗೆ ಬಂದಿತು? ಎಂದು ಕೇಳಿದನು. ಆಗ ಪರಾಶರಮುನಿಯು ದೊರೆಯನ್ನು ಕುರಿತು ಎಲೈ ಭದ್ರಸೇನನೆ ! ಕೇಳು ಬುದ್ಧಿಸಂಪನ್ನರಾದ ಈ ಬಾಲಕರ ವೃತ್ತಾಂತವನ್ನು ನಿನಗೋಸ್ಕರವಾಗಿ ಹೇಳುತ್ತೇನೆ ಕೇಳು, ಪೂರ್ವಕಾಲದಲ್ಲಿ ನಂದಿಗ್ರಾಮವೆಂಬ ಮಹಾಪಟ್ಟಣದಲ್ಲಿ ಶೃಂಗಾರರಸದಿಂದ ಮಾಡಲ್ಪಟ್ಟ ಮನೋಹರವಾದ ಸುವರ್ಣಪುತ್ಥಳಿಯಂತೆ ರಂಜಿಸುತ್ತಿದ್ದ ಮಹಾನಂದಿ ಎಂಬ ವೇಶ್ಯೆ ಇದ್ದಳು, ಅವಳು ಸೌಂದರ್ಯಕ್ಕೆ ತಕ್ಕಹಾಗೆ ಸೌಭಾಗ್ಯವನ್ನು ಪಡೆದಿದ್ದಕಾರಣ ಅವಳಲ್ಲಿ ಬಿಳಿಯ ಛತ್ರಿ, ಚಿನ್ನದ ಚಾಮರಗಳು, ದಂತದ ಪಾಲಕಿ, ಚಿನ್ನದ ಹಾವುಗೆ, ಸುಣರ್ವದ ಪಾದುಕೆಗಳು ಚಿತ್ರವಿಚಿತ್ರವಾದ ವಸ್ತ್ರ ವೈಡೂರ್ಯಗಳು, ಬಿಳಿಯ ಸುಪ್ಪತ್ತಿಗೆ ಕನಕಮಯವಾದ ಮಂಚ ಹೊಸಹೊಸದಾದ ಬಗೆಬಗೆಯ ಆಭರಣಗಳು ದಿವ್ಯವಾದ ಹಸುಗಳು ಎಮ್ಮೆಗಳು ಭೃತ್ಯರು ಸಕಲಾವಯವ ಸುಂದರಿಯರಾದ ದಾದಿಯರು, ಪರಿಮಳ ದ್ರವ್ಯಗಳು, ಶ್ರೀಗಂಧ, ಕಸ್ತೂರಿ, ಪುನಗು, ಜವ್ವಾಜಿ, ಅಗಿಲು, ಚಂದನ, ಕರ್ಪೂರ ಮಿಶ್ರಿತವಾದ ಪುಷ್ಪಮಾಲಿಕೆಗಳೂ, ದಿವ್ಯ ಭೋಗ್ಯವಾದ ಮೃಷ್ಟಾನ್ನ ಪಾನಾದಿಗಳು ಸಮೃದ್ಧಿಯಾಗಿ ನೆಲೆಗೊಂಡಿದ್ದುವು. ಇದಕ್ಕೆ ತಕ್ಕಂತೆ ಬಹು ರಮ್ಯವಾಗಿ ನೋಡಿದವರ ತನುಮನ ಧನಂಗಳನ್ನು ಆಕರ್ಷಿಸುವಷ್ಟು ಅಂದವಾದ ಗೃಹವೂ, ಅದಕ್ಕೆ ತಕ್ಕಂತೆ ಧನಧಾನ್ಯ ನಿಬಿಡವಾದ ಬೊಕ್ಕಸಭಂಡಾರಗಳೂ, ಕಣಜಗಳೂ, ಬಹಳವಾಗಿದ್ದುವು. ಇಂಥ ಐಶ್ವರ್ಯ ನಿಬಿಡವಾಗಿದ್ದರೂ ಆ ವೇಶ್ಯೆಯು ಅಹಂಕಾರಭರಿತಳಾಗದೆ, ಸದಾ ಶಿವಭಕ್ತಿ ಸಂಪನ್ನಳಾಗಿ ಶಿವನನ್ನು ಪೂಜಿಸುತ್ತ ಶಿವನಾಮಸ್ಮರಣೆ, ಶಿವಮಂತ್ರಜಪ, ಶಿವಪುರಾಣ ಶ್ರವಣಗಳಲ್ಲಿಯೆ ಆಸಕ್ತಳಾಗಿ ಆಡಿದ ಮಾತಿಗೆ ತಪ್ಪದೆ ಸತ್ಯವಂತ

ಳಾಗಿ ಶಿವಭಕ್ತರಾದವರು ಮನೆಗೆ ಬಂದರೆ ಅವರನ್ನು ಭಕ್ತಿ ಪೂರ್ವಕವಾಗಿ ಬಹು ಮರ್ಯಾದೆಯಿಂದಲೂ, ಗೌರವದಿಂದಲೂ, ಕಂಡು ಸತ್ಕರಿಸುತ್ತಿದ್ದಳು. ತನ್ನ ನಾಟ್ಯಶಾಲೆಯು ವಿನೋದಕ್ಕಾಗಿ ತಾನೆ ನಾಟ್ಯವನ್ನು ಕಲಿಸಿ ತಿದ್ದುಪಡಿ ಮಾಡಿದ ಒಂದು ಕೋಳಿಯನ್ನೂ ಒಂದು ಕಪಿಯನ್ನೂ ವಿಭೂತಿ ರುದ್ರಾಕ್ಷಿಗಳಿಂದ ಅಲಂಕರಿಸಿ, ನಾಟ್ಯಕಾಲದಲ್ಲಿ ತಾಳಕ್ಕೆ ಸರಿಯಾಗಿ ಗಾನಮಾಡುತ್ತ ಲಯವನ್ನು ಅನುಸರಿಸಿ ಕುಣಿಯುತ್ತಿರುವ ಆ ಕೋಳಿಯನ್ನು ಕಪಿಯನ್ನು ನೋಡಿ ಅವುಗಳ ಬುದ್ಧಿಶಕ್ತಿಗೆ ಮೆಚ್ಚಿ ತನ್ನ ಸಖಿಯರಿಗೆ ತೋರಿಸಿ ತಾನು ಹಿಗ್ಗುತ್ತಿದ್ದಳು.

ಹೀಗೆ ಸತ್ಯಸಂಧಳಾಗಿ ಶಿವಭಕ್ತಿ ಸಂಪನ್ನಳಾಗಿ ಸದಾ ಶಿವಧ್ಯಾನ ಶಿವಕಥಾ ಶ್ರವಣಗಳಿಂದ ಕಾಲವನ್ನು ಕಳೆಯುತ್ತಿದ್ದ ಆ ವೇಶ್ಯೆಯ ಮನೆಗೆ ಒಂದು ದಿನ ಲಲಾಟದಲ್ಲಿ ತ್ರಿಪುಂಡ್ರವೂ, ಶಿರಸ್ಸಿನಲ್ಲಿ ರುದ್ರಾಕ್ಷಗಳ ಹಾರವೂ ದಿವ್ಯ ಮಂಗಳಕರವಾದ ಜಡೆಯೂ, ಪ್ರಕಾಶಿಸುತ್ತಿರುವ ಕೋಟಿಸೂರ್ಯ ಸಮಪ್ರಭನಾದ ಕೈಗಳಲ್ಲಿ ರತ್ನಕಟಕಗಳನ್ನು ಧರಿಸಿದ ಶಿವಯೋಗಿಯೊಬ್ಬನು ವೈಶ್ಯ ಕುಲೋತ್ತಮನಾಗಿ ವಿಹಾರ ಸುಖವನ್ನು ಬಯಸಿ ಬಂದವನಾದನು. ಹೀಗೆ ತನ್ನ ಮನೆಗೆ ಬಂದ ಶಿವಯೋಗಿಯನ್ನು ಉಚಿತೋಪಚಾರಗಳಿಂದ ಕರೆದು ಪೀಠದಲ್ಲಿ ಕುಳ್ಳಿರಿಸಿ ಬಗೆಬಗೆಯಾದ ಸತ್ಕಾರಗಳಿಂದ ಆ ವೈಶ್ಯೋತ್ತಮನನ್ನು ಉಪಚರಿಸಿ ಅವನ ಕೈಗಳಲ್ಲಿದ್ದ ರತ್ನಕಟಕಗಳನ್ನು ನೋಡಿ ಆಶ್ಚರ್ಯಭರಿತಳಾಗಿ ಅದನ್ನು ತಾನು ಕಸಿದುಕೊಳ್ಳಬೇಕೆಂಬ ಬಯಕೆಯಿಂದ ಆ ವೈಶ್ಯನನ್ನು ಕುರಿತು ಎಲೈ ವೈಶ್ಯೋತ್ತಮನೇ ! ಸ್ತ್ರೀಯರಿಗೆ ಯೋಗ್ಯವಾದ ಈ ರತ್ನಕಟಕಗಳನ್ನು ನೀನು ಧರಿಸಿಕೊಂಡಿದ್ದೀಯೆ ! ಇದರ ಮೇಲೆ ನನಗೆ ತುಂಬ ಆಸೆಯಾಗುತ್ತಿದೆ. ಆದಕಾರಣ ಇದನ್ನು ಕೊಡಬಲ್ಲೆಯಾ ? ಎಂದು ಕೇಳಿದಳು. ಬುದ್ಧಿವಂತನಾದ ವೈಶ್ಯನು ವೇಶ್ಯೆಯ ಮನೋಭಾವವನ್ನು ತಿಳಿದುಕೊಂಡು, ಈ ಕಟಕಗಳಲ್ಲಿ ನಿನಗೆ ಆಸೆಯುಂಟಾಗಿದ್ದರೆ ಅದಕ್ಕೆ ಆಗುವ ಕ್ರಯವನ್ನು ಕೊಟ್ಟು ಧರಿಸಿಕೊಳ್ಳಬಹುದಲ್ಲ ! ಎನಲು, ಆ ವೇಶ್ಯೆಯು ಎಲೈ ಶಿವಭಕ್ತನೆ ! ವೈಶ್ಯ ಕುಲೋತ್ತಮನಾದ ನೀನು ಹೇಳಿದ ಮಾತು ನಿಜ ನಾವು ವೇಶ್ಯೆಯರು ನಮಗೆ ವ್ಯಭಿಚಾರವೇ ಕುಲಧರ್ಮ ಪತಿವ್ರತಾಸ್ತ್ರೀಯರಂತೆ ನಾವು ನಡೆದುಕೊಂಡರೆ ನಮ್ಮ ಜೀವನ ವ್ಯರ್ಥವಾಗುವುದು. ಆದಕಾರಣ ಇಂದಿನಿಂದ ಮೂರುದಿನಗಳ ವರೆಗೆ ನಾನು ದಿವಾರಾತ್ರಿಯಲ್ಲಿಯೂ ನಿನಗೆ ಹೆಂಡತಿಯಾಗಿ ನಿರ್ವಂಚನೆಯಿಂದ ನಡೆದುಕೊಳ್ಳುವೆನು ನನಗೆ ಈ ರತ್ನಕಟಕಗಳನ್ನು ಕೊಟ್ಟುಬಿಡು ಎಂದಳು. ಅದಕ್ಕೆ ಒಪ್ಪಿ ಆ ವೈಶ್ಯನು ಹಾಗೆಯೆ ಆಗಲಿ ! ಇಗೊ ! ನೀನು ಕೇಳಿದಂತೆ ನಾನು ರತ್ನಕಟಕಗಳನ್ನು ಕೊಡುತ್ತಿದ್ದೇನೆ ಇದನ್ನು ತೆಗೆದುಕೊ ನೀನು ಮಾತ್ರ

ಆಡಿದ ಮಾತಿಗೆ ತಪ್ಪಬೇಡ. ಮೂರುದಿನಗಳವರೆಗೆ ದಿವಾರಾತ್ರಿಯಲ್ಲಿಯೂ ನಿನಗೆ ಹೆಂಡತಿಯಾಗಿರುವೆನು ಇದಕ್ಕೆ ಸೂರ್ಯಚಂದ್ರರೇ ಸಾಕ್ಷಿಗಳು ಈ ಅರ್ಥಕ್ಕೆ ತಪ್ಪುವುದಿಲ್ಲವೆಂದು ನನ್ನ ಎದೆಯನ್ನು ಮುಟ್ಟಿ ಪ್ರಮಾಣಮಾಡು ಎಂದನು. ಅವಳುಹಾಗೆ ಮಾಡಿ ನಂಬುಗೆಯನ್ನು ಕೊಟ್ಟ ಬಳಿಕ ಆ ವೈಶ್ಯನು ಅವಳ ಕೈಗೆ ರತ್ನಕಟಕಗಳನ್ನು ಕೊಟ್ಟು ಅದರ ಜೊತೆಯಲ್ಲಿ ರತ್ನಮಯವಾದ ಒಂದು ಲಿಂಗವನ್ನೂ ಇರಿಸಿ! ಇದು ನನ್ನ ಪ್ರಾಣಲಿಂಗ, ಇದು ಹೋದರೆ ನಾನು ಬದುಕುವಹಾಗಿಲ್ಲ, ಆದಕಾರಣ ಈ ಲಿಂಗವನ್ನು ಭದ್ರವಾಗಿ ಕಾಪಾಡಿಕೊಂಡಿರು ಎಂದು ಅವೆರಡನ್ನು ವೇಶ್ಯೆಯ ಕೈಗೆ ಕೊಟ್ಟನು. ಆಗ ಆ ವೇಶ್ಯೆಯು ಆನಂದಭರಿತಳಾಗಿ ರತ್ನಕಟಕಗಳನ್ನು ತಾನು ಧರಿಸಿಕೊಂಡು ಪ್ರಾಣಲಿಂಗವನ್ನು ಮಾತ್ರ ನಾಟ್ಯಶಾಲೆಯ ಒಂದಾನೊಂದು ಗೂಡಿನಲ್ಲಿಟ್ಟು ವಿಲಾಸಯುಕ್ತಳಾಗಿ ಅಲಂಕರಿಸಿಕೊಂಡು ಕೇಳಿ ಗೃಹವನ್ನು ಪ್ರವೇಶಿಸಿ ವಿಟಧರ್ಮ ಸಂಪನ್ನನಾದ ಆ ವೈಶ್ಯೋತ್ತಮನೊಡನೆ ಕ್ರೀಡಿಸುತ್ತಿದ್ದಳು

ಇತ್ತಲಾಗಿ ಅರ್ಧರಾತ್ರಿಯ ವೇಳೆಯಲ್ಲಿ ಆ ವೇಶ್ಯೆಯ ನಾಟ್ಯಶಾಲೆಗೆ ಅಕಸ್ಮಾತ್ತಾಗಿ ಬೆಂಕಿಬಿದ್ದು ಉರಿಹತ್ತಿ ಹೊಗೆ ಎದ್ದು ಧಗಧಗನೆ ಉರಿಯಲಾರಂಭವಾಯಿತು. ಅದನ್ನು ಕಂಡು ಅಲ್ಲಿದ್ದ ಕಾವಲುಗಾರರು ಓಡಿಬಂದು ರತಿಕೇಳಿಯಲ್ಲಿ ಮಗ್ನಳಾಗಿದ್ದ ವೇಶ್ಯೆಯನ್ನು ಎಚ್ಚರಿಸಿದರು. ಅವಳು ತನ್ನ ವಿಟನೊಡನೆ ನಾಟ್ಯಶಾಲೆಗೆ ಬಂದು ಕಿಚ್ಚಿನ ಹೆಚ್ಚಿಗೆಯಿಂದ ನೋಯುತ್ತಿದ್ದ ಕಪಿಯನ್ನೂ, ಕೋಳಿಯನ್ನೂ ಬಿಟ್ಟುಬಿಡಲು ಅವು ನೋವನ್ನು ಸಹಿಸಲಾರದೆ ಕಿಡಿಗಳನ್ನು ಕೊಡವಿಕೊಳ್ಳುತ್ತ ತಮ್ಮ ಇಷ್ಟಾನುಸಾರವಾಗಿ ದಿಕ್ಕಾಪಾಲಾಗಿ ಓಡಿಹೋದವು. ಬಳಿಕ ಕ್ಷಣಮಾತ್ರದಲ್ಲಿ ಜ್ವಾಲೆಯು ಆವರಿಸಿ ಧ್ವಜಸ್ತಂಭದ ಮೇಲುಗಡೆ ಗೂಡಿನಲ್ಲಿ ಇಟ್ಟಿದ್ದ ವಿಟಪುರುಷನ ಪ್ರಾಣಲಿಂಗವನ್ನು ಸುಟ್ಟು ಬೂದಿಮಾಡಿತು. ಆಗ ಅವರಿಬ್ಬರೂ ಅದನ್ನು ಕಂಡು ಖಿನ್ನರಾದರು ಬಳಿಕ ವೈಶ್ಯನು ತನ್ನ ಪ್ರಾಣಲಿಂಗವು ಹೋದುದಕ್ಕಾಗಿ ಬಹಳವಾಗಿ ವ್ಯಥೆಪಟ್ಟು ಇನ್ನು ನಾನು ಬದುಕಲಾರೆನು. ಪ್ರಾಣಲಿಂಗವನ್ನು ಕಳೆದುಕೊಂಡಮೇಲೆ ಬದುಕಿರುವುದಕ್ಕಿಂತ ನರಕದಲ್ಲಿ ಬೀಳುವುದು ಮೇಲು ಆದಕಾರಣ ಈಶ್ವರ ಪ್ರೀತಿಕರವಾಗಿ ಈ ದೇಹವನ್ನು ಅಗ್ನಿಮುಖದಿಂದ ಆಹುತಿಯಾಗಿ ಕೊಟ್ಟು ಪರಶಿವನನ್ನು ಮೆಚ್ಚಿಸುವೆನು ಇದಕ್ಕೆ ತಪ್ಪುವುದಿಲ್ಲ. ಬ್ರಹ್ಮಾದಿ ದೇವತೆಗಳು ಬಂದು ನಿವಾರಿಸಿದರೂ ಸಾಧ್ಯವಾಗದು. ಎಲೌ ಪ್ರಿಯಳೇ ! ನೀನು ನನಗೆ ಹೆಂಡತಿಯಾದ ಕಾರಣ ನನ್ನ ಈ ಕಷ್ಟವನ್ನು ಪರಿಹರಿಸುವದಕ್ಕಾಗಿ ನಿನ್ನ ಕಡೆಯ ಆಳುಗಳಿಂದ ಚಿತಿಯನ್ನು ಒಡ್ಡಿಸಿ ಅಗ್ನಿಯನ್ನು ಪ್ರತಿಷ್ಠಿಸು ನಾನು ಅದರಲ್ಲಿ ಬಿದ್ದು

ನನ್ನ ದೇಹವನ್ನು ಸಾರ್ಥಕಗೊಳಿಸಿಕೊಳ್ಳುತ್ತೇನೆ ಎಂದು ಹೇಳಲು ಆ ವೇಶ್ಯೆಯು ವೈಶ್ಯೋತ್ತಮನನ್ನು ಕುರಿತು ಇಂತೆಂದಳು.

ಎಲೈ ವೈಶ್ಯೋತ್ತಮನೆ ! ಕೇಳು, ಈಶ್ವರಾಧೀನವಾದ ಈ ಪ್ರಪಂಚವು ಮಾಯಾಮಯವಾದದ್ದು ಕೆಲವು ಕಾಲವಿದ್ದು ಬಳಿಕ ವಿಕಾರವಾಗುವದು. ಇದನ್ನು ತಿಳಿದ ಪ್ರಾಜ್ಞರು ಈ ಪ್ರಪಂಚದಲ್ಲಿದ್ದರೂ ಸತ್ತವರಿಗಾಗಿಯೂ, ನಷ್ಟವಾದ ವಸ್ತುಗಳಿಗಾಗಿಯೂ, ಮೀರಿಹೋದ ಕಾರ್ಯಕ್ಕಾಗಿಯೂ, ಕಿಂಚಿತ್ತಾದರೂ ಸಂಕಟಪಡುವದಿಲ್ಲ. ಆದಕಾರಣ ನಿನ್ನ ಪ್ರಾಣಲಿಂಗಕ್ಕೆ ನೀನು ಕೊಟ್ಟಿದ್ದ ಮೌಲ್ಯವನ್ನಾದರೂ ನಾನು ಕೊಟ್ಟುಬಿಡುತ್ತೇನೆ, ಆ ದ್ರವ್ಯದಿಂದ ನೀನು ಬೇರೊಂದು ಲಿಂಗವನ್ನು ತೆಗೆದುಕೊಂಡು ಅದನ್ನು ಪೂಜಿಸುತ್ತ ಸಂತೋಷದಿಂದ ಇರಬಹುದಲ್ಲವೇ ? ಹಾಗೆ ಮಾಡದೆ ಸಕಲ ಶ್ರೇಯಸ್ಸುಗಳಿಗೂ ಸಾಧನವಾಗಿ ಧರ್ಮಾರ್ಥಧರ್ಮಗಳಿಗೆ ನೆಲೆಯಾಗಿ ಈಶ್ವರನನ್ನು ತೃಪ್ತಿಪಡಿಸುವಂಥ ಮನೆಯಾಗಿರುವ ಶ್ರೇಷ್ಠವಾದ ಈ ದೇಹವನ್ನು ವ್ಯರ್ಥವಾಗಿ ಏಕೆ ಅಗ್ನಿಗೆ ಆಹುತಿ ಕೊಡಬೇಕೆನ್ನುವೆ ? ಇದು ಸರಿಯಲ್ಲ ! ನನ್ನ ಮಾತನ್ನು ಕೇಳು ಬೇರೊಂದು ಲಿಂಗವನ್ನು ತೆಗೆದುಕೊಂಡು ಅದನ್ನು ಪೂಜಿಸುತ್ತ ಸಂತೋಷಭರಿತನಾಗಿ ಬಹುಕಾಲ ಜೀವಿಸಿಕೊಂಡಿರು ಎಂದು ಮರಳಿ ಮರಳಿ ಬೋಧಿಸುತ್ತಿರಲು, ಆ ವೈಶ್ಯನು ಅವಳನ್ನು ಕುರಿತು ಎಲೌ ಮೋಹನಾಂಗಿ ! ನಿನ್ನ ಬುದ್ಧಿ ಚಾತುರ್ಯಕ್ಕೆ ನಾನು ಮೆಚ್ಚಿದೆನು. ಲೋಕದಲ್ಲಿ ಹಿಡಿದ ವ್ರತವನ್ನು ಬಿಡುವುದಕ್ಕಿಂತ ಪ್ರಾಣತ್ಯಾಗ ಮಾಡುವದೇ ಲೇಸು. ಈ ಪ್ರಪಂಚದಲ್ಲಿ ಕಳೆದುಹೋದ ವಸ್ತುವಾಹನ ಗೃಹಾರಾಮ ಪಶುಪ್ರಾಣಿಗಳಲ್ಲಿ ಯಾವುದನ್ನಾದರೂ ಪುನಃ ಸಂಪಾದಿಸಬಹುದು. ಆದರೆ ಹೋದ ಪ್ರಾಣವನ್ನು ಮಾತ್ರ ಮರಳಿ ಪಡೆಯುವುದಕ್ಕಾಗದು. ಆದಕಾರಣ ನನ್ನ ಪ್ರಾಣಗಳಿಗಿಂತಲೂ ಅಧಿಕವಾಗಿದ್ದ ಪ್ರಾಣಲಿಂಗವು ಹೋದಮೇಲೆ ನಾನು ಕ್ಷಣಮಾತ್ರವಾದರೂ ಬದುಕಿರಲಾರೆನು, ಯಾರಿಗೆ ಪರಮೇಶ್ವರನಲ್ಲಿ ದೃಢವಾದ ಭಕ್ತಿಯಿರುವುದೋ ಅವರಿಗೆ ಮಲಿನವಾಗಿ ನಶ್ವರವಾಗಿರುವ ಈ ದೇಹದಿಂದ ಪ್ರಯೋಜನವೇನು ? ಸಾಯುವ ದೇಹವು ಸತ್ತುಹೋದರೂ ಸದಾಚಾರನಿಷ್ಠೆಯಿಂದ ಹುಟ್ಟಿದ ಕೀರ್ತಿಯು ಮಾತ್ರ ಸೂರ್ಯಚಂದ್ರಾದಿಗಳಿರುವವರೆಗೂ ನಷ್ಟವಾಗದೆ ಶಾಶ್ವತವಾಗಿರುವುದು. ಆದಕಾರಣ ದೃಢವ್ರತನಾಗಿ ನಾನು ಸಂಕಲ್ಪಿಸಿದ ಕೆಲಸವನ್ನು ಮಾಡದೆ ಬಿಡುವುದಿಲ್ಲ ಎಂದು ಹೇಳಿದನು. ಆಗ ಆ ವೇಶ್ಯೆಯು ವೈಶ್ಯವಿಟನ ದೃಢಭಕ್ತಿಗೆ ಮೆಚ್ಚಿ ಅವನನ್ನು ಕೊಂಡಾಡುತ್ತ ಪಟ್ಟಣದ ಹೊರಭಾಗದಲ್ಲಿ ತನ್ನ ಪರಿಚಾರಕರ ಮೂಲಕ ಚಿತಿಯನ್ನು ಸಿದ್ಧಗೊಳಿಸಲು ವೈಶ್ಯವಿಟನು ತನ್ನ ಭಕ್ತಿ ನಿಷ್ಠೆಗಳನ್ನು ಲೋಕದಲ್ಲಿ ಪ್ರಕಾಶಪಡಿಸುವದಕ್ಕಾಗಿ ಅಗ್ನಿದೇವನಿಗೆ ಪ್ರದಕ್ಷಿಣೆಯನು

ಮಾಡಿ ಶಿವಧ್ಯಾನವನ್ನು ಮಾಡುತ್ತ ಸಂತೋಷಭರಿತನಾಗಿ ಆ ಚಿತೆಯಲ್ಲಿ ಬಿದ್ದು ಪ್ರಾಣವನ್ನು ಕಳೆದುಕೊಂಡನು, ಅದನ್ನು ನೋಡಿ ವೇಶ್ಯಾಂಗನೆಯು ಮೊದಲು ತಾನು ಮಾಡಿದ್ದ ಪ್ರತಿಜ್ಞೆಯನ್ನು ಸ್ಮರಿಸಿಕೊಂಡು ಸುತ್ತಲೂ ನೆರೆದಿರುವ ತನ್ನ ಪರಿಚಾರಕ ಪರಿವಾರಗಳಿಗೆ ಕೈಮುಗಿದು ನಮಸ್ಕರಿಸಿ ನಾನು ಈ ವೈಶ್ಯನ ಕೈಯ್ಯಲ್ಲಿದ್ದ ಕಡಗಗಳಿಗೆ ಆಸೆಪಟ್ಟು ಮೂರುದಿನಗಳವರೆಗೆ ಹಗಲಿರುಳೂ ನಿನಗೆ ಹೆಂಡತಿಯಾಗಿ ನಿನ್ನ ಕಷ್ಟಸುಖಗಳಿಗೆ ಭಾಗಿಯಾಗಿರುವೆನೆಂದು ಭಾಷೆಕೊಟ್ಟು ಅದಕ್ಕೆ ತಪ್ಪುವದಿಲ್ಲವೆಂದು ಪ್ರಮಾಣವನ್ನು ಮಾಡಿ ವಿಟಧರ್ಮಯುಕ್ತಳಾಗಿ ಅವನೊಡನೆ ಕ್ರೀಡಿಸುತ್ತಿದ್ದೆನು. ಹೀಗಿರುವಲ್ಲಿ ನನ್ನ ದುರದೃಷ್ಟವಶದಿಂದ ಈತನು ಈ ರೀತಿ ಸತ್ತುಹೋದನು. ಈಗ ನಾನು ಆಡಿದ ಮಾತಿಗೆ ತಪ್ಪದೆ ನಡೆದುಕೊಂಡು ಸತ್ಯವಂತಳೆನಿಸಿಕೊಳ್ಳಬೇಕು. ಲೋಕದಲ್ಲಿ ಸಕಲ ಧರ್ಮ ಗಳಿಗೂ ಸತ್ಯವೇ ಮೂಲವಾದದ್ದು. ಸತ್ಯದಿಂದ ಸಮಸ್ತ ಸುಖಗಳೂ ಉಂಟಾ ಗುವುದು. ಸತ್ಯವೇ ಸ್ವರ್ಗಕ್ಕೆ ಸೋಪಾನ, ಸತ್ಯದಿಂದಲೆ ದೇವತೆಗಳು ಪ್ರಸ ನ್ನರಾಗುವರು, ಸತ್ಯದಿಂದ ಮೂರು ಲೋಕಗಳೂ ನಿಂತಿರುವುವು ಸತ್ಯವೇ ಲೋಕದಲ್ಲೆಲ್ಲ ಸರ್ವಶ್ರೇಷ್ಠವಾದುದು, ಅಸತ್ಯವು ಎಂದಿಗೂ ಶ್ರೇಯಸ್ಕರವಲ್ಲ ಸುಳ್ಳಾಡುವವರಿಗೂ, ಮೋಸಗಾರರಿಗೂ, ಕಪಟಿಗಳಿಗೂ, ವಂಚಕರಿಗೂ, ವಿಶ್ವಾಸಘಾತುಕರಿಗೂ, ಪರೋಪಕಾರಪರರಲ್ಲದವರಿಗೂ, ಪರರನ್ನು ಪೀಡಿಸು ವವರಿಗೂ, ಎಂದಿಗೂ ಇಹ ಪರ ಸುಖಗಳು ದೊರೆಯಲಾರವು ಆದಕಾರಣ ನಾನು ಆಡಿದ ಮಾತಿಗೆ ತಪ್ಪದೆ ಸತ್ಯಸಂಧಳಾಗಿ ಮಹಾಪತಿವ್ರತೆಯರಂತೆ ನಾನು ಚಿತಿಯಲ್ಲಿ ಬಿದ್ದು ನನ್ನ ಗಂಡನಾಗಿದ್ದ ಈ ವಿಟನಿಗಾಗಿ ನನ್ನ ದೇಹ ವನ್ನು ಸಮರ್ಪಿಸುವೆನು ಲೋಕದಲ್ಲಿ ನಾನು ನಿಮಗೆ ನಾಯಕಿಯಾಗಿದ್ದ ಕಾಲ ದಲ್ಲಿ ಕಾಲಕಾಲಕ್ಕೆ ಸರಿಯಾಗಿ ತಕ್ಕ ಕೆಲಸವನ್ನು ತೆಗೆದುಕೊಳ್ಳುವ ನಿಮಿತ್ತ ನಿಮ್ಮನ್ನು ಬಗೆಬಗೆಯಾದ ಹಿಂಸೆಗೆ ಗುರಿಮಾಡಿರುವೆನು. ಅದೆಲ್ಲವನ್ನು ಕ್ಷಮಿಸಿ ನೀವು ನನ್ನನ್ನು ಧನ್ಯಳನ್ನಾಗಿಮಾಡಿ ಎಂದು ಬೇಡಿಕೊಂಡು ತನ್ನ ವಾಕ್ಯವು ಎಲ್ಲಿ ಅಸತ್ಯವಾದೀತೋ ಎಂಬ ಭಯದಿಂದ ತನ್ನ ಸರ್ವಸ್ವವನ್ನು ತರಿಸಿ ಬ್ರಾಹ್ಮಣ ರಿಗೆ ದಾನಮಾಡಿ ಪರಿವಾರದವರಿಗೆ ತಕ್ಕ ಉಡುಗೊರೆ ವಸ್ತ್ರಾಭರಣಗಳನ್ನು ಕೊಟ್ಟು ಸರ್ವರನ್ನೂ ತೃಪ್ತಿಪಡಿಸಿ ತಾನು ವ್ರತಬದ್ಧಳಾಗಿ ದೃಢಸಂಕಲ್ಪದಿಂದ ಪರಮೇಶ್ವರನನ್ನು ಧ್ಯಾನಿಸುತ್ತ ಆ ಚಿತಿಗೆ ಮೂರು ಸಾರಿ ಪ್ರದಕ್ಷಿಣೆ ಬಂದು ಮುಂದೆ ನಿಂತು ಕೈಮುಗಿದು ಸೀರೆಯಸೆರಗುಗಳನ್ನು ಬಿಗಿದುಕಟ್ಟಿ ಅಗ್ನಿ ಪ್ರವೇಶ ಮಾಡಲು ಸಿದ್ಧಳಾದಳು. ಅವಳ ಧೃಢಸಂಕಲ್ಪವನ್ನು ನೋಡಿ ಪರಶಿವನು ಪ್ರತ್ಯ ಕ್ಷನಾಗಿ ಬಂದು ಆ ವೇಶ್ಯಾಮಣಿಯನ್ನು ತಡೆದು ನಿಲ್ಲಿಸಿ ತನ್ನ ನಿಜಸ್ವರೂಪವನ್ನು ತೋರಿಸಿದನು ಆಗ ದಿವ್ಯಶರೀರಭರಿತನಾಗಿ, ಮೂರು ಕಣ್ಣುಗಳು ಮಸ್ತಕದಲ್ಲಿ

ಗಂಗೆ, ತಲೆಯಲ್ಲಿ ಕೆಂಜೆಡೆ, ಅದರ ಮೇಲೆ ಚಂದ್ರಕಳೆ, ತೊಡೆಯಲ್ಲಿ ಗೌರಿ, ಕೈಯ್ಯಲ್ಲಿ ತ್ರಿಶೂಲ ಡಮರುಗಗಳೂ, ಒಪ್ಪುತ್ತಿರಲು, ಆನಂದಮಯವಾದ ಆತ್ಮತೃಪ್ತಿಕರವಾದ ನಿಖಿಲ ದೇವಸಮೂಹಕ್ಕೂ ಬೀಜರೂಪವಾದ ಆ ದಿವ್ಯ ಮಂಗಳಮೂರ್ತಿಯನ್ನು ಕಂಡು ಸಂತೋಷದಿಂದ ಮೈಮರೆದು ಎಚ್ಚರ ಗೊಂಡು ರೋಮಾಂಚಿತಹೃದಯಳಾಗಿ ಎವೆಯಿಕ್ಕದೆ ತನ್ನನ್ನೇ ನೋಡುತ್ತಿರುವ ಆ ವೇಶ್ಯೆಯನ್ನು ಕುರಿತು ಪರಮೇಶ್ವರನು ಇಂತೆಂದನು,....

ಎಲೌ ವೇಶ್ಯೆಯೇ ! ಕೇಳು, ನಿನ್ನ ಭಕ್ತಿಯನ್ನೂ ನಿನ್ನ ದೃಢವಾದ ಮನಸ್ಸನ್ನೂ ನಿನ್ನ ಧೈರ್ಯವನ್ನು ಪರೀಕ್ಷಿಸಬೇಕೆಂಬ ಅಪೇಕ್ಷೆಯಿಂದ ನಾನು ವೈಶ್ಯೋತ್ತಮನ ರೂಪವನ್ನು ಧರಿಸಿಕೊಂಡವನಾಗಿ ನಿನ್ನ ಮನೆಗೆ ಬಂದು ನಿನ್ನೊಡನೆ ಸುಖಿಸಲು ಸಹಜವಾದ ಗೊತ್ತುವಳಿಯನ್ನು ಮಾಡಿಕೊಂಡು ನನ್ನ ಲ್ಲಿದ್ದ ರತ್ನ ಕಟಕಗಳನ್ನೂ, ನನ್ನ ಪ್ರಾಣಲಿಂಗವನ್ನು ನಿನ್ನಕೈಗೆ ಕೊಟ್ಟು ಕೇಳಿ ಗೃಹದಲ್ಲಿ ವಿಟಧರ್ಮದಿಂದ ಭೋಗಿಸುತ್ತಿದ್ದಾಗ ನನ್ನ ಮಾಯೆಯಿಂದ ಅಗ್ನಿ ಯನ್ನು ನಿರ್ಮಿಸಿ ನಿನ್ನ ಮನೆಯ ನಾಟ್ಯಶಾಲೆಯನ್ನು ಅದರಲ್ಲಿದ್ದ ಪ್ರಾಣಲಿಂಗ ಸಹಿತವಾಗಿ ದಹಿಸಿ ಅನಂತರ ವ್ಯಾಜ್ಯಾಂತರದಿಂದ ಅಗ್ನಿಪ್ರವೇಶಮಾಡಿ ಪ್ರಾಣ ಗಳನ್ನು ಬಿಟ್ಟೆನು. ಲೋಕದಲ್ಲಿ ಸೂಳೆಯರು, ಮೋಸಗಾರರು, ಕಪಟಸ್ವಭಾ ವದವರು, ವಂಚನೆಗೆ ತವರುಮನೆಯಂತಿರುವರು ಸ್ವಪ್ರಯೋಜನವನ್ನು ನೋಡಿಕೊಂಡು ಪರರನ್ನು ವಂಚಿಸಿ ಕಪಟತಂತ್ರದಿಂದ ದ್ರವ್ಯ ಸಂಪಾದನೆ ಯನ್ನು ಮಾಡುವುದೆ ಸೂಳೆಯರ ಕುಲವೃತ್ತಿ, ಆದರೂ ನೀನು ನನ್ನೊಡನೆ ಮಾಡಿದ ನಿಬಂಧನೆಯನ್ನು ಮೀರದೆ ದೃಢಚಿತ್ತದಿಂದ ಅಗ್ನಿಪ್ರವೇಶ ಮಾಡುವು ದಕ್ಕೆ ಯತ್ನಿಸಿದೆಯಲ್ಲ ! ಇಂಥ ನಿನ್ನ ಸುಗುಣಕ್ಕೆ ನಾನು ಮೆಚ್ಚಿ ಪ್ರಸನ್ನನಾಗಿ ರುವೆನು ನಿನಗೆ ಬೇಕಾದ ವರವನ್ನು ಕೇಳು, ದೇವಾದಿ ದೇವತೆಗಳಿಗೆ ಕೂಡ ದುರ್ಲಭವಾದ ವರವನ್ನು ನೀನು ಕೇಳಿದರು ನಾನು ಕೊಡುವುದಕ್ಕೆ ಸಿದ್ಧನಾಗಿ ದೇನೆ ಎಂದು ಹೇಳಿದನು.

ಆಗ ಭಕ್ತಿ ಸಂಪನ್ನಳಾದ ಆ ವೇಶ್ಯಾಮಣಿಯು ಎಲೈ ಮಹಾದೇವನೆ ! ತ್ರಿಲೋಕಾಧೀಶ್ವರನಾದ ನೀನೇ ನನಗೆ ಪ್ರತ್ಯಕ್ಷನಾದ ಮೇಲೆ ನಾನು ಕೋರಬೇ ಕಾದ ಕೋರಿಕೆಗಳಾವುವು ? ಮೋಕ್ಷದಾಯಕನಾದ ನಿನ್ನ ದರ್ಶನವಾದಮೇಲೆ ಸ್ವರ್ಗಾದಿ ಭೋಗಗಳಿಂದ ಪ್ರಯೋಜನವೇನು ? ಅಮೃತಪಾನವನ್ನು ಮಾಡಿ ದವನು ಅರಳುಗಂಜಿಯನ್ನು ಅಪೇಕ್ಷಿಸುತ್ತಾನೆಯೇ ! ಎಂದಿಗೂ ಇಲ್ಲ. ಆದರೆ ಇಹ ಜನ್ಮದಲ್ಲಿಯೂ ಜನ್ಮಜನ್ಮದಲ್ಲಿಯೂ ಎಂದಿಗೂ ಎಡೆಬಿಡದೆ ಶಾಶ್ವತವಾದ ಭಕ್ತಿಯೊಂದು ಮಾತ್ರ ನಿನ್ನ ಪಾದಾರವಿಂದಗಳಲ್ಲಿ ನೆಲೆಯಾಗಿ ನಿಲ್ಲುವಂತೆ ಅನು ಗ್ರಹಿಸು, ನನ್ನನ್ನೇ ನಂಬಿಕೊಂಡು ಇದುವರೆಗೂ ನನ್ನೊಡನೆ ಜೀವಿಸುತ್ತಿದ್ದ

ಈ ಬಂಧುಗಳಿಗೂ ಭೃತ್ಯರಿಗೂ, ನಿನ್ನ ಪದವಿಯನ್ನು ಕೊಟ್ಟು ಕಾಪಾಡು! ಎಂದು ಕೇಳಿಕೊಂಡಳು ಅದನ್ನು ಕೇಳಿ ಸಂತುಷ್ಟನಾದ ಪರಮೇಶ್ವರನು ವೇಶ್ಯೆಯ ಕೋರಿಕೆಯಂತೆ ಅವರೆಲ್ಲರಿಗೂ ಕೈಲಾಸಪದವಿಯನ್ನು ದಯಪಾಲಿಸಿದನು, ಕೇಳೈ ಭದ್ರಸೇನ ಮಹಾರಾಯನೆ! ನಾಟ್ಯಶಾಲೆಯು ಹೊತ್ತಿಕೊಂಡು ಉರಿಯುತ್ತಿದ್ದಾಗ ಹೊರಕ್ಕೆ ಹೊರಟು ಬಂದ ಕಪಿಯು ಕೆಲವು ಕಾಲದಮೇಲೆ ಮೃತವಾಗಿ ಎರಡನೆಯ ಜನ್ಮದಲ್ಲಿ ನಿನಗೆ ಮಗನಾಗಿ ಹುಟ್ಟಿತು. ಕೋಳಿಯು ಮೃತವಾದ ಬಳಿಕ ತನ್ನ ಪುಣ್ಯ ಪರಿಪಾಕದಿಂದ ನಿನ್ನ ಮಂತ್ರಿಪುತ್ರನಾಗಿ ಜನಿಸಿತು. ಇವರಿಬ್ಬರೂ ಪೂರ್ವಜನ್ಮದಲ್ಲಿ ಒಂದೇಕಡೆಯಿದ್ದು ಸ್ನೇಹಭಾವದಿಂದ ವಿಭೂತಿ ರುದ್ರಾಕ್ಷಗಳನ್ನು ಧರಿಸಿ ಶಿವನಾಮ ಸಂಕೀರ್ತನ ತತ್ಪರರಾಗಿದ್ದಕಾರಣ ಪೂರ್ವಜನ್ಮದ ವಾಸನಾವಿಶೇಷದಿಂದ ಈ ಜನ್ಮದಲ್ಲಿಯೂ ವಿಭೂತಿ ರುದ್ರಾಕ್ಷಿಗಳಲ್ಲಿ ಆಸೆಯುಳ್ಳವರಾಗಿರುವರು ಇದರಿಂದ ಸಂಪಾದಿಸಿದ ಸುಕೃತ ವಿಶೇಷದಿಂದ ಇವರಿಬ್ಬರೂ, ನಿರಾಯಾಸಪರರಾಗಿ ಈ ಜನ್ಮದ ಅಂತ್ಯಭಾಗದಲ್ಲಿ ಕೈಲಾಸವನ್ನು ಸೇರುವರು ಇದೇ ಇವರ ವೃತ್ತಾಂತ ಇದಲ್ಲದೆ ಮತ್ತೆ ಏನು ಕೇಳಬೇಕೆಂದಿರುವೆಯೊ! ಕೇಳು ಎಂದು ಪರಾಶರ ಮಹರ್ಷಿಯು ಭದ್ರಸೇನ ಮಹಾರಾಯನಿಗೆ ನಿರೂಪಿಸಿದನು. ಇಂತು ಪರಮಾಶ್ಚರ್ಯಭರಿತವಾದ ಭಕ್ತಿಪೂರಿತವಾದ ಈ ರುದ್ರಾಕ್ಷ ಮಹಿಮೆಯ ಕಥೆಯನ್ನು ಯಾರು ಕೇಳುವರೊ! ಯಾರು ಹೇಳುವರೊ! ಯಾರು ಭಕ್ತಿಯಿಂದ ಬರೆದು ಓದಿ ಪಠಿಸಿ ಪೂಜಿಸುವರೊ! ಅವರೆಲ್ಲರಿಗೂ ಕೈಲಾಸವು ಕರತಳಾಮಲಕವಾಗುವುದೆಂದು ಸೂತಪುರಾಣಿಕನು ಶೌನಕಾದಿ ಮಹರ್ಷಿಗಳಿಗೆ ಹೇಳಿದನೆಂಬಲ್ಲಿಗೆ,—

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮವೀರ ನರಪತಿ ಬಿರುದೆಂತೆಂಬರ ಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡಾದಿ ನಾನಾ ಬಿರುದಾಂಕಿತ ಯಾದವಕುಲತಿಲಕ ಆತ್ರೇಯ ಸಗೋತ್ರ ಅಶ್ವಲಾಯನಸೂತ್ರಪಠಿ ಋಕ್ಶಾಖಾಧ್ಯಾಯಿ ಮಹಿಶೂರ ರಾಜಒಡೆಯರ ಪೌತ್ರ ನರಸರಾಜಒಡೆಯರ ಪುತ್ರರಾದ ಶ್ರೀಇಮ್ಮಡಿ ಚಾಮರಾಜ ಒಡೆಯರವರು ಕರ್ಣಾಟಕ ಭಾಷೆಯಲ್ಲಿ ವಿರಚಿಸಿದ ಸ್ಕಾಂದಪುರಾಣೋಕ್ತಮಾದ ಬ್ರಹ್ಮೋತ್ತರಖಂಡದಲ್ಲಿ, ರುದ್ರಾಕ್ಷ ಮಹಿಮೆಯಿಂದ ಕೋತಿಗು ಕೋಳಿಗು ಉತ್ತಮ ಜನ್ಮ ಪ್ರಾಪ್ತಿಯಾಗಿ ವೇಶ್ಯಾಸ್ತ್ರೀಗೆ ಶಿವಸಾಯುಜ್ಯ ವಾದುದೆಂಬಿಗೆ,

೧೮ನೆಯ ಅಧ್ಯಾಯಕ್ಕೆ ಮಂಗಳಮಸ್ತು.



# ಶ್ರೀ ರುದ್ರಾಧ್ಯಾಯ ಮಹಿಮೆ.

## ಹತ್ತೊಂಭತ್ತನೆಯ ಅಧ್ಯಾಯ.

ಬಳಿಕ ಮರುದಿನ ಬೆಳಗಾಗುತ್ತಲೇ ನಿತ್ಯಕರ್ಮಗಳನ್ನು ತೀರಿಸಿಕೊಂಡು ಪುರಾಣಶ್ರವಣ ಕುತೂಹಲರಾಗಿ ತನ್ನ ಬಳಿಗೆ ಬಂದ ಶೌನಕಾದಿಗಳನ್ನು ಕುರಿತು ತ್ರಿಕಾಲಜ್ಞಾನಿಯಾದ ಸೂತಮಹಾಮುನಿಯು ಆ ಋಷಿಮಂಡಲಿಗೆ ಶ್ರೀ ರುದ್ರಾಧ್ಯಾಯ ಮಹಿಮೆಯನ್ನು ಹೀಗೆಂದು ನಿರೂಪಿಸತೊಡಗಿದನು.

ಹಿಂದೆ ಹೇಳಿದ ಪ್ರಕಾರವಾಗಿ ಪರಾಶರ ಮುನಿಯ ವಾಕ್ಯವನ್ನು ಕೇಳಿ ಸಂತೋಷಭರಿತನಾಗಿ ಭದ್ರಸೇನ ಮಹಾರಾಯನು ಮರಳಿ ಆತನಿಗೆ ನಮಸ್ಕರಿಸಿ, ಕೈ ಮುಗಿದು ಬದ್ಧಾಂಜಲಿಯಾಗಿ ನಿಂತುಕೊಂಡು ಎಲೈ ಪರಾಶರ ಮಹರ್ಷಿಯೆ ! ನಿನ್ನ ಮಾತುಗಳು ನನಗೆ ಅಮೃತ ಪ್ರಾಯವಾಗಿ ಆಪ್ಯಾಯಮಾನಗಳಾಗಿವೆ. ಇನ್ನೂ ಅನೇಕ ವಿಷಯಗಳನ್ನು ಕೇಳಿ ತಿಳಿದುಕೊಳ್ಳಬೇಕೆಂಬ ಕುತೂಹಲವು ನನ್ನನ್ನು ಬಹಳವಾಗಿ ಬಾಧಿಸುತ್ತಿದೆ, ಲೋಕದಲ್ಲಿ ಸತ್ಪುರುಷರ ಸಹವಾಸವು ಕಾಮಧೇನುವಿನ ಸನ್ನಿಧಿಯಂತೆ ಮನುಷ್ಯನ ಸಕಲಾರ್ಥಗಳನ್ನು ಸಾಧಿಸಿಕೊಡುತ್ತಿದೆ. ಅದರಂತೆ ನಿನ್ನ ದರ್ಶನದಿಂದ ನಾನು ಕೃತಾರ್ಥನಾದೆನು. ನನ್ನ ಅಜ್ಞಾನವು ನಿವೃತ್ತಿಯಾಯಿತು. ನಿನ್ನ ಕರುಣಾಕಟಾಕ್ಷದಿಂದ ಸುಜ್ಞಾನವು ನೆಲೆಗೊಂಡಿತು. ಆದಕಾರಣ ಈ ಬಾಲಕರ ಪೂರ್ವಜನ್ಮದ ವೃತ್ತಾಂತವನ್ನು ಹೇಳಿದ ಹಾಗೆ ಇವರ ಮುಂದಿನ ಜನ್ಮದ ವೃತ್ತಾಂತವನ್ನು ನನಗೆ ಹೇಳಬೇಕು, ಇದೂ ಅಲ್ಲದೆ ನನ್ನ ಮಗನಾಗಿರುವ ಬಾಲಕನಿಗೆ ಭಕ್ತಿ ಭಾಗ್ಯಗಳು ಎಂಥವು. ವಿದ್ಯೆ ಬುದ್ಧಿಗಳು ಹೇಗೆ ಆಯುಃ ಪ್ರಮಾಣವೆಷ್ಟು ? ಎಂಬುದನ್ನು ನಿನ್ನ ಮುಖದಿಂದ ಕೇಳಬೇಕೆಂದು ಇಚ್ಛಿಸುತ್ತಿದೇನೆ. ನಾನು ನಿನ್ನ ಭಕ್ತನು, ನಿನಗೆ ಭೃತ್ಯನಾಗಿ ನಿನ್ನನ್ನೇ ಆಶ್ರಯಿಸಿಕೊಂಡಿರತಕ್ಕವನು, ನಿನ್ನನ್ನೆ ಮರೆಹೊಕ್ಕಿರುವೆನು, ಆದಕಾರಣ ನನ್ನ ಪ್ರಾರ್ಥನೆಯನ್ನು ನಡೆಸಿಕೊಡಬೇಕು ಎಂದು ಬೇಡಿಕೊಂಡನು. ಆಗ ಕರುಣಾಮಯನಾದ ಪರಾಶರಮುನಿಯು ಸಂತೋಷಭರಿತನಾಗಿ ತನ್ನ ಶಿಷ್ಯನಾದ ಭದ್ರಸೇನರಾಯನನ್ನು ಕುರಿತು ಇಂತೆಂದನು.

ಎಲೈ ಭದ್ರಸೇನಮಹಾರಾಯನೇ ! ಸಾವಧಾನದಿಂದ ಕೇಳುವವನಾಗು ! ನೀನು ಕೇಳಿದ ಪ್ರತಿಯೊಂದು ಪ್ರಶ್ನೆಗೂ ಸುದುತ್ತರವನ್ನು ಹೇಳುವುದಕ್ಕೆ ಸಾಧ್ಯವಾಗದು ಆದರೂ ನಿನ್ನ ಮೇಲಣ ವಾತ್ಸಲ್ಯದಿಂದ ನನಗೆ ತಿಳಿದಮಟ್ಟಿಗೆ ಹೇಳುತ್ತೇನೆ ಅಸಾಧ್ಯವಾಗಿ ಹೇಳಬಾರದ ಮಾತನ್ನು ಸಹ ಹೇಳಬೇಕಾಗಿ ಬಂದಿರುವುದರಿಂದ ಇದಕಾಗಿ ನೀನು ವ್ಯಸನಪಡಬೇಡ, ಹೆದರಬೇಡ, ಮತ್ತೇ

ನೆಂದರೆ ಈಗ ನಿನ್ನ ಮಗನಿಗೆ ಹನ್ನೆರಡು ವರುಷ ವಯಸ್ಸಾಗಿದೆ ಇನ್ನು ಏಳು ದಿನಗಳು ಕಳೆದಮೇಲೆ ನಿನ್ನ ಮಗನು ಸತ್ತುಹೋಗುವನು ಎಂದು ನುಡಿಯಲು, ಅದನ್ನು ಕೇಳಿ ಕಾಲಕೂಟಕ್ಕೆ ಸಮಾನವಾದ ವಾಕ್ಯಶ್ರವಣದಿಂದ ಮೂರ್ಛೆ ಹೊಂದಿ ಆ ಭದ್ರಸೇನನು ಭೂಮಿಗೆ ಬಿದ್ದನು. ಆಗ ಕರುಣಾರಸಭರಿತನಾದ ಪರಾಶರನು ಶೈತ್ಯೋಪಚಾರಗಳಿಂದ ಆ ರಾಯರನ್ನು ಸಂತೈಸಿ ಸತ್ರಾಣನಾಗುವಂತೆ ಮಾಡಿ ಕುಳ್ಳಿರಿಸಿಕೊಂಡು ಎಲೈ ರಾಜೇಂದ್ರನೇ? ನೀನು ನನ್ನ ವಾಕ್ಯವನ್ನು ಕೇಳಿದ ಮಾತ್ರಕ್ಕೆ ಇಷ್ಟು ಭಯಪಟ್ಟು ಮೂರ್ಛೆಹೋದಮೇಲೆ ನಿಜವಾಗಿ ನಿನ್ನ ಮಗನು ಮೃತನಾದರೆ ನಿನ್ನ ಗತಿಯೇನು? ನನ್ನ ಬುದ್ಧಿಗೆ ತೋರಿದುದಾಗಿ, ವೇದಸಮ್ಮತವಾಗಿ ಸಕಲರೂ ಒಪ್ಪುವಂಥದಾಗಿ ಸರ್ವಶ್ರೇಷ್ಠವಾದ ಒಂದಾನೊಂದು ಉಪಾಯದಿಂದ ನಿನ್ನ ಮಗನು ಸಾಯದಹಾಗೆ ಮಾಡುವೆನು ಹೆದರಬೇಡ! ಸುಮ್ಮನಿರು ಎಂದು ಸಂತೈಸುತ್ತಿರುವಾಗ ಆ ಭದ್ರಸೇನನು ಅಮೃತಪ್ರಾಯವಾದ ಆತನ ಅಭಯವಾಕ್ಯವನ್ನು ಕೇಳಿ ಸಂತೋಷಭರಿತನಾಗಿ ಸ್ವಾಮಿಾ! ತಾವು ಹೇಳಬೇಕೆಂದಿರುವ ಉಪಾಯವಾವುದು ಅದನ್ನು ಶೀಘ್ರದಲ್ಲಿ ನನಗೆ ಹೇಳಬೇಕು! ಇಲ್ಲವಾದರೆ ನನ್ನ ಪ್ರಾಣಗಳು ಉಳಿಯಲಾರವು, ದಯಾನಿಧಿ! ಕರುಣಾಳು! ಕೃಪಾಮಯ! ನನ್ನ ಕೋರಿಕೆಯನ್ನು ಈಡೇರಿಸು ಎಂದು ಬೇಡಿಕೊಳ್ಳಲು, ಪರಾಶರ ಮಹಾಮುನಿಯು ಆ ಭದ್ರಸೇನರಾಯನಿಗೆ ಸರ್ವೋತ್ಕೃಷ್ಟವಾದ ಈ ಮಹಿಮೆಯನ್ನು ವಿವರಿಸಲಾರಂಭಿಸಿದನು.

ಸೃಷ್ಟಿಗಿಂತಲೂ ಮೊದಲು ಸೂರ್ಯಚಂದ್ರರ ಪ್ರಕಾಶವೇ ಇಲ್ಲದೆ ಕೇವಲ ಅಂಧಕಾರಮಯವಾಗಿದ್ದ ಕಾಲದಲ್ಲಿ ಸತ್ಯಜ್ಞಾನಾನಂದಾತ್ಮಕನಾಗಿ ನಿರವಯವನಾಗಿದ್ದ ಪರಶಿವನು ಸತ್ವರಜಸ್ತಮೋಗುಣಾತ್ಮಕನಾಗಿ ತನ್ನ ಸ್ವಾಧೀನದಲ್ಲಿದ್ದ ಮಾಯೆಯಿಂದ ರಜೋಗುಣ ಪ್ರಧಾನವಾದ ಬ್ರಹ್ಮನನ್ನು ಸೃಷ್ಟಿಮಾಡಿ ಅವನಿಗೆ ಚತುರ್ವೇದ ಸಮೇತನಾಗಿ ಸೃಷ್ಟ್ಯಧಿಕಾರವನ್ನು ಕೊಟ್ಟನು. ಆ ಬಳಿಕ ಬ್ರಹ್ಮದೇವನು ಸಂತೋಷಭರಿತನಾಗಿ ಲೋಕೋಪಕಾರ ಬುದ್ಧಿಯಿಂದ ಸಕಲ ಪ್ರಪಂಚಗಳನ್ನು ನಿರ್ಮಾಣಮಾಡಿದವನಾಗಿ ಪೂರ್ವಮುಖದಿಂದ ಋಗ್ವೇದವನ್ನೂ, ದಕ್ಷಿಣವದನದಿಂದ ರುದ್ರಾಧ್ಯಾಯ ಸಹಿತ ಯಜುರ್ವೇದವನ್ನೂ, ಪಶ್ಚಿಮ ಮುಖದಿಂದ ಸಾಮವೇದವನ್ನೂ, ಉತ್ತರ ಮುಖದಿಂದ ಅಥರ್ವಣ ವೇದವನ್ನು ಪಠಿಸುತ್ತಾ ಆಯಾ ವೇದಗಳನ್ನು ದೇವತೆಗಳ ಸಮೂಹಕ್ಕೂ, ಋಷಿಗಳ ಗುಂಪಿಗೂ ಬ್ರಾಹ್ಮಣರ ತಂಡಗಳಿಗೂ, ಉಪದೇಶ ಮಾಡಿದನು. ಬಳಿಕ ಬ್ರಹ್ಮದೇವನಿಂದ ಉಪದೇಶವನ್ನು ಪಡೆದ ಆ ವೇದಗಳನ್ನು ಆಯಾ ಜನರು ಅವರವರ ಶಿಷ್ಯರಿಗೂ, ಮಕ್ಕಳಿಗೂ, ಉಪದೇಶಮಾಡುತ್ತ ಬಂದರು, ಹೀಗೆ ಪಾರಂಪರ್ಯಕ್ರಮದಿಂದ ಹಬ್ಬಿಕೊಂಡು ಪ್ರಶಸ್ತವಾದ ವೇದಗಳೂ, ರುದ್ರಾಧ್ಯಾ

ಯವೂ, ಜಗತ್ತನ್ನು ಆವರಿಸಿಕೊಂಡವು, ಆದ್ಯಂತರಹಿತನಾದ ಪರಬ್ರಹ್ಮಸ್ವರೂಪನಾದ ಪರಶಿವನ ಮೂಲತತ್ವರೂಪವಾಗಿರುವ ರುದ್ರಾಧ್ಯಾಯವು ಸರ್ವಮಂತ್ರಗಳಿಗೂ ಶ್ರೇಷ್ಠವಾದದ್ದು. ಪವಿತ್ರವಾದ ವೇದಗಳಲ್ಲಿ ಪಾವನವಾದದ್ದು ಪರಶಿವನಮೂರ್ತಿಗೆ ಮೂಲಭೂತವಾದದ್ದು. ಭಕ್ತರಿಗೆ ಮೋಕ್ಷಸಾಧನಕರವಾದುದು. ಈ ರುದ್ರಾಧ್ಯಾಯವೇ ತಪಸ್ಸು, ಇದೆ ಸಕಲ ಮಹಾಪಾಪಗಳಿಗೂ. ಪ್ರಾಯಶ್ಚಿತ್ತ, ಉಪಪಾತಕಗಳಿಗೆ ಉಲ್ಕಾಪಾತ, ದುರಿತಕೋಟಿಗೆ ದಾವಾಗ್ನಿಯಂತಿರುವುದು. ಆದಕಾರಣ ಇದಕ್ಕಿಂದ ಶ್ರೇಷ್ಠವಾದ ಮಂತ್ರವೇ ಇಲ್ಲ, ಲೋಕದಲ್ಲಿ ಮನುಷ್ಯರು ಪೂರ್ವಜನ್ಮದಲ್ಲಿ ಮಾಡಿದ ಪಾಪಗಳಿಗನುಸಾರವಾಗಿ ಅವರವರ ಆಯುರಾರೋಗ್ಯ ಐಶ್ವರ್ಯಗಳು ಕುಗ್ಗುತ್ತಿರುವುವು. ಆದಕಾರಣ ಅಂಥ ಪಾಪಗಳನ್ನು ಸುಟ್ಟು ದೂರಮಾಡುವುದೇ ಈ ಮಹಾಮಂತ್ರವು. ಪಾಪರಾಶಿಯು ಕುಗ್ಗಿದಮೇಲೆ ಪುಣ್ಯವೇ ಉಳಿಯುವ ಕಾರಣ ಆಯುರಾರೋಗ್ಯ ಐಶ್ವರ್ಯಗಳು ನಿಶ್ಚಿಂತೆಯಿಂದ ಅಭಿವೃದ್ಧಿಯಾಗುವುವು. ಇಂಥ ಪವಿತ್ರವಾದ ಈ ರುದ್ರಾಧ್ಯಾಯವನ್ನು ಜಪಿಸುತ್ತ ಯಾರು ಪರಶಿವನಿಗೆ ಅಭಿಷೇಕಮಾಡುವರೋ ಅಂಥ ಅಭಿಷೇಕಮಾಡಿದ ತೀರ್ಥದಿಂದ ಯಾರು ಸ್ನಾನಮಾಡುವರೋ, ರುದ್ರಾಧ್ಯಾಯ ಜಪದಿಂದ ಅಭಿಮಂತ್ರಿಸಲ್ಪಟ್ಟ ಜಲದಿಂದ ಯಾರು ಮೀಯುವರೋ, ಅವರು ಮೃತ್ಯುವಿಲ್ಲದವರಾಗಿ ಸುಖದಿಂದ ದೀರ್ಘಾಯುಷ್ಯವನ್ನು ಪಡೆದು ಈಲೋಕದಲ್ಲಿ ಬಹುಕಾಲ ಬಾಳಿ ಕಡೆಗೆ ಶಿವಸಾಯುಜ್ಯವನ್ನು ಪಡೆಯುವರು. ಯಾರು ಎಷ್ಟು ಸಾರಿ ರುದ್ರಾಧ್ಯಾಯವನ್ನು ಜಪಿಸುತ್ತ ಕಲಶೋದಕವಸ್ನಾಗಲಿ ಕುಂಭೋದಕವಸ್ನಾಗಲಿ, ಅಭಿಮಂತ್ರಿಸಿ, ಅದರಿಂದ ಸ್ನಾನಮಾಡುವರೊ, ಅವರು ಅಷ್ಟು ವರ್ಷಕಾಲ ದೀರ್ಘಾಯುಷ್ಮಂತರಾಗಿ ಬಾಳುವರು. ಆದಕಾರಣ ನಿನ್ನ ಮಗನನು ಹತ್ತು ಸಹಸ್ರಬಾರಿ ರುದ್ರ ಜಪದಿಂದ ಅಭಿಮಂತ್ರಿತವಾದ ಕಲಶೋದಕದಿಂದ ಸ್ನಾನವನ್ನು ಮಾಡಲಿ! ಅದರಿಂದ ಅವನ ಪಾಪರಾಶಿಯು ಸುಟ್ಟು ಬೂದಿಯಾಗುವುದು. ಆ ಬಳಿಕ ಇಂದ್ರನಂತೆ ತೇಜಸ್ವಿಯಾಗುವನು. ಹತ್ತು ಸಹಸ್ರ ವರ್ಷಕಾಲ ದೀರ್ಘಾಯುಷ್ಮಂತನಾಗಿದ್ದುಕೊಂಡು ಹಾನಿ ಇಲ್ಲದ ವೈಭವವನ್ನೂ ಮಿತಿಯಿಲ್ಲದ ಐಶ್ವರ್ಯವನ್ನು ಪಡೆದು, ಸಕಲಭೋಗ ಭಾಗ್ಯಗಳನ್ನು ಅನುಭವಿಸುತ್ತ ಸಕಲ ಶತ್ರುಗಳನ್ನು ಜಯಿಸಿ, ದುಃಖವ್ಯಾಧಿಗಳಿಲ್ಲದೆ ನಿಷ್ಕಂಟಕನಾಗಿ ರಾಜ್ಯ ಪರಿಪಾಲನೆಯನ್ನು ಮಾಡುತ್ತ ಬಾಳುವನು ಆದಕಾರಣ ವೇದವೇತ್ತರಾಗಿ ಸತ್ಯಸಂಧರಾಗಿ ಯಜ್ಞನಿಷ್ಠರಾಗಿ, ನಿರ್ಮಲಚಿತ್ತದಿಂದ ವರ್ತಿಸುತ್ತಿರುವ ಬ್ರಾಹ್ಮಣರನ್ನು ಕರೆಸಿ, ಶಿವಭಕ್ತಿ ಪುರಸ್ಸರವಾಗಿರುವ ರುದ್ರಾದ್ಯಾದಿಂದ ಅಭಿಮಂತ್ರಿಸಲ್ಪಟ್ಟ ತೀರ್ಥದಿಂದ ನಿನ್ನ ಮಗನಿಗೆ ಸ್ನಾನವನ್ನು ಮಾಡಿಸು ಎಂದು ಹೇಳಲು, ಭದ್ರಸೇನನು ಪರಾಶರ ಋಷಿಯನ್ನು

ಕುರಿತು ಸ್ವಾಮಿ! ಲೋಕದಲ್ಲಿ ಆಯುಷ್ಕಾಮರಾದವರು ಎಲ್ಲರೂ ಏಕೆ ಈ ರುದ್ರಾಧ್ಯಾಯವನ್ನು ಜಪಿಸುವುದಿಲ್ಲ ಇದಕ್ಕೆ ಕಾರಣವೇನು? ಇದರ ರಹಸ್ಯವೆಂಥದು ನನಗೆ ಹೇಳಬೇಕು ಎಂದು ಬೇಡಿಕೊಂಡನು. ಆಗ ಆ ಪರಾಶರ ಮುನಿಯು, ಭದ್ರಸೇನರಾಯನನ್ನು ಕುರಿತು ಹೀಗೆ ಹೇಳಿದನು.

ಎಲೈ ರಾಯನೇ! ನೀನು ಕೇಳಿದ ಪ್ರಶ್ನೆಗೆ ಕಾರಣವನ್ನು ಹೇಳುವೆನು ಕೇಳು. ಪೂರ್ವದಲ್ಲಿ ರಾಥಂತರ ಕಲ್ಪದಲ್ಲಿ ಕರ್ದಮ ಪ್ರಮುಖರಾದ ಮಹರ್ಷಿಗಳೆಲ್ಲರೂ ಒಟ್ಟಾಗಿ ಶ್ರೀಶೈಲಕ್ಕೆ ಹೋಗಿ ಅಲ್ಲಿಗೆ ಅಧ್ಯಕ್ಷನಾದ ಶ್ರೀ ಮಲ್ಲಿಕಾರ್ಜುನೇಶ್ವರನ ಸನ್ನಿಧಿಯಲ್ಲಿ ಕುಳಿತು ವಿಧಿವತ್ತಾಗಿ ಶ್ರೀ ರುದ್ರವನ್ನು ಜಪಿಸುತ್ತಿದ್ದರು. ಆಕಾಲದಲ್ಲಿ ಈಶ್ವರ ಸಂದರ್ಶನಾರ್ಥವಾಗಿ ಅಲ್ಲಿಗೆ ಬಂದಿದ್ದ ನಾನಾದಿಗ್ದೇಶಗಳ ಬ್ರಾಹ್ಮಣರೆಲ್ಲರೂ ಒಟ್ಟಾಗಿ ಕಲೆತು ಸ್ಥಿರಚಿತ್ತದಿಂದ ಭಕ್ತಿಪೂರ್ವಕವಾಗಿ ತಾವೂ ಕರ್ದಮಾದಿ ಋಷಿಗಳೊಡನೆ ರುದ್ರಾಧ್ಯಾಯವನ್ನು ಜಪಿಸಿ ಸಿದ್ಧಿಯನ್ನು ಪಡೆದರು. ಇಂಥ ರುದ್ರಾಧ್ಯಾಯ ಮಹಿಮೆಯಿಂದ ಆ ಬ್ರಾಹ್ಮಣರೆಲ್ಲರೂ, ಪಾಪವಿಮುಕ್ತರಾಗಿ ದೀರ್ಘಾಯುರಾರೋಗ್ಯಭಾಗ್ಯಗಳಿಂದ ಬಹುಕಾಲ ಬಾಳಿ ಕಡೆಗೆ ಶಿವಸಾಯುಜ್ಯವನ್ನು ಸಂಪಾದಿಸಿಕೊಂಡು ಮುಕ್ತಿಯನ್ನು ಹೊಂದಿದರು. ಇಂಥ ಮಹಿಮೆಯುಳ್ಳ ರುದ್ರಾಧ್ಯಾಯ ಜಪದಿಂದ ಪಾಪರಹಿತರಾಗಿ ಬಾಳಿ ಸಾಯುಜ್ಯ ಮೋಕ್ಷವನ್ನು ಸಂಪಾದಿಸಿದ ಬ್ರಾಹ್ಮಣ ಸಂತತಿಯವರೆಲ್ಲರೂ ಶ್ರೀರುದ್ರ ಪಾರಾಯಣವನ್ನು ಬಿಡದೆ ಪಾರಂಪರ್ಯವಾಗಿ ಜಪಿಸುತ್ತ ಬಂದಕಾರಣ ಲೋಕವೆಲ್ಲ ಪವಿತ್ರವಾಗಿ ಪರಿಶುದ್ಧಿಗೊಂಡಿತು. ಆಗ ಮಹಾಪಾತಕಗಳಿಗೂ ಉಪಪಾತಕಗಳಿಗೂ ನರಕದಲ್ಲಿಯೂ ಸಹ ಸ್ಥಳವಿಲ್ಲದೆ ತೊಂದರೆಯುಂಟಾಯಿತು. ಅದನ್ನು ಕಂಡು ವ್ಯಸನಾಕ್ರಾಂತರಾಗಿ ಮಹಾಪಾತಕಗಳು ಉಪಪಾತಕಗಳೊಡನೆ ಯಮನ ಸನ್ನಿಧಿಗೆ ಬಂದು ಸ್ವಾಮಿ! ನೀನು ನಮಗೆ ನರಕಾಧಿಕಾರವನ್ನು ವಹಿಸಿಕೊಟ್ಟು ನಮ್ಮನ್ನು ನಿನ್ನ ಸೇವಕರಾಗಿ ಮಾಡಿಕೊಂಡು ನಿಮ್ಮ ಬುದ್ಧಿವಂತಿಕೆಯಿಂದ ನರಕಲೋಕಗಳನ್ನು ಅಭಿವೃದ್ಧಿಮಾಡಿ ಎಂದು ನೇಮಿಸಿದುದು ಸರಿಯಷ್ಟೆ ನಿನ್ನ ಆಜ್ಞೆಯಂತೆ ಅಧಿಕಾರ ನಡೆಸುತ್ತ ನಮ್ಮ ಸಾಹಸದಿಂದ ಇದುವರೆಗೆ ಬಗೆಬಗೆಯ ಸರ್ವ ನರಕಗಳನ್ನೂ ಅಭಿವೃದ್ಧಿಮಾಡಿಕೊಂಡಿದ್ದೆವು. ಈಗನಮ್ಮ ದುರದೃಷ್ಟದಿಂದ ಮರ್ತ್ಯಲೋಕದಲ್ಲಿ ಸಕಲದೇಶಗಳಲ್ಲಿಯೂ ಸಮಸ್ತ ಪಟ್ಟಣಗಳಲ್ಲಿ ಎಲ್ಲ ಹಳ್ಳಿಗಳಲ್ಲಿಯೂ, ಕಡೆಗೆ ನದೀತೀರ ಬೆಟ್ಟ ಗುಡ್ಡ ಗುಹೆಗಳಲ್ಲಿಯು ಶ್ರೀರುದ್ರ ಪಾರಾಯಣವೂ, ರುದ್ರಾಧ್ಯಾಯ ಜಪವೂ ಪ್ರಾದುರ್ಭವಿಸಿ ನಮ್ಮನ್ನು ಹಿಂಸಿಸುತ್ತಿದೆ. ಯಾವ ಪ್ರಾಯಶ್ಚಿತ್ತಕ್ಕೂ ಹೆದರದೆ ಲೋಕದಲ್ಲಿ ಸಂಚಾರ ಮಾಡತಕ್ಕಷ್ಟು ಧೈರ್ಯವುಳ್ಳ ನಾವು ರುದ್ರಾಧ್ಯಾಯದ ಒಂದು ಅಕ್ಷರ ಶ್ರವಣವನ್ನು ಕೂಡ ಸಹಿಸಲಾರೆವು, ಶ್ರೀರುದ್ರ ಜಪವೇ ಲೋಕಕ್ಕೆ ಅಭಯ

ಪ್ರದವಾದುದು, ರುದ್ರಪಾರಾಯಣವೆ ಸಕಲ ವಿಷಹರವಾದದ್ದು. ರುದ್ರಜಪ ದಿಂದಲೆ ನಮ್ಮಗಳಿಗೆ ಮಹಾರೋಗ ಪ್ರಾಪ್ತಿಯಾಗುವುದು. ಆದಕಾರಣ ರುದ್ರ ಜಪವೆಂಬ ಅಗ್ನಿಯಿಂದ ಸುಡಲ್ಪಟ್ಟ ಶರೀರವುಳ್ಳವರಾಗಿ ಭಯದಿಂದ ನಿನ್ನ ಬಳಿಗೆ ಓಡಿಬಂದೆವು. ಹೇಗಾದರೂ ಮಾಡಿ ಯಾವ ಉಪಾಯದಿಂದಲಾ ದರೂ, ನಮಗುಂಟಾಗಿರುವ ಈ ರುದ್ರ ಜಪದ ಭಯವನ್ನು ಪರಿಹರಿಸಿ ಕಾಪಾಡಬೇಕೆಂದು ಕೈಮುಗಿದು ಕಾಲಿಗೆರಗಿ ಕಂಪಿಸುತ್ತ ಬಗೆಬಗೆಯಾಗಿ ಬೇಡಿ ಕೊಳ್ಳುತ್ತಿರುವ ಆ ಮಹಾಪಾತಕೋಪಪಾತಕಾದಿ ನಾಯಕರನ್ನು ಸಂತೈಸಿ ಅವರನ್ನು ತನ್ನೊಡನೆ ಕರೆದುಕೊಂಡು ಬ್ರಹ್ಮದೇವನ ಬಳಿಗೆ ಬಂದು ನಮಸ್ಕ ರಿಸಿ ತಾನು ಬಂದ ಕಾರ್ಯವನ್ನು ವಿವರಿಸಿ ಹೇಳುವುದಕ್ಕಾರಂಭಿಸಿ ಸೃಷ್ಟಿಕರ್ತ ನಾದ ಬ್ರಹ್ಮದೇವನನ್ನು ಕುರಿತು ಇಂತೆಂದನು.

ಎಲೈ ಸೃಷ್ಟಿಕರ್ತನೆ ! ನೀನು ನಿನ್ನ ಸೃಷ್ಟಿಕ್ರಮದಲ್ಲಿ ದೇವತೆಗಳು, ಮನು ಷ್ಯರು, ಪಶುಪಕ್ಷಿ, ಮೃಗಾದಿಗಳನ್ನು ಸೃಷ್ಟಿಮಾಡಿದಂತೆ ನಿನ್ನ ವಕ್ಷಸ್ಥಳದಿಂದ ಸ್ವರ್ಗವನ್ನೂ ಬೆನ್ನಿನಿಂದ ನರಕವನ್ನೂ ಸೃಷ್ಟಿಗೈದು, ಸ್ವರ್ಗವನ್ನು ಇಂದ್ರನಿಗೂ ನರಕವನ್ನು ಯಮನೆಂದು ಕರೆಸಿಕೊಳ್ಳುವ ನನಗೂ ವಹಿಸಿ ನೀವಿಬ್ಬರೂ ಈ ಲೋಕಗಳಿಗೆ ಒಡೆಯರಾಗಿ ಆಳುತ್ತಿರಿ ಎಂದು ನೇಮಿಸಿದೆಯಷ್ಟೆ, ಈಗ ಧರ್ಮ ಪ್ರವರ್ತನೆಯಿಂದ ಧರ್ಮಸಂತತಿಯೇ ಅಧಿಕವಾಗಿ ಅಧರ್ಮಕ್ಕೆ ನೆಲೆಯಿಲ್ಲ ದಂತಾಗಿದೆ, ಆದಕಾರಣ ಅಧರ್ಮಕ್ಕೆ ನಿಲುಕಡೆಯೆ ಇಲ್ಲದೆ ಹಾಳಾಗುವ ಹೊತ್ತು ಬಂದಿತು. ಧರ್ಮಸಂತತಿಗಳನ್ನು ವಿವರಿಸಿ ಹೇಳುವೆನು ಕೇಳು. ಸತ್ಯ, ಕ್ಷಮೆ, ಶಿವಧ್ಯಾನ, ಇಂದ್ರಿಯನಿಗ್ರಹ, ಭೂತದಯೆ, ಸಂತೋಷ, ಮನ ಶುದ್ಧಿ, ವೈರಾಗ್ಯ ಎಂಬ ಎಂಟು ಮಾನಸಿಕ ಧರ್ಮಗಳು, ರುದ್ರಾಧ್ಯಾಯ ಜಪವೂ ತ್ರಿಸುಪರ್ಣಮಂತ್ರವೂ, ಶಿವಪಂಚಾಕ್ಷರೀ ಮಹಾಮಂತ್ರವೂ, ಪುರುಷಸೂಕ್ತ ಪಾರಾಯಣವೂ ಪಂಚಬ್ರಹ್ಮಮಂತ್ರಗಳೂ, ಇನ್ನೂ ಬಹು ಬಗೆಯಾದ ದೇವ ತಾಸ್ತೋತ್ರಗಳೂ ಮಂತ್ರಜಪಗಳೂ ವಾಚಕ ಧರ್ಮಗಳು, ಇದೂ ಅಲ್ಲದೆ ಶಿವ ಲಿಂಗಾರ್ಚನೆ, ಶಿವಲಿಂಗ ಪ್ರದಕ್ಷಿಣೆ, ಶಿವನಿಗೆ ಮಾಡುವ ನಮಸ್ಕಾರ ಅಭಿಷೇಕಾ ರ್ಚನೆಗಾಗಿ ಅಗ್ರೋದಕಾದಿ ಅಷ್ಟಪೂಜಾ ದ್ರವ್ಯಗಳ ಸಂಗ್ರಹಣ, ದೇವಾಲಯ, ಶಿವಾಲಯ, ದೇವಪೂಜಾಸ್ಥಳಗಳ ಸಂಮಾರ್ಜನೆ ಪುಣ್ಯಕ್ಷೇತ್ರ ಸಂಚಾರ, ತೀರ್ಥ ಯಾತ್ರಾದಿ ಗಮನಗಳು ಕಾಯಕಧರ್ಮಗಳು, ಹೀಗೆ ಏರ್ಪಟ್ಟಿರುವ ಧರ್ಮ ಸಂತ ತಿಗೆ ಬದಲಾಗಿ ಅಧರ್ಮ ಸಂತತಿಯು ಬಹಳ ಉಂಟು. ಅದರಲ್ಲಿ ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳೇ ಬಹು ಮುಖ್ಯವಾದುವು. ಇವುಗಳಲ್ಲಿ ಗುರು ತಲ್ಪಗಮನ ಪರಸ್ತ್ರೀಗಮನ ಮಾಂಸಾಹಾರ ಮದ್ಯಪಾನಾದಿಗಳು ಕಾಮಸಂತ ತಿಯಿಂದ ಹುಟ್ಟಿದವು. ಮಾತೃಹತ್ಯ ಬ್ರಹ್ಮಹತ್ಯ ಮೊದಲಾದುವು ಕ್ರೋಧ

ಸಂತತಿಗೆ ಸೇರಿದವು, ದೇವಸ್ವಾಪಹರಣ ಬ್ರಹ್ಮಸ್ವಾಪಹರಣ ಸ್ವರ್ಣಸ್ತೇಯ ಮೊದಲಾದುವು ಲೋಭ ಸಂತತಿಯಿಂದ ಹುಟ್ಟಿದವು. ಇಂಥ ಮಹಾಪಾತಕಗಳನ್ನು ಕರೆದು ಲೋಕದಲ್ಲಿ ಪಾಪಾತ್ಮರಾದವರನ್ನು ಹಿಡಿದು ತಂದು ನರಕದಲ್ಲಿ ಹಾಕುವಂತೆ ನಾನೇ ಅವರಿಗೆ ಅಧಿಕಾರವನ್ನು ಕೊಟ್ಟೆನು. ಅವರಂತೆ ಅವರು ತಮ್ಮ ಕಾರ್ಯದಲ್ಲಿ ನಿರತರಾಗಿದ್ದರು, ಆಪರೆ ಲೋಕದಲ್ಲಿ ಎಲ್ಲೆಲ್ಲಿಯೂ ಹರಡಿ ಹಬ್ಬಿಕೊಂಡಿರುವ ರುದ್ರಾಧ್ಯಾಯ ಜಪವು ಮಹಾಪಾತಕಿಗಳನ್ನೆಲ್ಲ ತನ್ನ ಹಿಂದೆ ಹಾಕಿಕೊಂಡು ತಾನು ಅವರಿಗೆ ಆಶ್ರಯವಾಗಿ ಪಾತಕಾದಿಗಳನ್ನು ಎಲ್ಲಿಯೂ ನಿಲ್ಲಗೊಡಿಸದೆ ಬಾಧಿಸುತ್ತಿದೆ. ಈ ಕಾರಣದಿಂದ ಮಹಾಪಾತಕಗಳೂ ಉಪಪಾತಕಗಳೂ ಶಕ್ತಿಗುಂದಿ ಕಂಗೆಟ್ಟಮೇಲೆ ನರಕಗಳು ಹೇಗೆ ಅಭಿವೃದ್ಧಿಯಾದಾವು ? ನರಕಗಳು ಬರಿದಾದ ಮೇಲೆ ನನ್ನ ಅಧಿಕಾರವೇನಿದೆ ? ಯಮನೇ ಇಲ್ಲದ ಬಳಿಕ ಪಾಪಪುಣ್ಯಗಳನ್ನು ವಿಚಾರಿಸಿ ಶಿಕ್ಷೆರಕ್ಷೆಗಳನ್ನು ಮಾಡ ತಕ್ಕವರು ಯಾರು ? ಆದಕಾರಣ ದಯಾಳುವಾದ ನೀನು ಹೇಗಾದರೂ ನನ್ನ ಅಧಿಕಾರವು ಉಳಿಯುವಂತೆ ಮಾಡಿ ನನ್ನನ್ನು ಉದ್ಧರಿಸು, ನಿನ್ನನ್ನು ಮರೆಹೊಕ್ಕೆನು, ನಿನ್ನ ಹೊರತು ನನಗೆ ದಿಕ್ಕಾರು ಎಂದು ಬೇಡಿಕೊಂಡನು.

ಈ ಪ್ರಕಾರವಾಗಿ ದುಃಖಾಕ್ರಾಂತನಾಗಿ ತನ್ನನ್ನು ಮರೆಹೊಕ್ಕ ಯಮನನ್ನು ಸಂತೈಸಿ ಬ್ರಹ್ಮದೇವನು ಅಯ್ಯಾ ! ಯಮಧರ್ಮರಾಯನೆ ! ಕೇಳು ನೀನು ಹೇಳಿದಂತೆ ಧರ್ಮಸಂತತಿ ಬಹಳವಾಗಿ ಅಧರ್ಮವನ್ನು ಕೆಡಿಸುವದಕ್ಕೆ ಪ್ರಬಲವಾದ ಒಂದು ಕಾರಣವಿದೆ ಅದರಿಂದ ನಿನಗೆ ಈಗತಿ ಪ್ರಾಪ್ತವಾಯಿತು. ಶುದ್ಧ ವಿದ್ಯೆಯಿಂದ ಹುಟ್ಟಿ ಶ್ರೀ ವಿದ್ಯೆಯಲ್ಲಿ ಪ್ರತಿಫಲಿಸಿದ ಶ್ರದ್ಧಾಮೇಧಾ ಎಂಬ ದೇವತೆಗಳ ಪ್ರಭಾವದಿಂದ ರುದ್ರಜಪ್ಯವು ಅಧಿಕವಾಗಿ ಹೆಚ್ಚಿ ಲೋಕವನ್ನು ಹೀಗೆ ಮಾಡಿತು. ಆದಕಾರಣ ಈಗ ನಿನಗೋಸ್ಕರ ಶ್ರದ್ಧಾಮೇಧೆಗಳನ್ನು ತುಳಿದು ಅಣಗಿಸಬೇಕು. ಇದಕ್ಕೆ ತಕ್ಕ ಉಪಾಯವಿದೆ. ನೀನು ಹೆದರಬೇಡ, ಸುಸ್ಥಿರವಾಗಿರು ಎಂದು ಹೇಳಿ ಸಮಾಧಾನಪಡಿಸಿ ಯಮನನ್ನು ಅವನ ಲೋಕಕ್ಕೆ ಕಳುಹಿಸಿ, ತನ್ನ ಬುದ್ಧಿ ಬಲದಿಂದ ಅವಿದ್ಯಾಪ್ರಧಾನಗಳಾದ ಅಶ್ರದ್ಧಾ ದುರ್ಮೇಧೆಗಳೆಂಬ ದೇವತೆಗಳನ್ನು ಸೃಷ್ಟಿಸಿ ಇನ್ನು ಮೇಲೆ ನೀವು ಭೂಲೋಕದಲ್ಲೆಲ್ಲ ಸಂಚರಿಸುತ್ತ ಎಲ್ಲೆಲ್ಲಿ ರುದ್ರಾಧ್ಯಾಯ ಪಾರಾಯಣ ಶ್ರೀ ರುದ್ರಜಪವೂ, ಶಿವಪೂಜೆಯೂ ನಡೆಯುತ್ತಿರುವುದೊ ಅಲ್ಲಿಗೆಲ್ಲ ಹೋಗಿ ಹಾಗೆ ಜಪತಪಪಾರಾಯಣ ಮಂತ್ರ ಪುನಶ್ಚರಣಾದಿಗಳನ್ನು ಮಾಡುತ್ತಿರುವ ಭಕ್ತರ ಹೃದಯದಲ್ಲಿ ನೆಲೆಗೊಂಡಿರುವ ಶ್ರದ್ಧೆಮೇಧೆಗಳನ್ನು ಹೊರಹೊರಡಿಸಿ, ನೀವು ಆ ಸ್ಥಾನವನ್ನು ಆವರಿಸಿಕೊಳ್ಳಿ ಎಂದು ಅಪ್ಪಣೆ ಮಾಡಿ ಕಳುಹಿಸಿದನು. ಈಗ ಆ ಅಶ್ರದ್ಧಾದುರ್ಮೇದೆಯರಿಬ್ಬರೂ ಅಧಿಕಗರ್ವದಿಂದ ಒಟ್ಟುಗೂಡಿ ಲೋಕವನ್ನು

ಸಂಚರಿಸುತ್ತ ಎಲ್ಲೆಲ್ಲಿ ಶ್ರೀರುದ್ರಜಪ ಪಾರಾಯಣಗಳು ನಡೆಯುತ್ತಿದ್ದವೊ ಅಲ್ಲಲ್ಲಿ ಸಂಚರಿಸಿ ಆಯಾ ಭಕ್ತರಹೃದಯದಲ್ಲಿ ನೆಲೆಯಾಗಿ ನಿಂತಿದ್ದ ಶ್ರದ್ಧಾದೇವಿಯನ್ನೂ ಮೇಧಾ ದೇವಿಯನ್ನು ಓಡಿಸಿ, ಅವರ ಸ್ಥಾನದಲ್ಲಿ ತಾವು ಅಧಿಕಾರಮಾಡತೊಡ ಗಿದ ಕಾರಣ ಶ್ರೀರುದ್ರಜಪವೂ, ರುದ್ರಾಧ್ಯಾಯ ಪಾರಾಯಣವೂ ನಿಂತುಹೋಗಿ ಎಲ್ಲೆಲ್ಲಿಯೂ ಅಧರ್ಮವೇ ಆವರಿಸಿಕೊಂಡಿತು. ಅನಂತರ ದುರ್ಮೇಧೆ ಅಶ್ರದ್ಧೆಗಳ ಅವಲಂಬನೆಯಿಂದ ಹಬ್ಬಿಬೆಳೆದ ಅಧರ್ಮ ಸಂತತಿಯಿಂದ ನೈಯುಬ್ಬಿ ಯಮನು ಎಂದಿನಂತೆ ತನ್ನ ಲೋಕದಲ್ಲಿ ಸ್ವಸ್ಥಮಾನಸನಾಗಿ ಅಧಿಕಾರಮಾಡುತ್ತಿದ್ದನು.

ಎಲೈ ಭದ್ರಸೇನನೆ ! ಈ ಕಾರಣದಿಂದ ಲೋಕದಲ್ಲಿ ಎಲ್ಲರೂ ರುದ್ರಾಧ್ಯಾಯವನ್ನು ಜಪಿಸಿ ದೀರ್ಘಾಯುಷ್ಯವನ್ನು ಪಡೆಯಲು ಸಾಧ್ಯವಾಗಲಿಲ್ಲ. ಇದರಿಂದ "ಶ್ರೇಯಾಂಸೋ ಬಹುವಿಘ್ನಾನಿ" ಎಂಬ ಶಾಸ್ತ್ರ ವಚನವು ಪ್ರಚುರಗೊಂಡಿತು, ಇನ್ನು ಹೆಚ್ಚಾಗಿ ಹೇಳಲಾರೆ. ಪ್ರಕೃತದಲ್ಲಿ ನಿನ್ನ ಮಗನಿಗೆ ಬಂದಿರುವ ಮೃತ್ಯುವು ಪರಿಹಾರವಾಗುವ ಹಾಗೆ ಮಹಾಮಹಿಮೆಯುಳ್ಳ ಈ ರುದ್ರಾಧ್ಯಾಯ ಜಪ ಪರಿಪೂತ ಜಲದಿಂದ ಅಭಿಷೇಕವನ್ನು ಮಾಡಿಸು ನಿನ್ನ ವಂಶಾಂಕುರಕ್ಕೆ ಬೇಕಾದ ಶ್ರೇಯಸ್ಸಲಿಲವನ್ನು ಸಂಪಾದಿಸು ಎಂದು ಹೇಳಲು, ಭದ್ರಸೇನನು ಸಂತೋಷಭರಿತನಾಗಿ ಪರಾಶರ ಮಹಾಮುನಿಗೆ ನಮಸ್ಕರಿಸಿ ನನಗೆ ಇದೊಂದೂ ತಿಳಿಯದು, ನನ್ನಿಂದ ಆಗಬೇಕಾದ ಸಹಾಯವನ್ನೆಲ್ಲ ಒದಗಿಸಿ ಕೊಡಲು ಸಿದ್ಧನಾಗಿರುವೆನು, ಆದಿಪುರುಷನಾದ ನೀನೇ ಆಚಾರ್ಯನಾಗಿ ನಿಂತು ಬ್ರಹ್ಮನಿಷ್ಠರಾದ ತಪಸ್ವಿಗಳನ್ನು ಕರೆಸಿಕೊಂಡು ಅವರ ಮೂಲಕ ಶಾಸ್ತ್ರೋಕ್ತವಾದ ಕರ್ಮಗಳನ್ನು ಸಾಂಗವಾಗಿ ಮಾಡಿಸಿ ನನ್ನನ್ನು ಉದ್ಧರಿಸು ಎಂದು ಬೇಡಿಕೊಂಡನು. ಬಳಿಕ ಪರಾಶರ ಮಹಾಮುನಿಯು ಸಂತುಷ್ಟನಾಗಿ ಬ್ರಹ್ಮನಿಷ್ಠರಾಗಿ ಜಿತೇಂದ್ರಿಯರಾಗಿ, ಶ್ರದ್ಧಾವಂತರಾಗಿ ಸದಾಚಾರ ಸಂಪನ್ನರೆನಿಸಿದ ಹತ್ತುಸಾವಿರಮಂದಿ ಬ್ರಾಹ್ಮಣೋತ್ತಮರನ್ನು ಬರಮಾಡಿ ಶಾಸ್ತ್ರೋಕ್ತ ಕ್ರಮದಿಂದ ಆ ಬ್ರಾಹ್ಮಣ ಗುಂಪಿನೊಂದಿಗೆ ತಾನು ಸೇರಿಕೊಂಡು ಹತ್ತುಸಾವಿರ ಸುವರ್ಣ ಕಲಶಗಳಲ್ಲಿ ಸಮಸ್ತ ಪುಣ್ಯನದೀ ತೀರ್ಥಗಳನ್ನು ತುಂಬಿ ಅದಕ್ಕೆ ತಕ್ಕ ಹಾಗೆ ಪುಣ್ಯವೃಕ್ಷಗಳ ಚಿಗುರೆಲೆಗಳನ್ನು ಆ ಕಲಶಗಳಿಗೆ ಹಾಕಿ ಹತ್ತು ಸಾವಿರ ಬಾರಿ ಶ್ರೀರುದ್ರವನ್ನು ಜಪಿಸಿ ರುದ್ರಜಪದಿಂದ ಪವಿತ್ರವಾದ ಆ ಕಲಶೋದಕವನ್ನು ಎತ್ತಿ ಸ್ವಸ್ತಿ ಮಂತ್ರಾರ್ಥಗಳನ್ನು ಹಾಡುತ್ತ ರಾಜಕುಮಾರನಿಗೆ ಅಪಮೃತ್ಯುವೆಂದು ಗೊತ್ತುಮಾಡಿದ್ದ ಏಳನೆಯ ದಿನದಲ್ಲಿ ಅಭಿಷೇಕಮಾಡಿ ಸ್ನಾನಮಾಡಿಸಿದರು. ಕೂಡಲೆ ಆ ರಾಜಕುಮಾರನೂ ಅಕಸ್ಮಾತ್ತಾಗಿ ಕೂಗಿಕೊಳ್ಳುತ್ತ ಭೂಮಿಗೆ ಬಿದ್ದು ಮೂರ್ಛೆಹೋದನು, ಆಗ ಪರಾಶರ ಮಹಾಮುನಿಯು ಮೂಲಮಂತ್ರವನ್ನು ಜಪಿಸುತ್ತ ಅಭಿಮಂತ್ರಿಸಿದ ವಿಭೂತಿಯನ್ನು ತಾನೂ

ತನ್ನೊಡನಿದ್ದ ಹತ್ತುಸಹಸ್ರ ಬ್ರಾಹ್ಮಣರೂ ಏಕಕಾಲದಲ್ಲಿ ಆ ರಾಜಪುತ್ರನ ಲಲಾಟ ಪ್ರದೇಶದಲ್ಲಿ ಹಚ್ಚಿದರು, ಕೂಡಲೆ ರಾಜಪುತ್ರನು ನಿದ್ರೆಯಿಂದ ಎಚ್ಚತ್ತು ಎದ್ದವನ ಹಾಗೆ ಪ್ರಜ್ಞಾವಂತನಾಗಿ ಎದ್ದು ಕುಳಿತು ಎಲೈ ಬ್ರಾಹ್ಮಣೋತ್ತಮರಿರಾ ! ಕೇಳಿ, ನಾನು ಏಕಾಂಗಿಯಾಗಿದ್ದ ಕಾಲದಲ್ಲಿ ಅತ್ಯಂತ ಭಯಂಕರವಾದ ಆಕಾರದಿಂದ ಕೂಡಿದ ಒಬ್ಬಾನೊಬ್ಬ ಮನುಷ್ಯನು ನನ್ನ ಬಳಿಗೆ ಬಂದು ಬಲಾತ್ಕಾರದಿಂದ ಹಿಡಿದು ಎಳೆದು ಹೊಡೆಯುವುದಕ್ಕೆ ಪ್ರಾರಂಭಿಸಿದನು. ಆಗ ಎಲ್ಲಿಂದಲೊ ಅಲ್ಲಿಗೆ ಓಡಿಬಂದ ನಾಲ್ಕು ಜನ ಸುಂದರ ಪುರುಷರು ಅವನನ್ನು ಹಿಡಿದುಕೊಂಡು ಹಗ್ಗದಿಂದ ಬಿಗಿದು ದೂರವಾಗಿ ಎಳೆದುಕೊಂಡು ಹೋದರು ಬಳಿಕ ನಾನು ನಿರ್ಭಯನಾಗಿ ಇಲ್ಲಿಗೆ ಬಂದೆನು. ಇದೆಲ್ಲ ನಾನು ಕಂಡ ವಿಷಯವೇ ಹೊರತು ಕಾಣದುದೊಂದೂ ಇಲ್ಲ ಎಂದು ಹೇಳಲು, ಆ ಬ್ರಾಹ್ಮಣರು ಸಂತೋಷಪಡುತ್ತ ರಾಜಕುಮಾರನನ್ನು ಬಹಳವಾಗಿ ಹರಸಿ ಆಶೀರ್ವದಿಸಿದರು.

ಅನಂತರದಲ್ಲಿ ಭದ್ರಸೇನನು ಆನಂದಭರಿತನಾಗಿ ಆ ಬ್ರಾಹ್ಮಣರಿಗೆಲ್ಲ ಅತ್ಯಂತವಾಗಿ ದಾನ ದಕ್ಷಿಣೆಗಳನ್ನು ಕೊಟ್ಟು ತೃಪ್ತಿಪಡಿಸಿ ಮೃಷ್ಟಾನ್ನ ಭೋಜನವನ್ನು ಮಾಡಿಸಿ ತೃಪ್ತರಾದ ಆ ಋಷಿಮಂಡಲಿಯವರಿಂದ ಆಶೀರ್ವಾದವನ್ನು ಪಡೆದನಂತರ ಅವರ ಅನುಜ್ಞೆಯನ್ನು ಪಡೆದು ತನ್ನ ಬಂಧುವರ್ಗದವರೊಂದಿಗೆ ತಾನೂ ಭೋಜನಮಾಡಿ ತಾಂಬೂಲವನ್ನು ಸವಿಯುತ್ತ ಉತ್ಸಾಹದಿಂದ ಕೂಡಿ ನಲಿಯುತ್ತಿದ್ದ ಆ ಬ್ರಾಹ್ಮಣ ಮಂಡಲಿಯ ಮಧ್ಯದಲ್ಲಿ ಕುಳಿತು ಒಡ್ಡೋಲಗವನ್ನು ಕೊಟ್ಟನು. ಅಷ್ಟು ಹೊತ್ತಿಗೆ ತ್ರಿಲೋಕ ಸಂಚಾರಿಯಾದ ನಾರದ ಮಹಾಮುನಿಯು ವಿನೋದಕರವಾದ ತನ್ನ ವೀಣೆಯನ್ನು ಬಾರಿಸುತ್ತ ನಾರಾಯಣಧ್ಯಾನ ತತ್ಪರನಾಗಿ ಭದ್ರಸೇನರಾಯನ ಅರಮನೆಗೆ ಬಂದನು. ಆಗ ಆ ರಾಯನು ಭಕ್ತಿನಮ್ರನಾಗಿ ನಾರದಮಹರ್ಷಿಗೆ ನಮಸ್ಕರಿಸಿ ಬ್ರಾಹ್ಮಣರೊಡಗೂಡಿ ಅರ್ಘ್ಯಪಾದ್ಯಾದಿಗಳಿಂದ ನಾರದಋಷಿಯನ್ನು ಪೂಜಿಸಿ ಉಚಿತಾಸನದಲ್ಲಿ ಕುಳ್ಳಿರಿಸಿ ವಿನಯವಿನಮಿತ ಚಿತ್ತನಾಗಿ, ಸ್ವಾಮಿಾ ! ನಾನಾವಿನೋದ ಪರಿಶ್ರುತರಾದ ನಾರದರೆ ! ನೀವು ತ್ರಿಲೋಕ ಸಂಚಾರಿಗಳು, ಅಲ್ಲಲ್ಲಿ ನಡೆಯುವ ಚಿತ್ರವಿಚಿತ್ರಗಳನ್ನು ಚೆನ್ನಾಗಿ ಬಲ್ಲವರು. ಈಗ ಎಲ್ಲಿಂದ ಇಲ್ಲಿಗೆ ಬಂದಿರಿ ? ನೀವು ಬರುವಾಗ ಮಾರ್ಗಮಧ್ಯದಲ್ಲಿ ಏನಾದರೂ ಆಶ್ಚರ್ಯವನ್ನು ಕಂಡಿರಾ ! ಹೇಗೆ ? ನಿಮ್ಮ ಮುಖೋದ್ಗತವಾದ ವಚನಾಮೃತವನ್ನು ಸವಿದು ತೃಪ್ತನಾಗಬೇಕೆಂಬ ಆಸೆಯಿಂದ ಕೇಳುತ್ತಿದ್ದೇನೆ, ನೀವು ಕಂಡು ಕೇಳಿದ ಆಶ್ಚರ್ಯವು ಏನಾದರೂ ಇದ್ದರೆ ಅದನ್ನು ನನಗೆ ಹೇಳಬೇಕೆಂದು ಕೇಳಿದನು.

ಆಗ ನಾರದಮಹರ್ಷಿಯು ಸಭೆಯನ್ನು ನೋಡಿ ಹುಸಿನಗೆಯಿಂದ ಕೂಡಿ ಹಸನ್ಮುಖಿಯಾಗಿ ಭದ್ರಸೇನರಾಯನನ್ನು ಕುರಿತು, ಎಲೈ ರಾಜೇಂದ್ರನೆ! ನಾನು ಈಗ ಅಂತರಿಕ್ಷದಿಂದ ಇಳಿದು ಇಲ್ಲಿಗೆ ಬಂದೆನು. ಬರುವಾಗ ಮಾರ್ಗ ಮಧ್ಯದಲ್ಲಿ ಬಹು ಆಶ್ಚರ್ಯವಾದ ಸಂಗತಿಯೊಂದನ್ನು ಕಂಡು ಅದನ್ನು ನಿನಗೆ ಹೇಳಬೇಕೆಂದು ಇಲ್ಲಿಗೆ ಬಂದೆನು. ಅದಕ್ಕೆ ಸರಿಯಾಗಿ ನೀನೂ ನನ್ನನ್ನು ಸತ್ಕರಿಸಿ ಲೋಕದಲ್ಲಿ ನಡೆದ ಆಶ್ಚರ್ಯವೇನಾದರೂ ಇದ್ದರೆ ನನಗೆ ತಿಳಿಸ ಬೇಕೆಂದು ಕೇಳಿಕೊಂಡೆ, ಆದಕಾರಣ ನಿನಗೋಸ್ಕರವಾಗಿ ಲೋಕಾನುಗ್ರಹ ವುಂಟಾಗಲೆಂದು ನಾನು ಕಂಡ ಆಶ್ಚರ್ಯವನ್ನು ಹೇಳುವೆನು ಕೇಳು. ಈಗ ಒಂದು ಯಾಮಕ್ಕೆ ಮುಂಚೆ ಮೃತ್ಯುವು ಮಹಾಭಯಂಕರವಾದ ರೂಪವನ್ನು ಧರಿಸಿ ಕೊಂಡು ದಂಡಪಾಣಿಯಾಗಿ ನಿನ್ನ ಮಗನನ್ನು ಕೊಲ್ಲಬೇಕೆಂದು ಬರುತ್ತಿದ್ದನು. ಜಗತ್ತಿಗೆ ಸ್ವಾಮಿಯಾದ ಪರಮೇಶ್ವರನು ಮಹಾಕಾಳನೆಂಬ ಗಜಶ್ರೇಷ್ಠನಿಂದ ಆ ವಾರ್ತೆಯನ್ನು ಕೇಳಿ, ಬಹುಮಂದಿ ಶಿವದೂತರೊಡನೆ ವೀರಭದ್ರ ಸ್ವಾಮಿ ಯನ್ನು ಕಳುಹಿಸಿದನು, ಬಳಿಕ ವೀರಭದ್ರನು ಮೃತ್ಯುವಿನ ಬಳಿಗೆ ಬಂದು ಅವನನ್ನು ಹಗ್ಗದಿಂದ ಕಟ್ಟಿ ದಂಡಿಸುತ್ತ ಪರಶಿವನ ಬಳಿಗೆ ಎಳೆದುಕೊಂಡು ಹೋಗುತ್ತಿದ್ದನು. ಆಗ ಯಮನು ಭಯಪಟ್ಟು ವೀರಭದ್ರನಿಗೆ ನಮಸ್ಕಾರ ಮಾಡಿ ಅಯ್ಯಾ! ನಿರಪರಾಧಿಯಾದ ನನ್ನನ್ನು ಏಕೆ ಹಿಂಸೆಪಡಿಸುತ್ತಿದ್ದೀಯೆ! ಲೋಕದಲ್ಲಿ ಅವರವರ ಕರ್ಮಾನುಸಾರವಾಗಿ ಆಯುರಾರೋಗ್ಯ ಭಾಗ್ಯಗಳು ಉಂಟಾಗುವುವು. ಈಬಾಲಕನ ಆಯುರ್ದಾಯವು ನಶಿಸಿಹೋದಕಾರಣ ಇವನನ್ನು ಕೊಲ್ಲುವುದಕ್ಕಾಗಿ ನಾನು ಇಲ್ಲಿಗೆ ಬಂದೆನು ಇದರಲ್ಲಿ ನನ್ನ ತಪ್ಪೇನಿದೆ? ನಿನಗೆ ಇಷ್ಟು ಆಗ್ರಹವೇತಕ್ಕೆ? ನಿನಗೆ ನಮಸ್ಕಾರ ನಿನ್ನ ಭಕ್ತನಾದ ನನ್ನಲ್ಲಿ ಅನುಗ್ರಹಿಸು ಎಂದು ಹೇಳಲು ವೀರಭದ್ರನು ಅಯ್ಯಾ! ನೀನು ವಿಚಾರಶೂನ್ಯ ನಾಗಿ ದುಡುಕಿ ಕೆಲಸಮಾಡಬೇಡ, ರುದ್ರಸ್ನಾನ ಫಲದಿಂದ ಈ ಬಾಲಕನ ಪಾಪ ಗಳೆಲ್ಲವೂ ನಾಶವಾಗಿವೆ, ಇವನಿಗೆ ಹತ್ತುಸಹಸ್ರ ವರ್ಷ ಆಯುಃಪ್ರಮಾಣ ವುಂಟು. ಇಂಥವನನ್ನು ನೀನು ಕೊಲ್ಲುವುದಕ್ಕೆ ಬರಬಹುದೆ? ಎಂದು ಕೇಳಲು ಯಮನು ಭಯಭ್ರಾಂತನಾಗಿ ಚಿತ್ರಗುಪ್ತರನ್ನು ಕರೆಸಿ ರಾಜಕುಮಾರನ ಆಯು ಷ್ಯವನ್ನು ವಿಚಾರಿಸುವಲ್ಲಿ ಅವರು ಈ ಹುಡುಗನಿಗೆ ಹನ್ನೆರಡು ವರ್ಷಮಾತ್ರ ಆಯುಸ್ಸು ಎಂದು ಹೇಳಿ ಬಳಿಕ ಲಿಖಿತವನ್ನು ತೆಗೆದು ಓದುತ್ತ ಹತ್ತು ಸಹಸ್ರ ವರ್ಷ ಪರಮಾಯುಷ್ಯವೆಂದು ಹೇಳಿದರು. ಬಳಿಕ ಯಮನು ಭಯಗ್ರಸ್ತನಾಗಿ ತನ್ನ ಪಾಶವನ್ನು ಸಂಹರಿಸಿಕೊಂಡು, ವೀರಭದ್ರಸ್ವಾಮಿಗೆ ನಮಸ್ಕರಿಸಿ, ಅವನ ಕ್ಷಮಾಪಣೆಯನ್ನು ಬೇಡಿಕೊಂಡು ತನ್ನ ಲೋಕಕ್ಕೆ ಹೊರಟುಹೋದನು. ವೀರ ಭದ್ರನು ಪರಿವಾರ ಸಹಿತನಾಗಿ ಕೈಲಾಸಕ್ಕೆ ತೆರಳಿದನು. ನಾನು ಇದನ್ನು

ನಿನಗೆ ಹೇಳುವುದಕ್ಕಾಗಿ ಇಲ್ಲಿಗೆ ಬಂದೆನು. ಇಂಥ ಮಹಿಮೆಯುಳ್ಳ ರುದ್ರಾಧ್ಯಾಯ ಪ್ರಭಾವದಿಂದ ಮೃತ್ಯುವಶವಾಗಿದ್ದ ನಿನ್ನ ಮಗನಿಗೆ ಹತ್ತು ಸಾವಿರ ವರ್ಷ ಆಯುಷ್ಯವುಂಟಾಯಿತೆಂದು ಹೇಳಿ ನಾರದನು ದೇವಲೋಕಕ್ಕೆ ತೆರಳಿದನು. ಪರಾಶರಾದಿ ಮುನಿಗಳು ತಂತಮ್ಮ ಆಶ್ರಮಗಳಿಗೆ ಹೊರಟುಹೋದರು. ಅನಂತರದಲ್ಲಿ ಭದ್ರಸೇನಮಹಾರಾಯನು ರುದ್ರಾಧ್ಯಾಯದಿಂದ ಪ್ರಾದುರ್ಭವಿಸಿದ ಶ್ರೇಯಸ್ಸಿನಿಂದ ಬಹುಕಾಲ ಪುತ್ರಪೌತ್ರಾದಿ ಸಂಪತ್ತಿನಿಂದ ಕೂಡಿ ಸುಖವಾಗಿ ಬಾಳಿದನು. ಇಂಥ ರುದ್ರಾಧ್ಯಾಯ ಮಹಿಮೆಯನ್ನು ಯಾರು ಭಕ್ತಿಯಿಂದ ಓದುವರೊ! ಯಾರು ಶ್ರದ್ಧೆಯಿಂದ ಕೇಳುವರೊ! ಯಾರು ಪ್ರೀತಿಯಿಂದ ಪಠಿಸುವರೊ! ಅವರೆಲ್ಲರೂ ಅನೇಕ ಜನ್ಮಗಳಲ್ಲಿ ಮಾಡಿದ ಪಾಪಗಳನ್ನು ಪರಿಹರಿಸಿಕೊಂಡು ಸುಖದಿಂದ ಶಿವಸಾಯುಜ್ಯವನ್ನು ಪಡೆಯುವರೆಂದು ಸೂತಪುರಾಣಿಕನು ಶೌನಕಾದಿಗಳಿಗೆ ನಿರೂಪಿಸಿದನು.

ಇದು ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರನರಪತಿ ಬಿರುದೆಂತೆಂಬರಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡ ಧರಣೀ ವರಾಹ ಹನುಮದ್ಗರುಡ ಅಂಕುಶ ಕುಠಾರ ಸಿಂಹ ಮೊದಲಾದ ನಾನಾ ಬಿರುದಾಂಕಿತ ಯಾದವ ಕುಲತಿಲಕ ಆತ್ರೇಯಸಗೋತ್ರ ಅಶ್ವಲಾಯನ ಸೂತ್ರ ಋಕ್ಶಾಖಾಧ್ಯಾಯಿ ಮಹಿಶೂರ ರಾಜಒಡೆಯರವರ ಪೌತ್ರ ನರಸಭೂಪಾಲಕರ ಪುತ್ರ ಶ್ರೀಚಾಮರಾಜ ಒಡೆಯರು ಕರ್ಣಾಟಕ ಭಾಷೆಯಿಂದ ವಿರಚಿಸಿದ ಸ್ಕಂದಪುರಾಣೋಕ್ತವಾದ ಬ್ರಹ್ಮೋತ್ತರ ಖಂಡದಲ್ಲಿ ರುದ್ರಾಧ್ಯಾಯ ಮಹಿಮೆ ಎಂಬ ೧೯ನೆಯ ಅಧ್ಯಾಯಕ್ಕೆ ಮಂಗಳಮಸ್ತು.



## ಉಮಾಮಹೇಶ್ವರ ವ್ರತವಿಧಾನ.

### ಇಪ್ಪತ್ತನೆಯ ಅಧ್ಯಾಯ.

ಅನಂತರದಲ್ಲಿ ಸೂತಮಹಾಮುನಿಯು ತನ್ನ ಶಿಷ್ಯರಾದ ಶೌನಕಾದಿಗಳನ್ನು ಕುರಿತು ಎಲೈ ಋಷಿವರ್ಯರಿರಾ ಇದುವರೆಗೆ ನಾನುಹೇಳಿದ ಶಿವಕಥೆಯನ್ನೂ ಶಿವಭಕ್ತರಮಹಿಮೆಯನ್ನು ಶಿವಮಂತ್ರದ ಪ್ರಭಾವವನ್ನು ಭಕ್ತಿಯಿಂದ ಕೇಳಿದಿರಿ. ಆದಕಾರಣದಿಂದಲೆ ನಿಮಗೆ ರುದ್ರಾಧ್ಯಾಯ ಮಹಿಮೆಯೂ ಶ್ರುತವಾಯಿತು. ಇನ್ನು ಮುಂದೆ ಭಕ್ತ ಕಲ್ಪದ್ರುಮದಂತೆ ಕೋರಿದ ಕೋರಿಕೆಗಳನ್ನುಕೊಡುವ ಸರ್ವ

ಶ್ರೇಷ್ಠವಾದ ಸಮಸ್ತ ವ್ರತಗಳಲ್ಲಿಯೂ ಸರ್ವೋತ್ತಮವಾದುದೆಂದು ಹೊಗಳಿಸಿ ಕೊಳ್ಳುತ್ತಿರುವ ಸಕಲ ಸಂಪತ್ತುಗಳಿಗೂ ಕಾರಣವಾದ ಉಮಾಮಹೇಶ್ವರ ವ್ರತ ವಿಧಾನವನ್ನು ನಿಮಗೋಸ್ಕರವಾಗಿ ನಿರೂಪಿಸುತ್ತಿರುವೆನು ಕೇಳಿ, ಎಂದು ಹೇಳಿ ಸೂತಪುರಾಣಿಕನು ಲೋಕೋತ್ತರ ಸುಖಪ್ರದವಾದ ಉಮಾಮಹೇಶ್ವರ ವ್ರತವಿಧಾನವನ್ನು ಹೇಳತೊಡಗಿದನು. ಹೇಗೆಂದರೆ:— ಆನರ್ತದೇಶದಲ್ಲಿ ಸರ್ವೋತ್ತಮವಾದ ಸತ್ಕುಲದಲ್ಲಿ ಹುಟ್ಟಿ ವೇದಶಾಸ್ತ್ರ ಪಾರಂಗತನಾಗಿ ಸದಾ ಚಾರನಿರತನಾಗಿ, ದೇವಬ್ರಾಹ್ಮಣ ಭಕ್ತನಾಗಿದ್ದ ದೇವರಥನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನಿಗೆ ಗಂಡುಮಕ್ಕಳೂ, ಹೆಣ್ಣುಮಕ್ಕಳೂ, ಉಂಟಾ ದರು. ಅವರಲ್ಲಿ ಸುಗುಣ ಸಂಪನ್ನೆಯಾಗಿ ಸದಾಚಾರ ತತ್ಪರಳಾಗಿ ಶಮದ ಮಾದಿ ಗುಣಗಳಿಂದ ಕೂಡಿ ಬಹು ಸುಂದರಿಯಾಗಿದ್ದ ಶಾರದೆ ಎಂಬ ಮಗ ಳೊಬ್ಬಳಿದ್ದಳು. ಆ ಮಗಳಿಗೆ ಹನ್ನೆರಡು ವರ್ಷ ವಯಸ್ಸಾಗಿದ್ದಿತು, ಆದರೂ ಇನ್ನೂ ಮದುವೆಯಾಗಿರಲಿಲ್ಲ, ಹೀಗಿರುವಲ್ಲಿ ಅಕಸ್ಮಾತ್ತಾಗಿ ತನ್ನ ಹೆಂಡತಿಯನ್ನು ಕಳೆದುಕೊಂಡು ಕನ್ಯಾರ್ಥಿಯಾಗಿ ದೇಶಸಂಚಾರ ಮಾಡುತ್ತಿದ್ದ ಪದ್ಮನಾಭ ನೆಂಬ ವೃದ್ಧಬ್ರಾಹ್ಮಣನೊಬ್ಬನು ದೈವಯೋಗದಿಂದ ದೇವರಥನ ಮನೆಗೆ ಬಂದು ಶಾರದೆಯನ್ನು ನೋಡಿ ಆಶ್ಚರ್ಯಪಟ್ಟು ಅವಳನ್ನು ತನಗೆ ಕೊಟ್ಟು ಮದುವೆ ಮಾಡಬೇಕೆಂದು ಕೇಳಿಕೊಂಡನು. ಆಗ ದೇವರಥನು ಪದ್ಮನಾಭನ ಕುಲಗೋತ್ರಗಳನ್ನೂ! ದೇಶಕೋಶಗಳನ್ನೂ ಆದಾಯವ್ಯಯಗಳನ್ನೂ ವಿಚಾರಿಸಿ ತಿಳಿದುಕೊಂಡು ಧನಿಕನಾಗಿ ರಾಜಪುರೋಹಿತನಾಗಿದ್ದ ಪದ್ಮನಾಭನಿಗೆ ಹೆದರಿ ತನ್ನ ಮಗಳಾದ ಶಾರದೆಯನ್ನು ಕೊಟ್ಟು ಶಾಸ್ತ್ರೋಕ್ತ ಕ್ರಮದಿಂದ ವೇದ ವಿಧಿವತ್ತಾಗಿ ಮದುವೆಯನ್ನು ಮಾಡಿದನು.

ಹೀಗೆ ವಿವಾಹವಾದ ದಿನ ಸಾಯಂಕಾಲದ ಸಂಧ್ಯಾವಂದನೆಗಾಗಿ ಪದ್ಮನಾಭನು ನದೀ ತೀರಕ್ಕೆ ಹೋಗಿ ಅಲ್ಲಿ ಸಂಧ್ಯಾವಂದನೆಯನ್ನು ತೀರಿಸಿ ಕೊಂಡು ಹಿಂದಿರುಗಿ ಮನೆಗೆ ಬರುತ್ತ ಕತ್ತಲೆಯಲ್ಲಿ ಕಾಣದೆ ದಾರಿಯಲ್ಲಿ ಮಲ ಗಿದ್ದ ಹಾವನ್ನು ತುಳಿದು ಅದರಿಂದ ಕಚ್ಚಲ್ಪಟ್ಟವನಾಗಿ ವಿಷವೇರಿ ಸತ್ತುಹೋ ದನು. ಈ ವಾರ್ತೆಯನ್ನು ಕೇಳಿ ಶಾರದೆಯ ತಂದೆತಾಯಿಗಳೂ ಬಂಧು ಬಳಗದ ವರೂ ಬಹಳವಾಗಿ ನೊಂದುಕೊಂಡು ತತ್ಕಾಲೋಚಿತವಾದ ಉತ್ತರಕ್ರಿಯಾದಿ ಗಳನ್ನು ಮಾಡಿಸಿ, ವೈಧವ್ಯವನ್ನು ಪಡೆದ ಶಾರದೆಗೆ ತಕ್ಕ ಸಮಾಧಾನಗಳನ್ನು ಹೇಳಿ, ತಂತಮ್ಮ ಗೃಹಕೃತ್ಯಗಳಲ್ಲಿ ನಿರತರಾಗಿದ್ದರು. ಬಳಿಕ ವೈಧವ್ಯ ದುಃಖ ವನ್ನು ಅನುಭವಿಸುತ್ತಿದ್ದ ಶಾರದೆಯು ನಿಯಮನಿಷ್ಠಳಾಗಿ ತವರುಮನೆಯಲ್ಲಿಯೆ ಕೆಲವುಕಾಲ ಇರುತ್ತಿದ್ದಳು. ಹೀಗಿರುವಲ್ಲಿ ಒಂದಾನೊಂದುದಿನ ನೈಧ್ರುವನೆಂಬ ವೃದ್ಧಮಹಾಋಷಿಯು ತನಗೆ ಕಣ್ಣಿಲ್ಲವಾದಕಾರಣ ಶಿಷ್ಯನ ಕೈ ಹಿಡಿದುಕೊಂಡು

ಶಾರದೆಯ ಮನೆಗೆ ಬಂದನು, ಆಗ ಮನೆಯಲ್ಲಿ ಯಾರೂ ಇರಲಿಲ್ಲ, ತಾಯಿ ತಂದೆಗಳೂ, ಅಣ್ಣತಮ್ಮಂದಿರೂ, ಆಳುಕಾಳುಗಳೂ ಅವರವರ ಕಾರ್ಯಾರ್ಥ ವಾಗಿ ಬೇರೆಕಡೆಗೆ ಹೊರಟುಹೋಗಿದ್ದರು. ಆದಕಾರಣ ಶಾರದೆಯು ಭಕ್ತಿ ಸಂಪನ್ನಳಾಗಿ ವೃದ್ಧನಾದ ನೈಧ್ರುವನನ್ನು ಪೀಠದಲ್ಲಿ ಕುಳ್ಳಿರಿಸಿ, ಭಕ್ತಿಯಿಂದ ಕೂಡಿ ಕೈ ಮುಗಿದುಕೊಂಡು ಸ್ವಾಮಿಾ! ಪೂಜ್ಯರಾದ ನಿಮಗೆ ನಮಸ್ಕಾರ ನನ್ನಿಂದ ನಿಮಗೆ ಆಗಬೇಕಾದ ಪ್ರಯೋಜನವೇನು ಅದನ್ನು ಹೇಳಿದರೆ ಶಿರಸಾ ವಹಿಸಿ ಮಾಡಿಕೊಡುತ್ತೇನೆಂದು ಹೇಳಿ, ತನ್ನ ಭಕ್ತಿಯಿಂದ ಅವರನ್ನು ಮೆಚ್ಚಿಸಿ ಮೃಷ್ಟಾನ್ನ ಭೋಜನವನ್ನು ಮಾಡಿಸಿ ಗಂಧಪುಷ್ಪ ಧೂಪದೀಪ ಪಾದಸೇವೆಗಳಿಂದ ಅವರನ್ನು ಆನಂದಗೊಳಿಸಿ ಚಾಮರವನ್ನು ಬೀಸುತ್ತ ನಿಂತುಕೊಂಡಿರಲು, ಸಂತೋಷಭರಿತನಾದ ಆ ನೈಧ್ರುವಮುನಿಯು ಶಾರದೆಯನ್ನು ಕುರಿತು ಅಮ್ಮಾ! ಮಗಳೆ ನಿನ್ನ ಸತ್ಕಾರಕ್ಕೆ ನಾನು ಮೆಚ್ಚಿದೆನು. ಈಶ್ವರನಿಗೆ ತೃಪ್ತಿಯಾಯಿತು, ದೇವತೆಗಳು ಆನಂದ ಪಟ್ಟರು, ಲೋಕವು ಪ್ರಖ್ಯಾತಿಗೆ ಬಂದಿತು. ಆದಕಾರಣ ಇಲ್ಲಿಂದ ಮುಂದೆ ನೀನು ನಿನ್ನ ಪತಿಯೊಡನೆ ಸಕಲ ಭೋಗಗಳನ್ನೂ ಅನುಭವಿಸಿ ಸದ್ಗುಣ ಸಂಪನ್ನನಾದ ಸತ್ಪುತ್ರನನ್ನು ಹಡೆದು ಸರ್ವೋತ್ಕೃಷ್ಟವಾದ ಸತ್ಕೀರ್ತಿಯನ್ನು ಪಡೆದು ದೈವಾನುಗ್ರಹದಿಂದ ಲೋಕದಲ್ಲಿ ವಿಖ್ಯಾತಳಾಗು ಎಂದು ಆಶೀರ್ವಾದ ಮಾಡಿದನು.

ಬಳಿಕ ಭಕ್ತಿ ಸಂಪನ್ನೆಯಾದ ಆ ಶಾರದೆಯು ಸ್ವಾಮಿಾ! ತಮ್ಮಂಥ ಸತ್ಪುರುಷರ ವಾಕ್ಯವು ಎಂದಿಗೂ ಸುಳ್ಳಾಗಲಾರದು. ಸತ್ಯವೇ ಆದೀತು ಆದರೆ ಕೊಯಿದು ಹಾಕಿದ ಪೈರಿಗೆ ಮಳೆಯಿಂದ ಹೇಗೆ ಪ್ರಯೋಜನವಿಲ್ಲವೊ! ನಾಯಿಗೆ ಸತ್ಕಾರವು ಹೇಗೆ ಯೋಗ್ಯವಲ್ಲವೊ, ಹಾಗೆ ನನ್ನ ದುಷ್ಕರ್ಮ ವಶದಿಂದ ನಿರ್ಭಾಗ್ಯಳಾಗಿ ವೈಧವ್ಯವನ್ನು ಅನುಭವಿಸುತ್ತಿರುವ ನನಗೆ ನಿನ್ನ ಆಶೀರ್ವಾದದಿಂದ ಪ್ರಯೋಜನವೇನು ? ಸತ್ಯವಂತನಾದ ನಿನ್ನ ವಾಕ್ಯವು ನನ್ನಲ್ಲಿ ಸಫಲವಾಗಿ ಲಭಿಸಲಿಲ್ಲವಲ್ಲ ಎಂದು ಕೇಳಲು, ಪಶ್ಚಾತ್ತಾಪಯುಕ್ತನಾದ ನೈಧ್ರುವನು ಶಾರದೆಯನ್ನು ಕುರಿತು, ಅಮ್ಮಾ ಮಗಳೇ! ನಾನು ಮೊದಲೆ ಕುರುಡ ಕಣ್ಣುಕಾಣಿಸದವನು, ಆದಕಾರಣ ನಿನ್ನ ಸ್ಥಿತಿಯನ್ನು ತಿಳಿಯದೆ ಹೀಗೆ ಆಶೀರ್ವಾದವನ್ನು ಮಾಡಿಬಿಟ್ಟೆ. ಆದರೂ ಚಿಂತೆಯಿಲ್ಲ, ನಿನ್ನಲ್ಲಿ ಈ ಆಶೀರ್ವಾದವೇ ಫಲಿಸಿ ಲೋಕೋತ್ತರವಾದ ಕೀರ್ತಿಯುಂಟಾಗುವಂತೆ ನಾನು ಮಾಡಿ ಕೊಡುವೆನು ನನ್ನ ಮಾತಿನಲ್ಲಿ ನಂಬಿಗೆಯಿಟ್ಟು ನೀನು ಉಮಾಮಹೇಶ್ವರ ವ್ರತ ವನ್ನು ಮಾಡಿದರೆ ಅದರಿಂದ ನಿನಗೆ ಸಕಲ ಶ್ರೇಯಸ್ಸೂ ಉಂಟಾದೀತೆಂದು ಹೇಳಲಾಗಿ ಅದನ್ನು ಕೇಳಿ ಆನಂದಪೂರಿತ ಹೃದಯಳಾದ ಶಾರದೆಯು ಸ್ವಾಮಿಾ ಹಾಗಾದರೆ ತಾವು ಹೇಳಿದ ಉಮಾಮಹೇಶ್ವರ ವ್ರತ ವಿಧಾನವನ್ನು ಶಾಸ್ತ್ರೋ

ಕ್ತವಾಗಿ ನನಗೆ ವಿವರಿಸಿ ಹೇಳಿದರೆ ನನಗೆ ಎಷ್ಟು ಕಷ್ಟವಾದರೂ ನಾನು ಆ ವ್ರತವನ್ನು ಆಚರಿಸಿ ಧನ್ಯಳಾಗುವೆನೆಂದು ಮತ್ತೆಮತ್ತೆ ಸಮಸ್ಕರಿಸಿ ಬೇಡಿಕೊಳ್ಳು ತ್ತಿರಲು ಅವಳ ಭಕ್ತಿಗೆ ಮೆಚ್ಚಿ ನೈಧ್ರುವನು ಹೀಗೆ ಹೇಳಿದನು,—

ಎಲೌ ಶಾರದೆ ನಿನಗೋಸ್ಕರವಾಗಿ ಸರ್ವೋತ್ಕೃಷ್ಟವಾದ ಉಮಾಮ ಹೇಶ್ವರ ವ್ರತ ವಿಧಾನವನ್ನು ಹೇಳುವೆನು ಕೇಳು, ಏಕಕಾಲದಲ್ಲಿ ಉಮಾದೇವಿ ಯೆಂಬ ಹೆಸರಿನಿಂದ ಪ್ರಖ್ಯಾತಳಾದ ಪಾರ್ವತಿಯನ್ನೂ ಮಹಾದೇವನೆಂಬ ಹೆಸ ರಿನಿಂದ ವಿಖ್ಯಾತನಾದ ಪರಮೇಶ್ವರನನ್ನು ಒಂದೇ ಪೀಠದಲ್ಲಿಟ್ಟು ಶಾಸ್ತ್ರೋಕ್ತ ವಾದ ಷೋಡಶೋಪಚಾರಗಳಿಂದ ಪೂಜಿಸತಕ್ಕುದಾದಕಾರಣ ಈ ವ್ರತಕ್ಕೆ ಉಮಾಮಹೇಶ್ವರವ್ರತವೆಂದು ಹೆಸರು ಬಂದಿತು. ಇದನ್ನು ಮಾಡಬೇಕೆಂಬ ಇಷ್ಟ ವುಳ್ಳವರು, ಚೈತ್ರಮಾಸದಲ್ಲಿ ಆಗಲಿ ! ಅಥವ ಮಾರ್ಗಶಿರ ಮಾಸದಲ್ಲಿ ಆಗಲಿ ! ಶುಕ್ಲಪಕ್ಷ ಕೃಷ್ಣಪಕ್ಷಗಳೆರಡಲ್ಲಿಯೂ ಯಾವುದಾದರೂ ಒಂದು ಪಕ್ಷದಲ್ಲಿ ಅಷ್ಟಮಿ, ಚತುರ್ದಶಿ, ಪೌರ್ಣಿಮೆಗಳಲ್ಲಿ ಯಾವುದಾದರೂ ಅನುಕೂಲವಾದ ದಿನದಲ್ಲಿ ಉಮಾಮಹೇಶ್ವರ ವ್ರತವನ್ನು ಮಾಡುತ್ತೇನೆಂದು ಮನಸ್ಸಿನಲ್ಲಿ ಸಂಕ ಲ್ಪಮಾಡಿಕೊಳ್ಳಬೇಕು, ಹಾಗೆ ಸಂಕಲ್ಪ ಮಾಡಿದ ದಿನ ಪ್ರಾತಃಕಾಲಕ್ಕೆ ನದಿಗೆ ಹೋಗಿ ಅಘಮರ್ಷಣ ಸ್ನಾನವನ್ನುಮಾಡಿ ನಿತ್ಯಕರ್ಮವನ್ನು ತೀರಿಸಿಕೊಂಡು ದೇವ ಋಷಿ ಪಿತೃತರ್ಪಣಗಳನ್ನುಮಾಡಿ ಶುಚಿರ್ಭೂತರಾಗಿ ಮನೆಗೆ ಬಂದು ಪರಿಶುದ್ಧ ವಾದ ಪ್ರದೇಶದಲ್ಲಿ ಗೋಮಯದಿಂದ ಸಾರಿಸಿ ರಂಗವಲ್ಲಿಯನ್ನು ಇಟ್ಟು ದಿವ್ಯ ಮಂಟಪವನ್ನು ಕಟ್ಟಿ, ತಳಿರುತೋರಣಗಳಿಂದ ಅದನ್ನು ಅಲಂಕರಿಸಿ, ಅಲಂಕೃತ ವಾದ ಆಮಂಟಪದ ಮಧ್ಯದಲ್ಲಿ ಪಂಚವರ್ಣದ ರಂಗವಲ್ಲಿಗಳಿಂದ ಒಳಗೆ ಬಟು ವಾಗಿಯೂ ಹೊರಗೆ ಚೌಕವಾಗಿಯೂ ಇರುವ ಪದ್ಮವನ್ನು ಬರೆದು ಅದರ ಮೇಲೆ ಅಕ್ಕಿಯ ರಾಶಿಯನ್ನು ಹಾಕಿ, ಅದರ ಮೇಲೆ ದರ್ಭೆಯಿಂದ ನಿರ್ಮಿತವಾದ ಕೂರ್ಚಿಕೆಗಳನ್ನಿಟ್ಟು ಅದರ ಮೇಲೆ ಧಾನ್ಯವನ್ನು ತುಂಬಿದ ಕಲಸದಲ್ಲಿ ಒಂದು ನಿಷ್ಕ ಪ್ರಮಾಣ ಚಿನ್ನದಿಂದ ಮಾಡಿದ ಉಮಾಮಹೇಶ್ವರ ಪ್ರತಿಮೆಗಳನ್ನಿರಿಸಿ ಅದರ ಕೆಳಗೆ ಶುದ್ಧವಾದ ವಸ್ತ್ರಗಳನ್ನು ಹಾಸಿ, ಅದರ ಮೇಲೆ ಇಟ್ಟಿರುವ ಪ್ರತಿಮೆಗಳ ಶುದ್ಧ್ಯರ್ಥವಾಗಿ ಪಂಚಾಮೃತ ಶುದ್ಧೋದಕಗಳಿಂದ ಪ್ರೋಕ್ಷಣೆ ಮಾಡಿ, ನೂರೆಂಟು ಸಾರಿ ಶಿವಪಂಚಾಕ್ಷರಿ ಮಂತ್ರದಿಂದಲೂ, ಒಂದುಬಾರಿ ರುದ್ರಾಧ್ಯಾಯದಿಂದಲೂ ಅಭಿಮಂತ್ರಿಸಿ, ತನ್ನ ಶಕ್ತ್ಯಾನುಸಾರವಾಗಿ ಅಥವ ವಿಭವಾನುಗುಣವಾಗಿ ಭಕ್ತಿಯಿಂದ ಪೂಜಿಸಬೇಕು. ಹೇಗೆಂದರೆ:—

ರೇಚಕ ಪೂರಕ ಕುಂಭಕಗಳಿಂದ ಪ್ರಾಣಾಯಾಮವನ್ನು ಮಾಡಿ ಅನೇಕ ಕೋಟಿಜನ್ಮಗಳಲ್ಲಿ ಮಾಡಿದ ಪಾಪಪರಿಹಾರಾರ್ಥವಾಗಿಯೂ, ಆಯುರಾರೋಗ್ಯ ಸೌಭಾಗ್ಯ ವಿಜಯಾರ್ಥಕ್ಕಾಗಿಯೂ ಸ್ವರ್ಗಮೋಕ್ಷಗಳಿಗಾಗಿಯೂ, ಸಾಕ್ಷಾತ್ಪ

ರಶಿವನನ್ನೂ ಪರಮೇಶ್ವರಿಯನ್ನೂ ಪೂಜಿಸುವೆನೆಂದು ಸಂಕಲ್ಪವನ್ನು ಮಾಡ ಬೇಕು. ಅನಂತರದಲ್ಲಿ ಮೂಲಮಂತ್ರಕ್ಕೆ ಉಕ್ತವಾಗಿರುವ ಅಂಗನ್ಯಾಸ ಕರ ನ್ಯಾಸಗಳನ್ನು ಮಾಡಿ ಆ ಬಳಿಕ ಪೂರ್ಣಚಂದ್ರನಿಗೆ ಸಮಾನವಾದ ಕಾಂತಿ ಯುಳ್ಳ ಸರ್ಪಭೂಷಣವಾದ ವರದಾಭಯಮುದ್ರೆಗಳನ್ನೂ ಹರಿಣ ಪರಶುಗ ಳನ್ನೂ ಧರಿಸಿದಂಥ ಕೋಟಿಸೂರ್ಯ ಪ್ರಕಾಶಮಾನನಾದ ಸುಖಸ್ವರೂಪನಾದ ಗಂಗಾತರಂಗದಿಂದ ನೆನೆದು ನಿಡಿದಾದ ಹೊಂಬಣ್ಣದ ಜಡೆಗಳಿಂದೊಪ್ಪು ತ್ತಿರುವ ಚಂದ್ರಶೇಖರನಾದ, ಸೋಮಸೂರ್ಯಾಗ್ನಿ ನೇತ್ರನಾದ ನೀಲಕಂಠ ನಾದ ಚತುರ್ಭುಜಗಳಿಂದ ಕೂಡಿ ಗಜಚರ್ಮವನ್ನು ಹೊದ್ದುಕೊಂಡಿರುವ ಪರ ಮೇಶ್ವರನನ್ನು ಹೃದಯಕಮಲ ಮಧ್ಯದಲ್ಲಿರುವ ರತ್ನಸಿಂಹಾಸನದಲ್ಲಿ ಧ್ಯಾನಿಸಿ, ಅವನ ಎಡಭಾಗದಲ್ಲಿ ದಿವ್ಯ ಶರೀರದಿಂದ ಕೂಡಿದ, ಚಂದ್ರಚೂಡೆಯಾದ, ಪಾಶಾಂಕುಶ ವರದಾಭಯ ಮುದ್ರೆಗಳನ್ನು ಧರಿಸಿರುವ ಚತುರ್ಭುಜಸಹಿತ ಳಾದ, ಬೆಟ್ಟದಾವರೆ ಅಶೋಕ ಕೆಂಡಸಂಪಗೆ ಮೊಲ್ಲೆ ಮಲ್ಲಿಗೆ ಕೇತಕಿ ಜಾಜಿ, ಮೊದಲಾದ ಸುರಭಿ ಪುಷ್ಪಗಳಿಂದ ನಿರ್ಮಿತವಾದ ದಂಡೆಯನ್ನು ಮುಡಿದಿರುವ ನವರತ್ನಗಳಿಂದ ಶೋಭಿಸುತ್ತಿರುವ ಕರ್ಣ ಕುಂಡಲ ಕಡಗ ಕಾಲುಬಳೆ ಉಂಗುರ ಒಡ್ಯಾಣ ಅಂದುಗೆಗಳ ಅಲಂಕಾರದಿಂದ ರಮ್ಯವಾದ, ದಿವ್ಯವಾದ ರತ್ನಾಹಾರವನ್ನು ಧರಿಸಿದ ಕಂಠವುಳ್ಳ ತಾವರೆಯ ಮೊಗ್ಗುಗಳಂತೆ ರಮ್ಯವಾ ಗಿಯೂ ಬಟುವಾಗಿಯೂ ಇರುವ ಕುಚಗಳುಳ್ಳ ತೊಂಡೆಹಣ್ಣಿನಂತೆ ಕೆಂಪಾಗಿ ಹೊಳೆಯುವ ಚೆಂದುಟಿಗಳಿಂದ ಕೂಡಿದ ಅಧರಕಾಂತಿಯಿಂದ ರಮ್ಯವಾಗಿ ರಾಜಿ ಸುತ್ತಿರುವ ದಂತಪಂಕ್ತಿಗಳುಳ್ಳ, ವಿಲಾಸಭರಿತವಾದ ಕಡೆಗಣ್ಣಿನ ನೋಟದಿಂ ದಲೂ, ಮುಗುಳು ನಗೆಯಿಂದಲೂ, ಮನೋಹರಳಾಗಿ ಒಪ್ಪುತ್ತಿರುವ ಪಾರ್ವತೀ ದೇವಿಯನ್ನುಸಹ ಧ್ಯಾನಮಾಡಬೇಕು. ಆಬಳಿಕ ಮೂಲಮಂತ್ರವನ್ನು ನೂರೆಂಟು ಬಾರಿಗೆ ಕಡಿಮೆಯಿಲ್ಲದಂತೆ ಅವರವರ ಶಕ್ತ್ಯಾನುಸಾರವಾಗಿ ಜಪಿಸಿ, ಸ್ವರ್ಣ ದಿಂದ ಮಾಡಿಸಿರುವ ಪ್ರತಿಮೆಗಳಲ್ಲಿ ಪಾರ್ವತಿಯನ್ನೂ ಪರಮೇಶ್ವರನನ್ನೂ ಆವಾಹಿಸುತ್ತೇನೆಂದು ಭಾವಿಸಿ ಲೋಕಗಳಿಗೆ ತಾಯಿತಂದೆಗಳಾದ ಉಮಾ ಮಹೇಶ್ವರನನ್ನು ಆವಾಹನೆ ಮಾಡಬೇಕು. ಬಳಿಕ ಮೂಲಮಂತ್ರದಿಂದ ಸಿಂಹಾ ಸನವನ್ನು ಸಮರ್ಪಣೆ ಗೈದು ಪಾದ್ಯವನ್ನು ಕೊಟ್ಟನಂತರ “ನಮಸ್ತೇ ಪಾರ್ವತೀಕಾಂತ ತ್ರೈಲೋಕ್ಯ ಜನಪೂಜಿತ | ತ್ರಿಯಂಬಕ ಮಹಾದೇವ ಗೃಹಾ ಣಾರ್ಘ್ಯಂ ಸದಾಶಿವ||” ಎಂಬ ಮಂತ್ರದಿಂದ ಪರಮೇಶ್ವರನಿಗೂ, “ನಮಸ್ತೇ ದೇವದೇವೇಶೀ | ಪ್ರಪನ್ನ ಭಯಹಾರಿಣಿ || ಅಂಬಿಕೆ ವರದೇ ದೇವೀ | ಗೃಹಾ ಣಾರ್ಘ್ಯಂ ಶಿವಪ್ರಿಯೆ ||” ಎಂಬ ಮಂತ್ರದಿಂದ ಪಾರ್ವತಿಗೂ ಸಹ ಅರ್ಘ್ಯ ವನ್ನು ಕೊಡಬೇಕು, ಹೀಗೆ ಪೂಜಿಸಿದಮೇಲೆ ಗಂಧ ಅಕ್ಷತೆ ಪತ್ರ ಪುಷ್ಪ ಧೂಪ

ದೀಪಂಗಳನ್ನು ಸಮರ್ಪಿಸಿ, ಘೃತಮಿಶ್ರವಾದ ಪರಮಾನ್ನವನ್ನು ನಿವೇದನೆ ಮಾಡಿ, ಅದರಲ್ಲಿ ಸ್ವಲ್ಪ ಭಾಗವನ್ನು ತೆಗೆದುಕೊಂಡು, ಅದರಿಂದ ನೂರೆಂಟು ಬಾರಿ ಮೂಲಮಂತ್ರ ಪುರಸ್ಸರವಾಗಿ ಅಗ್ನಿಯಲ್ಲಿ ಹೋಮವನ್ನು ಮಾಡಿ ಉಳಿದ ಹೋಮಶೇಷವನ್ನು ಉದ್ವಾಸಿಸಿ, ಪುನಃ ಧೂಪದೀಪಾದಿ ಸಮಸ್ತೋಪಚಾರ ಗಳಿಂದ ಪೂಜಿಸಿ ಅನಂತರ ಪ್ರದಕ್ಷಿಣೆ ನಮಸ್ಕಾರಗಳನ್ನೂ ಮನಸೋದ್ದಿಷ್ಟ ಪ್ರಾರ್ಥನೆಯನ್ನು ಮಾಡಿಕೊಂಡಮೇಲೆ ಪೂಜೆಯನ್ನು ಸಮಾಪ್ತಿಗೈದು ತನ್ನ ಶಕ್ತಿಗನುಸಾರವಾಗಿ ಬ್ರಾಹ್ಮಣ ದಂಪತಿಗಳಿಗೆ ಭೋಜನವನ್ನು ಮಾಡಿಸಬೇಕು, ಹೀಗೆ ಹೇಳಿದಂತೆ ಸಾಯಂಕಾಲದಲ್ಲಿ ಉಮಾಮಹೇಶ್ವರನನ್ನು ಪೂಜಿಸಿ ರಾತ್ರಿಯಲ್ಲಿ ಮೌನದಿಂದ ನೈವೇದ್ಯ ಶೇಷವನ್ನು ಭುಂಜಿಸಬೇಕು, ಹೀಗೆ ಒಂದು ವರ್ಷ ಪರ್ಯಂತರ ಉಮಾಮಹೇಶ್ವರನನ್ನು ಪೂಜಿಸಿ ವ್ರತದ ಉದ್ಯಾಪನೆಯನ್ನು ಮಾಡಿ ಆ ಪ್ರತಿಮೆಗಳಿಗೆ ರುದ್ರ ನಮಕ ಚಮಕಗಳಿಂದ ಅಭಿಷೇಕಮಾಡಿ ಆಗ ಮೋಕ್ತ ಪ್ರಕಾರದಿಂದ ಪೂಜಿಸಿ, ನೃತ್ಯಗೀತವಾದ್ಯಂಗಳಿಂದ ತೃಪ್ತಿಗೊಳಿಸಿ ರಾತ್ರಿಯಲ್ಲಿ ಜಾಗರಣೆ ಮಾಡಿ ಪ್ರಾತಃಕಾಲದಲ್ಲಿ ಪುನಃ ಪೂಜೆಯನ್ನು ಮಾಡಿ ಆ ಪ್ರತಿಮೆಗಳನ್ನು ಸದಾಚಾರಸಂಪನ್ನನಾದ ಬ್ರಾಹ್ಮಣನಿಗೆ ದಕ್ಷಿಣೆ ಸಹಿತ ಧಾರೆ ಯನ್ನೆರೆದು ಕೊಡಬೇಕು, ಬಳಿಕ ಶಾಸ್ತ್ರೋಕ್ತಮದಿಂದ ಬ್ರಾಹ್ಮಣಭೋಜ ನವನ್ನು ಮಾಡಿಸಿ, ಅಶನವಸನ ದಾನದಕ್ಷಿಣೆಗಳಿಂದ ತೃಪ್ತರಾದ ಮೇಲೆ ಗೋ ದಾನ ಭೂದಾದ ಹಿರಣ್ಯದಾನಾದಿಗಳನ್ನು ಕೊಟ್ಟು, ಅವರ ಅವರ ಅನುಜ್ಞೆಯನ್ನು ಪಡೆದು ತಾನು ತನ್ನ ನೆಂಟರಿಷ್ಟರೊಡನೆ ಕುಳಿತು, ಭೋಜನ ಮಾಡಬೇಕು, ಹೀಗೆ ಸರ್ವೋತ್ಕೃಷ್ಟವಾದ, ಸಕಲ ವ್ರತಗಳಿಗೂ ಸರ್ವೋತ್ತಮವಾದ ಮಹಾಮಹಿಮೆಯುಳ್ಳ ಭಕ್ತಮಂದಾರವಾದ ಬಹುಪುಣ್ಯಫಲದಿಂದ ಲಭಿಸತಕ್ಕು ದಾದ ಭಕ್ತಸಂತತಿಗೆ ಸುಲಭವಾದ ಸುಖಪ್ರದವಾದ ಈ ಉಮಾಮಹೇಶ್ವರ ವ್ರತವನ್ನು ಯಾರು ಮಾಡುವರೊ ಅವರು ಇಹಲೋಕದಲ್ಲಿ ಸಕಲ ಸುಖ ಭೋಗಗಳನ್ನೂ ಅನುಭವಿಸಿ ಕೀರ್ತಿವಂತರಾಗಿ ಕಡೆಗೆ ದೇಹಾಂತ್ಯದಲ್ಲಿ ತನ್ನ ಇಪ್ಪತ್ತೊಂದು ಕುಲಸಹಿತವಾಗಿ ಇಂದ್ರಾದಿ ದಿಕ್ಪಾಲಕರ ಲೋಕಗಳನ್ನು, ಪಡೆದು ಬಹುಕಾಲವಿದ್ದು ಕಡೆಗೆ ಶಿವಲೋಕವನ್ನುಸೇರಿ ಅಲ್ಲಿ ಅನುಭವಿಸಬೇಕಾದ ಭೋಗಗಳನ್ನು ಸಮಗ್ರವಾಗಿ ಅನುಭವಿಸಿದ ನಂತರ ಶಿವಸಾಯುಜ್ಯ ಪದವಿ ಯನ್ನು ಪಡೆಯುವರು. ಆದಕಾರಣ ಎಲೌ ಶಾರದೆಯೆ! ನೀನು ಭಕ್ತಿಭಾವ ದಿಂದ ಈ ವ್ರತವನ್ನು ಆಚರಿಸು! ಇದರಿಂದ ನಿನಗೆ ಸಕಲ ಶ್ರೇಯಸ್ಸುಗಳೂ ಉಂಟಾಗುವವು ಎಂದು ನೈಧೃವನು ಹೇಳಿದನು. ಅದನ್ನು ಕೇಳಿ ಸಂತೋಷ ಪಟ್ಟು ಭಕ್ತಿಭರಿತಳಾದ ಶಾರದೆಯು ನೈಧೃವನ ಉಪದೇಶವನ್ನು ಶಿರಸಾ ವಹಿಸಿ ಅಂಗೀಕರಿಸಿದಳು.

ಅಷ್ಟುಹೊತ್ತಿಗೆ ದಿನಚರ್ಯಕ್ಕಾಗಿ ಹೊರಗೆ ಹೋಗಿದ್ದ ಶಾರದೆಯ ತಂದೆ ತಾಯಿಗಳೂ, ಅಣ್ಣತಮ್ಮಂದಿರೂ ಮನೆಗೆ ಬಂದು ನೈಧ್ರುವನನ್ನು ನೋಡಿ ಸಂತೋಷಸಾಮ್ರಾಜ್ಯದಲ್ಲಿ ಮುಳುಗಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ನಮಸ್ಕಾರಮಾಡಿ, ಎಲೈ ಮಹಾನುಭಾವನೆ! ನೀನು ಭಕ್ತರನ್ನು ಉದ್ಧರಿಸಲು ಬಂದ ಭಗವಂತನು. ನಮ್ಮನ್ನು ಅನುಗ್ರಹಿಸುವುದಕ್ಕಾಗಿ ಇಲ್ಲಿಗೆ ಬಂದ ನಿನ್ನಿಂದ ನಮ್ಮ ಕುಲವು ಪವಿತ್ರವಾಯಿತು. ನಾವು ಧನ್ಯರಾದೆವು ಇನ್ನು ನಮ್ಮ ಕಷ್ಟಕಾರ್ಯಗಳು ಪರಿಹಾರವಾದುವು. ಎಲೈ ದೇವಸ್ವರೂಪನೆ! ನಮ್ಮಲ್ಲಿ ಅನುಗ್ರಹಪರನಾಗಿರು ಎಂದು ಬೇಡಿಕೊಂಡು ಶಾರದೆಯಿಂದ ಹೇಳಲ್ಪಟ್ಟ ಸಕಲ ವಿಚಾರಗಳನ್ನೂ ತಿಳಿದುಕೊಂಡು ಸಂತೋಷಭರಿತರಾಗಿ ಮರಳಿ ಆ ನೈಧ್ರುವನನ್ನು ಕುರಿತು ನಮ್ಮ ಪುಣ್ಯಪರಿಪಾಕದಿಂದ ಭಕ್ತಾನುಗ್ರಹಾರ್ಥವಾಗಿ ಇಲ್ಲಿಗೆ ಬಂದಿರುವಲ್ಲಿ ನಿನಗೆ ನಾವು ಹೇಳಬೇಕಾದುದೇನೂ ಇಲ್ಲ. ಆದರೂ ಕಿಂಚಿತ್ಲೋಕ ವ್ಯವಹಾರ ಜ್ಞಾನಕ್ಕಾಗಿ ಇವೊಂದು ಬಿನ್ನಹವುಂಟು. ಅದೇನೆಂದರೆ! ಜನ್ಮಾಂತರದಲ್ಲಿ ಆರ್ಜಿಸಿದ ಮೀರಲಾಗದ ದುಷ್ಕರ್ಮದಿಂದ ವೈಧವ್ಯವನ್ನು ಪಡೆದು ದುಃಖಪಡುತ್ತಿರುವ ಈ ಶಾರದೆಯು ಸದಾ ನಿಮ್ಮನ್ನೆ ಮರೆಹೊಕ್ಕಿರುವಳು. ಅವಳನ್ನು ಅಸಾಧಾರಣವಾದ ಈ ಭಯಂಕರದಿಂದ ಬಿಡುಗಡೆ ಮಾಡಿಸು, ನಮ್ಮ ಮನೆ ಹಿಂಭಾಗದಲ್ಲಿ ಒಂದು ಮಠವಿದೆ ಅಲ್ಲಿ ಸ್ನಾನಸಂಧ್ಯಾವಂದನೆಗೆ ಬೇಕಾದ ಅನುಕೂಲವಿದೆ. ನೀನು ಆ ಮಠದಲ್ಲಿದ್ದುಕೊಂಡಿದ್ದರೆ ನಮ್ಮ ಶಾರದೆಯು ನಿಮ್ಮ ಸೇವೆ ಸತ್ಕಾರಗಳಿಗೆ ಸಂದು ನಿಮ್ಮ ಆಜ್ಞಾನುಸಾರವಾಗಿ ಉಮಾಮಹೇಶ್ವರ ವ್ರತವನ್ನು ಆಚರಿಸುತ್ತಾಳೆ, ಆದಕಾರಣ ಎಲೈ ಷಡ್ಗುಣೈಶ್ವರ್ಯ ಸಂಪನ್ನನಾದ ಮಹಾನುಭಾವನೆ! ಈ ವ್ರತ ಸಮಾಪ್ತಿಯಾಗುವವರೆಗೂ, ನೀನು ಈ ಮಠದಲ್ಲಿದ್ದು ಕೊಂಡು ನಮ್ಮನ್ನು ಉದ್ಧರಿಸಬೇಕೆಂದು ಬೇಡಿಕೊಳ್ಳಲು, ನೈಧ್ರುವ ಮಹಾಮುನಿಯು ಅದಕ್ಕೆ ಒಪ್ಪಿ ಅಲ್ಲಿಯೆ ಇರುತ್ತಿರಲಾಗಿ ಶಾರದೆಯು ಆ ನೈಧ್ರುವನ ಆಜ್ಞಾನುಸಾರವಾಗಿ ವ್ರತವನ್ನು ಆಚರಿಸುತ್ತಿದ್ದಳೆಂದು ಸೂತಪುರಾಣಿಕನು ಶೌನಕಾದಿ ಋಷಿಗಳಿಗೆ ನಿರೂಪಿಸುತ್ತಿದ್ದನು.

ಇದು ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರನರಪತಿ ಬಿರುದೆಂತೆಂಬರಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡ ಧರಣೀ ವರಾಹ ಹನುಮದ್ಗರುಡ ಅಂಕುಶ ಕುಠಾರ ಸಿಹ್ಮ ಮೊದಲಾದ ನಾನಾ ಬಿರುದಾಂಕಿತ ಯಾದವಕುಲತಿಲಕ ಆತ್ರೇಯಸ ಗೋತ್ರ ಆಶ್ವಲಾಯನ ಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರರಾಜ

**ಒಡೆಯರ ಪೌತ್ರ ನರಸಭೂಪಾಲಕರ ಪುತ್ರ ಇಮ್ಮಡಿ ಚಾಮರಾಜ ಒಡೆಯರು ಕರ್ಣಾಟಕ ಭಾಷೆಯಿಂದ ವಿರಚಿಸಿದ ಸ್ಕಂದಪುರಾಣೋಕ್ತವಾದ ಬ್ರಹ್ಮೋತ್ತರ ಖಂಡದಲ್ಲಿ ಉಮಾಮಹೇಶ್ವರ ವ್ರತ ವಿಧಾನಮಂ ಪೇಳಿದ್ದಲ್ಲಿಗೆ,**

**೨೦ನೆಯ ಅಧ್ಯಾಯಕ್ಕೆ ಮಂಗಳಮಸ್ತು.**

---

## ಉಮಾಮಹೇಶ್ವರ ವ್ರತಮಹಿಮೆ.

ಇಪ್ಪತ್ತೊಂದನೆಯ ಅಧ್ಯಾಯ.

ಅನಂತರದಲ್ಲಿ ಸೂತಪುರಾಣಿಕನು ಶೌನಕಾದಿ ಮಹಾಮುನಿಗಳನ್ನು ಕುರಿತು ಎಲೈ ಋಷಿಗಳಿರಾ! ಇದುವರೆಗೆ ನಿಮಗೆ ಸಂತೋಷದಾಯಕವಾದ ಉಮಾಮಹೇಶ್ವರ ವ್ರತ ವಿಧಾನವನ್ನು ಚೆನ್ನಾಗಿ ವಿವರಿಸಿ ಹೇಳಿದೆನು. ಇನ್ನು ಮುಂದೆ ಆ ವ್ರತಾಚರಣೆಯಿಂದುಂಟಾಗುವ ಮಹಿಮೆಯನ್ನು ನಿದರ್ಶನಪೂರ್ವಕವಾಗಿ ಹೇಳುತ್ತಿದೇನೆ ಸಾವಧಾನ ಚಿತ್ತರಾಗಿ ಲಾಲಿಸಿ! ಇದರಿಂದ ನಿಮಗೆ ಪರಮೇಶ್ವರಾನುಗ್ರಹವುಂಟಾಗುವುದೆಂದು ತಿಳಿಯ ಹೇಳಿ ಇಂತೆಂದನು:—

ಈ ಪ್ರಕಾರದಲ್ಲಿ ಶಾರದೆಯು ನೈಧ್ರುವ ಉಪದೇಶದಂತೆ ಆತನ ಸಾನ್ನಿಧ್ಯದಲ್ಲಿಯೆ ಭಕ್ತಿಪೂರ್ವಕವಾಗಿ ಒಂದು ವರ್ಷಕಾಲ ಉಮಾಮಹೇಶ್ವರ ವ್ರತವನ್ನು ಮಾಡಿ ವರ್ಷಾಂತ್ಯದಲ್ಲಿ ತಂದೆಯಾದ ದೇವರಥನ ಮನೆಯಲ್ಲಿ ಶಾಸ್ತ್ರೋಕ್ತ ಕ್ರಮದಿಂದ ಬ್ರಾಹ್ಮಣ ಭೋಜನವನ್ನು ಸುವಾಸಿನೀ ಸಂತರ್ಪಣೆಗಳನ್ನು ಮಾಡಿ ವ್ರತೋದ್ಯಾಪನೆಯಲ್ಲಿ ಅವರೆಲ್ಲರಿಗೂ ದಾನ ದಕ್ಷಿಣೆ ತಾಂಬೂಲಗಳನ್ನು ಕೊಟ್ಟು ತೃಪ್ತಿಪಡಿಸಿ, ತನ್ನ ಸದ್ವರ್ತನೆ ಸದಾಚಾರಗಳಿಂದ ತಾಯಿ ತಂದೆಗಳನ್ನೂ ಸಂತೋಷಪಡಿಸುತ್ತ ಆ ದಿನವೆ ನಿಯಮಪುರಸ್ಸರವಾಗಿ ತನಗೆ ನೈಧ್ರುವನಿಂದ ಉಪದೇಶಿಸಲ್ಪಟ್ಟ ಮಂತ್ರವನ್ನು ಜಪಿಸುತ್ತ ಏಕಾಗ್ರಚಿತ್ತಳಾಗಿ ಸಾಯಂಕಾಲದವರೆಗೂ ಇದ್ದು ಪ್ರದೋಷ ಸಮಯದಲ್ಲಿ ಶಿವ ಪೂಜೆಯನ್ನು ನೆರವೇರಿಸಿಕೊಂಡು ಉದ್ಯಾಪನಾಂಗವಾದ ಜಾಗರಣೆಯನ್ನು ಮಾಡುತ್ತ ಅರ್ಧರಾತ್ರಿ ಕಳೆದಮೇಲೆ ಗುರುವಿನ ಸಾನ್ನಿಧ್ಯದಲ್ಲಿ ಕುಳಿತು ಭಕ್ತಿಯುಕ್ತಳಾಗಿ ಶಿವ ಪೂಜೆ ಶಿವಧ್ಯಾನ ಶಿವಮಂತ್ರ ಜಪಗಳಿಂದ ಸಂತುಷ್ಟಳಾಗಿ ಅನಂತರದಲ್ಲಿ ದೇವಿ ವಿಷಯವಾದ ಜಪ, ಪೂಜೆ, ಧ್ಯಾನ ಪಾರಾಯಣಾದಿಗಳಿಂದ ಜಗನ್ಮಾತೆಯನ್ನು ಸಂತೋಷಪಡಿಸಿದಳು. ಆಗ ಕರುಣಾಮಯಳಾದ ಜಗನ್ಮಾತೆಯಾದ ಪಾರ್ವತೀದೇವಿ ಶಾರದೆಯ ಭಕ್ತಿಗೂ, ನೈಧ್ರುವನ ಮಹಿಮೆಗೂ ಮೆಚ್ಚಿ ಪ್ರತ್ಯಕ್ಷಳಾಗಿ ತನ್ನ ನಿಜಸ್ವರೂಪದಿಂದ ಅವಳೆದುರಿಗೆ ಬಂದು ನಿಂತಳು. ಕೂಡಲೆ ನೈಧ್ರುವನಿಗೆ ಕಾಣಿಸದೆ ಇದ್ದ ಕಣ್ಣುಗಳು ಸ್ಫುಟವಾಗಿ ಕಾಣಿಸುವಂತಾದುವು ಆಗ ಶಾರ

ದೆಯು ನೈಧೃವನು ಭಕ್ತಿನಮ್ರರಾಗಿ ಸಂತೋಷದಿಂದ ದೇವಿಗೆ ನಮಸ್ಕರಿಸಲು ಪಾರ್ವತಿದೇವಿಯು ಅವರಿಬ್ಬರನ್ನೂ ಬಿಗಿಯಪ್ಪಿ ಆಲಿಂಗಿಸಿಕೊಂಡು ವಿಶ್ವಾಸ ಪೂರ್ವಕವಾದ ಮಧುರವಚನಗಳಿಂದ ಅವರನ್ನು ಸಂತೈಸಿ, ಎಲೈ ನೈಧೃವನೆ! ಎಲೌ ಶಾರದೆಯೆ! ನಿಮ್ಮಿಬ್ಬರ ಭಕ್ತಿಭಾವಕ್ಕೆ ಮೆಚ್ಚಿ ನಾನು ಪ್ರತ್ಯಕ್ಷಳಾಗಿ ರುವೆನು. ನಿಮ್ಮ ಪರಿಶುದ್ಧ ಹೃದಯವು ನನ್ನನ್ನು ಸೂರೆಗೊಂಡಿತು. ನಾನು ನಿಮ್ಮ ಆಧೀನಳಾಗಿರುವೆನು. ನಿಮ್ಮಂಥ ಭಕ್ತಿವಂತರ ಬಳಿಯಲ್ಲಲ್ಲದೆ ನನಗೆ ಬೇರೆ ಸ್ಥಳವೇ ಇಲ್ಲ. ಆದಕಾರಣ ಸದ್ಗುಣ ಸಂಪನ್ನರಾದ ನೀವಿಬ್ಬರೂ ನಿಮಗೆ ಬೇಕಾದ ವರವನ್ನು ಕೇಳಿ ಅದು ಎಂಥ ದುರ್ಲಭವಾದುದಾಗಿದ್ದರೂ ನಾನು ಸಲ್ಲಿ ಸಿಕೊಡುವೆನು ಎಂದು ಹೇಳಿದಳು. ಅದನ್ನು ಕೇಳಿ ಆನಂದಭರಿತನಾದ ನೈಧೃ ವನು ಮರಳಿ ಮಹಾದೇವಿಗೆ ನಮಸ್ಕರಿಸಿ ಇಂತೆಂದನು.

ಎಲೌ ಜಗನ್ಮಾತೆಯೆ! ನಾನು ಕುರುಡನಾದಕಾರಣ ಈ ಶಾರದೆಯು ವಿಧವೆ ಎಂಬುದನ್ನು ಕಾಣದೆ ಅವಳ ಸೇವೆಸತ್ಕಾರಗಳಿಗೆ ಮೆಚ್ಚಿ ಸಂತೋಷ ಭರಿತನಾಗಿ "ನೀನು ನಿನ್ನ ಪತಿಯೊಡನೆ ಬಹುಕಾಲ ಕ್ರೀಡಿಸಿ ಸಂತೋಷ ಸೌಭಾಗ್ಯಗಳನ್ನು ಪಡೆದು ಅನಂತರ ಸರ್ವಾಂಗ ಸುಂದರನಾಗಿ ಸದ್ಗುಣ ಸಂಪನ್ನನಾದ ಮಗನನ್ನು ಪಡೆ" ಎಂದು ಆಶೀರ್ವದಿಸಿದೆನು. ಈ ನನ್ನ ಆಶೀರ್ವಾದವು ನಿಜವಾಗುವಂತೆ ಮಾಡಿ ಈ ಶಾರದೆಗೆ ಪತಿದಾನವನ್ನು ಮಾಡು ಎಂದು ಪ್ರಾರ್ಥಿಸಿಕೊಂಡನು. ಆಗ ಜಗನ್ಮಾತೆಯಾದ ಪಾರ್ವತೀ ದೇವಿಯು ಹಸನ್ಮುಖಿಯಾಗಿ ಹುಸಿನಗೆಯನ್ನು ಬೀರುತ್ತ ಎಲೈ ನೈಧೃವನೆ! ಕೇಳು ಈ ಶಾರದೆ ಎಂಬವಳು ತನ್ನ ಪೂರ್ವಜನ್ಮದಲ್ಲಿ ದ್ರಾವಿಡದೇಶದಲ್ಲಿ ಒಬ್ಬ ಕನ್ಯೆಯಾಗಿ ಹುಟ್ಟಿ ಭಾಮಿನಿ ಎಂಬ ಹೆಸರುಳ್ಳವಳಾಗಿ ಒಬ್ಬಾನೊಬ್ಬ ಬ್ರಾಹ್ಮಣನಿಗೆ ಎರಡನೆಯ ಹೆಂಡತಿಯಾಗಿದ್ದುಕೊಂಡು ತನ್ನ ಹಾವಭಾವವಿಲಾ ಸಗಳಿಂದಲೂ, ಮಣಿಮಂತ್ರ ಔಷಧಗಳಿಂದಲೂ, ಗಂಡನನ್ನು ವಶಪಡಿಸಿ ಕೊಂಡು ಅವನು ಸದಾ ತನ್ನಲ್ಲಿಯೆ ಅನುರಕ್ತನಾಗಿರುವಂತೆ ಮಾಡಿಕೊಂಡು ಒಂದು ದಿನವಾದರೂ ಒಂದು ಕ್ಷಣವಾದರೂ ತನ್ನ ಸವತಿಯಾದ ಜ್ಯೇಷ್ಠ ಭಾರ್ಯೆಯೊಡನೆ ಸಂಭೋಗಕ್ಕೆ ಹೋಗಲು ಅವಕಾಶ ಕೊಡದಿದ್ದಕಾರಣ ಪತಿ ಸುಖವನ್ನೆ ಕಾಣದೆ ಕೊರಗುತ್ತ ಸಂತಾನ ಹೀನೆಯಾಗಿ ಹಿರಿಯ ಹೆಂಡತಿಯು ಸತ್ತು ಹೋದಳು. ಇದೂ ಅಲ್ಲದೆ ಆ ಭಾಮಿನಿಯ ನೆರೆಮನೆಯಲ್ಲಿದ್ದ ಒಬ್ಬಾ ನೊಬ್ಬ ಸುಂದರಾಂಗನಾದ ಬ್ರಾಹ್ಮಣನು ಇವಳನ್ನು ಕಂಡು ಮೋಹಿಸಿ ಕಾಮಾ ತುರನಾಗಿ ಸಂಭೋಗಕ್ಕೆ ಕರೆಯಲು ಆತನನ್ನು ತಿರಸ್ಕರಿಸಿ ಧಿಕ್ಕರಿಸಿದಕಾರಣ ಆ ಬ್ರಾಹ್ಮಣನು ಇವಳ ಚಿಂತೆಯಲ್ಲಿಯೆ ಕೊರಗಿ ಅನ್ನಾಹಾರಗಳನ್ನು ಬಿಟ್ಟು ಕೃಶನಾಗಿ ಸತ್ತುಹೋದನು. ಇವಳು ಪೂರ್ವಜನ್ಮದಲ್ಲಿ ಗಂಡನನ್ನು ತನ್ನ

ವಶಮಾಡಿಕೊಂಡು ಸವತಿಗೆ ಸಂಭೋಗ ಸುಖವೇ ಇಲ್ಲದಂತೆ ಮಾಡಿದಳಾದ ಕಾರಣ ಆ ಪಾಪಶೇಷದಿಂದ ಈ ಜನ್ಮದಲ್ಲಿ ಬಾಲ್ಯದಲ್ಲಿಯೆ ವಿಧವೆಯಾದಳು. ಲೋಕದಲ್ಲಿ ಯಾವ ಸ್ತ್ರೀಯಾದರೂ ಗಂಡಹೆಂಡಿರ ವಿಶ್ವಾಸವನ್ನು ಕೆಡಿಸಿ ಅವರನ್ನು ಅಗಲಿಸುವಳೊ? ಅಂಥವಳು ಇಪ್ಪತ್ತೊಂದು ಜನ್ಮಗಳವರೆಗೆ ಬಾಲ್ಯದಲ್ಲಿ ವೈಧವ್ಯವನ್ನು ಪಡೆಯುವಳು ಆದರೂ ಈ ಶಾರದೆಯು ಭಕ್ತಿಯಿಂದ ನನ್ನನ್ನು ಪೂಜಿಸಿದಳಾದಕಾರಣ ಇಪ್ಪತ್ತೊಂದು ಜನ್ಮದಲ್ಲಿ ಅನುಭವಿಸಬೇಕಾದ ಪಾಪವು ಈ ಜನ್ಮದಲ್ಲಿಯೆ ಪರಿಹಾರವಾಯಿತು. ಇವಳನ್ನು ಬಯಸಿ ಕಾಮಾತುರನಾಗಿ ಇವಳ ಹಾವಭಾವ ವಿಲಾಸಗಳಿಗೆ ಸೋತು ಇವಳಿಂದ ತಿರಸ್ಕರಿಸಲ್ಪಟ್ಟು ಕೃಶನಾಗಿ ಕೊರಗಿ ಸತ್ತುಹೋದ ಬ್ರಾಹ್ಮಣನೆ ಈ ಜನ್ಮದಲ್ಲಿ ಇವಳ ಗಂಡನಾಗಿದ್ದ ದ್ರವಿಡನೆಂಬ ಬ್ರಾಹ್ಮಣೋತ್ತಮನು ಈ ಜನ್ಮದಲ್ಲಿ ಪಾಂಡ್ಯದೇಶದ ಪ್ರಾಗ್ಜ್ಯೋತಿಷನೆಂಬ ಪಟ್ಟಣದಲ್ಲಿ ಬ್ರಹ್ಮವಂಶ ಪವಿತ್ರವಾದ ಸತ್ಕುಲ ಪ್ರಸೂತನಾಗಿ ಪುತ್ರಮಿತ್ರ ಕಳತ್ರಾದಿಗಳಿಂದ ಕೂಡಿ ವೇದವೇದಾಂಗ ಪಾರಂಗತನಾಗಿ ಸುಖದಿಂದ ಬಾಳುತ್ತಿರುವನು. ಇಲ್ಲಿಗೆ ಮುನ್ನೂರರವತ್ತು ಗಾವುದ ದೂರದಲ್ಲಿ ಆ ಪ್ರಾಗ್ಜ್ಯೋತಿಷ ಪಟ್ಟಣವಿದೆ ಅಲ್ಲಿರುವ ಬ್ರಾಹ್ಮಣನು ಪೂರ್ವಜನ್ಮದಲ್ಲಿ ಇವಳ ಪತಿಯಾಗಿದ್ದವನು ಅವನು ಅಲ್ಲೆ ಇದ್ದುಕೊಂಡು ಸ್ವಪ್ನಾವಸ್ಥೆಯಲ್ಲಿ ಇವಳನ್ನು ಕೂಡಿ ಸಂಭೋಗಸುಖವನ್ನು ಅನುಭವಿಸಲಿ! ಇವಳೂ ಅದರಂತೆಯೆ ತನ್ನ ತಂದೆಯಮನೆಯಲ್ಲೆ ಇದ್ದುಕೊಂಡು ಗಂಡನೊಡನೆ ಸಂಭೋಗ ಸುಖವನ್ನು ಅನುಭವಿಸುತ್ತ ಸ್ವಪ್ನಾವಸ್ಥೆಯಲ್ಲಿ ಕ್ರೀಡಿಸಲಿ ಹೀಗೆ ಸ್ವಪ್ನಾವಸ್ಥೆಯಲ್ಲಿ ಕ್ರೀಡಿಸುತ್ತಿದ್ದ ದಂಪತಿಗಳಿಗೆ ಕೆಲವು ಕಾಲದಮೇಲೆ ವೇದವೇದಾಂಗ ಪಾರಂಗತನಾದ ಉತ್ತಮಕುಮಾರನು ಹುಟ್ಟಲಿ! ಹಾಗೆ ಹುಟ್ಟಿದ ಮಗನನ್ನು ತಂದೆಯಾದವನು ಸ್ವಪ್ನಾವಸ್ಥೆಯಲ್ಲಿಯೆ! ಕಂಡು ಲಾಲಿಸಲಿ! ಈ ಪ್ರಕಾರವಾದ ವರವನ್ನು ಇವಳಿಗೆ ಅನುಗ್ರಹಿಸುವುದಕ್ಕಾಗಿ ನಾನು ಈಗ ಇಲ್ಲಿಗೆ ಬಂದೆನು ಎಂದು ಹೇಳಿ ಶಾರದೆಯನ್ನು ಕುರಿತು ಇಂತೆಂದಳು.

ಅಮ್ಮಾ! ಶಾರದೆ ನನ್ನ ಭಕ್ತಳಾದ ನಿನಗೆ ನಾನು ಒಂದು ಮಾತನ್ನು ಹೇಳುತ್ತೇನೆ ಕೇಳು. ಏನೆಂದರೆ ನೀನು ಪೂರ್ವಜನ್ಮದಲ್ಲಿ ನಿನಗೆ ಪತಿಯಾಗಿದ್ದ ಬ್ರಾಹ್ಮಣನನ್ನು ಒಂದಾನೊಂದು ಪ್ರದೇಶದಲ್ಲಿ ಸಂಧಿಸುತ್ತೀಯೆ ಆಗ ಅವನು ನಿನ್ನನ್ನು ನೋಡುತ್ತಾನೆ. ಬಳಿಕ ಸ್ವಪ್ನದಲ್ಲಿ ಅವನೊಡನೆ ಕೂಡಿ ಸಂಭೋಗಿಸುತ್ತಿದ್ದು ಒಬ್ಬ ಮಗನನ್ನು ಪಡೆ. ಆಮೇಲೆ ಪ್ರತಿದಿನವೂ ನೀವಿಬ್ಬರೂ ಕಲೆತು ಸ್ವಪ್ನಾವಸ್ಥೆಯಲ್ಲಿಯೆ ಸಂಭೋಗಿಸುತ್ತ ಪ್ರೀತಿವಿಶ್ವಾಸಗಳಿಂದ ಸರಸಸಲ್ಲಾಪಗಳನ್ನಾಡುವಿರಿ. ಹಾಗಿರುವ ಕಾಲದಲ್ಲಿ ನೀನು ನಿನ್ನ ಮಗನನ್ನು ಪತಿಯ ಸ್ವಾಧೀನಕ್ಕೆ ಕೊಟ್ಟು ನೀನೂ ಆತನ ವಶವರ್ತಿಯಾಗಿದ್ದುಕೊಂಡಿರು. ಕೆಲವು

ಕಾಲದಮೇಲೆ ನಿನ್ನ ಪತಿಯು ಮೃತನಾಗುವನು. ಆಗ ಸತಿತ್ವ ಶುದ್ಧಿಕ್ರಮ ದಿಂದ ಅಗ್ನಿಪ್ರವೇಶನವನ್ನು ಮಾಡಿ ಬಳಿಕ ನನ್ನ ಪದವಿಯನ್ನು ಪಡೆ ಅನಂತರ ದಲ್ಲಿ ನಿನ್ನ ಮಗನು ಸಕಲ ಜನಮನೋರಂಜಕ ಐಶ್ವರ್ಯ ಸೌಭಾಗ್ಯಗಳನ್ನು ಪಡೆದು ಕೀರ್ತಿವಂತನಾಗಿ ಸುಖದಿಂದ ಬಾಳುವನು. ಎಂದು ಶಾರದೆಯ ಮನೋರಥ ಸಿದ್ಧಿಯನ್ನು ಅನುಗ್ರಹಿಸಿ ಶಾರದೆಯೂ ನೈಧೃವನೂ ನೋಡು ತ್ತಿದ್ದಹಾಗೆ ಅಂತರ್ಧಾನಳಾದಳು. ಹೀಗೆ ಕರುಣಾಮಯಳಾದ ಜಗಜ್ಜನನಿ ಯಾದ ದಯಾಪರಳಾದ ಪಾರ್ವತೀದೇವಿಯಿಂದ ಅನುಗ್ರಹವನ್ನು ವರವನ್ನು ಸಂಪಾದಿಸಿದಮೇಲೆ ಶಾರದೆಯು ಸಂತೋಷಭರಿತಳಾಗಿ ಗುರುವಾದ ನೈಧೃವ ನಿಗೆ ಬಗೆಬಗೆಯ ಉಪಚಾರಗಳಿಂದ ಸತ್ಕಾರಮಾಡಿದಳು. ಶಾರದೆಯು ಸತ್ಕಾರ ಸುಖದಿಂದ ಪಾರ್ವತಿಯ ಅನುಗ್ರಹದಿಂದ ಬಂದ ಕಣ್ಣುಗಳಿಂದಲೂ ಆನಂದ ಭರಿತನಾದ ನೈಧೃವನು ಬೆಳಗಾದಮೇಲೆ ಶಾರದೆಯ ತಂದೆತಾಯಿಗಳಿಗೂ ಒಡ ಹುಟ್ಟಿದವರಿಗೂ ಪ್ರತ್ಯೇಕವಾಗಿ ಆಶೀರ್ವದಿಸಿ ಅವರ ಅನುಮತಿಯನ್ನು ಪಡೆದು ಲೋಕಸಂಚಾರಾರ್ಥವಾಗಿ ಸ್ವೇಚ್ಛೆಯಿಂದ ಹೊರಟುಹೋದನು. ಆ ಬಳಿಕ ಶಾರದೆಯು ನವಯೌವನ ಭರಿತಳಾಗಿ ದಿವ್ಯವಾದ ಸೌಂದರ್ಯದಿಂದ ಕೂಡಿ, ಪಾರ್ವತಿಯು ಕೊಟ್ಟ ವರದಂತೆ ಪ್ರತಿದಿನವೂ ರಾತ್ರಿಯಲ್ಲಿ ಸ್ವಪ್ನದಲ್ಲಿ ತನ್ನ ಗಂಡನೊಡನೆ ಕೂಡಿ ಕ್ರೀಡಿಸುತ್ತಿದ್ದು ಕೆಲವು ಕಾಲದಮೇಲೆ ಗರ್ಭವನ್ನು ಧರಿಸಿ ಬಸುರಿಯಾದಳು.

ಹೀಗೆ ಗರ್ಭಿಣಿಯಾದ ವಿಚಾರವು ಲೋಕದಲ್ಲೆಲ್ಲ ಹರಡಿ ಪಟ್ಟಣವಾಸಿಗ ಳಿಗೆ ಚೆನ್ನಾಗಿ ತಿಳಿಯಬಂದಿತು. ಆಗ ಅಲ್ಲಿನ ಪ್ರಜೆಗಳೆಲ್ಲರೂ ಒಟ್ಟಾಗಿ ಆಹಾ ! ನೋಡಿದೆಯಾ ! ಎಂಥ ಅಪಚಾರ ನಡೆಯಿತು, ಗಂಡನಿಲ್ಲದೆ ಮುಂಡೆತನವನ್ನು ಅನುಭವಿಸುತ್ತಿರುವ ವಿಧವೆಯಾದ ಶಾರದೆಯು ಗರ್ಭಿಣಿಯಾಗಿರುವುದೆಂದರೇನು! ಇವಳು ದುರಾಚಾರವುಳ್ಳವಳು, ಜಾರಿಣಿ, ಕುಲಘಾತಕಿ, ಪವಿತ್ರವಾದ ಕುಲ ಧರ್ಮವನ್ನು ಕೆಡಿಸಿ ವಂಶಕ್ಕೆ ಅಪಕೀರ್ತಿಯನ್ನು ತಂದು ಕುಲಸ್ಥರು ತಲೆಯೆತ್ತದಂ ತಾಯಿತು. ಅಯ್ಯೋ ! ದೇವರೇ ! ದುರಾಚಾರಿಣಿಯಾದ ಇವಳ ಜನ್ಮವನ್ನು ಸುಡಬಾರದೆ ? ಹೀಗೆ ಬಾಳುವುದಕ್ಕಿಂತ ಬಾವಿಯಲ್ಲಾದರೂ ಬಿದ್ದು ಪ್ರಾಣ ವನ್ನು ಕಳೆದುಕೊಂಡಿದ್ದರೆ ಏನಾಗುತ್ತಿತ್ತು. ಅಯ್ಯೋ! ದೇವರಥನ ಕೀರ್ತಿಯು ಕೆಟ್ಟಿತು. ಸಂಸಾರವು ಅಪಹಾಸ್ಯಕ್ಕೆ ಗುರಿಯಾಯಿತು. ಶಾರದೆಯು ನಿಂದೆಗೆ ಸಿಕ್ಕಿದಳು ಎಂದು ತಮ್ಮ ತಮ್ಮ ಮನಸ್ಸು ಬಂದ ಹಾಗೆ ನಾನಾ ಬಗೆಯಿಂದ ದೂಷಿಸುತ್ತಿದ್ದರು. ಬಳಿಕ ಹಾವು ಕಚ್ಚಿ ಮೃತನಾದ ಬ್ರಾಹ್ಮಣನ ದಾಯಾದಿ ಗಳೂ, ಬಂಧುಗಳೂ, ಕುಲವೃದ್ಧರೂ, ವಯೋವೃದ್ಧರೂ, ವಿದ್ವಾಂಸರೂ, ಶಾಸ್ತ್ರವಾದಿಗಳೂ, ಧರ್ಮಾಧಿಕಾರಿಗಳೂ ಒಟ್ಟಾಗಿ ಸೇರಿ ಅಪಕೀರ್ತಿಗೆ ಆಕರ

ವಾದ ಶಾರದೆಯ ಸ್ಥಿತಿಯನ್ನು ಕೇಳಿ ಕೋಪಾಕ್ರಾಂತರಾಗಿ ಸಿಟ್ಟಿನಿಂದ ದೇವ ರಥನ ಮನೆಗೆ ಬಂದು ಕುಳಿತುಕೊಂಡು ಸಭೆಯನ್ನು ಮಾಡಿ ಅಲ್ಲಿಗೆ ಶಾರದೆಯನ್ನು ಕರೆಯಿಸಿ, ನಾಚಿಕೆಯಿಂದ ತಲೆ ಬಾಗಿಸಿಕೊಂಡು ನಿಂತಿರುವ ಶಾರದೆಯನ್ನು ನೋಡಿ ಎಲೌ ಕುಲಘಾತಕಿ ನೀನೇಕೆ ಇಂಥ ನೀಚಕೃತ್ಯವನ್ನು ಮಾಡಿದೆ ಎಂದು ಕೆಲವರೂ, ಎಲೌ ದುರಾಚಾರ ಸಂಪನ್ನಳೇ ! ನೀನು ಏಕೆ ಇಂಥ ದುರ್ಮಾರ್ಗಕ್ಕೆ ಒಳಗಾದೆ ಎಂದು ಕೆಲವರೂ, ಕುಲಕ್ಕೆ ಅಪಕೀರ್ತಿಯನ್ನುತಂದ ಪಾಪಿಷ್ಠೆಯಾದ ಇವಳ ಕಿವಿ ಮೂಗುಗಳನ್ನು ಕೊಯಿಸಿ ತಲೆಯನ್ನು ಬೋಳಿಸಿ ಗ್ರಾಮದಿಂದ ಹೊರಗೆ ಹೊರಡಿಸಬೇಕೆಂದು ಕೆಲವರೂ, ನಿಂದಿಸುತ್ತಿರಲು ದುರಾತ್ಮಳಾದ ಇವಳ ಮುಖವನ್ನು ನೋಡಬಾರದೆಂದು ಮುಖವನ್ನು ತಿರಿಗಿಸಿಕೊಂಡರು ಹಲವರೂ, ತಮಗೆ ತೋರಿದ ಹಾಗೆಲ್ಲ ಮಾತನಾಡಿಕೊಂಡು ಶಾರದೆಯನ್ನು ನಿಂದಿಸುತ್ತಿದ್ದರು. ಆ ಜನರ ನಿಂದೆಯನ್ನು ಕೇಳುತ್ತಿದ್ದರೂ ಮನಸ್ಸಿನಲ್ಲಿ ಚಂಚಲವಿಲ್ಲದೆ ನಿರ್ಭಯಳಾಗಿ ಶಾರದೆಯು ಅವರ ದುರ್ವಾಕ್ಯಗಳಿಗೆ ಪ್ರತ್ಯುತ್ತರವನ್ನು ಕೊಡದೆ ಪಾರ್ವತೀದೇವಿಯನ್ನು ಸ್ಮರಿಸುತ್ತಿದ್ದಳು.

ಆಗ ಅಂತರಿಕ್ಷಮಾರ್ಗದಲ್ಲಿ ಒಂದು ಅಶರೀರ ವಾಣಿಯು ಕೇಳ ಬಂದಿತು. ಹೇಗೆಂದರೆ:—ಎಲೈ ಮೂಢಾತ್ಮರಿರಾ ! ಶಾರದೆಯು ಜಾರಿಣಿಯಲ್ಲ ಸದಾಚಾರ ಸಂಪನ್ನೆಯಾದವಳು, ಇವಳು ಪಾಪವನ್ನು ಮಾಡಿದವಳಲ್ಲ ಪುಣ್ಯಾತ್ಮಳು, ಇವಳು ಕುಲಕ್ಕೆ ಅಪಕೀರ್ತಿಯನ್ನು ತಂದವಳಲ್ಲ ಧರ್ಮನಿರತಳು, ಇವಳು ಅಪರಾಧಿಯಲ್ಲ, ನಿರಪರಾಧಿಯಾದವಳು. ಇವಳು ಜಾರಿಣಿಯಲ್ಲ, ಸರ್ವ ಸೌಭಾಗ್ಯಕಾರಿಣಿ ! ಆದಕಾರಣ ಇಂದು ಮೊದಲು ನನ್ನ ಭಕ್ತಳಾದ ಈ ಶಾರದೆಯನ್ನು ಯಾರು ಜಾರಿಣಿ ಎಂದು ಕರೆಯುವರೋ ? ಅವರ ನಾಲಗೆಯು ಸೀಳಿ ಬಿದ್ದು ಹೋಗಲಿ ! ಹಾಗೆ ಮಾಡಿದವರು ಮಹಾಪಾಪಾತ್ಮರಾಗಲಿ ! ಎಂದು ಹೇಳಿತು. ಅದನ್ನು ಕೇಳಿ ಶಾರದೆಯ ತಂದೆತಾಯಿಗಳೂ ಬಂಧು ಬಳಗದವರೂ ಸಂತೋಷಪಟ್ಟರು. ಆಗ ಆ ಸಭೆಯಲ್ಲಿದ್ದವರೆಲ್ಲರೂ ಅಶರೀರ ವಾಣಿಯ ವಾಕ್ಯವನ್ನು ಕೇಳಿ ಆಶ್ಚರ್ಯಯುಕ್ತರಾಗಿ ಭಯಪಟ್ಟು ಮುಹೂರ್ತ ಮಾತ್ರ ಮೌನದಿಂದ ಕುಳಿತಿದ್ದರು. ಅವರಲ್ಲಿ ಕೆಲವರು ನಾಸ್ತಿಕರಾದ ತುಂಟರು ಅಶರೀರವಾಕ್ಕು ನಂಬತಕ್ಕುದಲ್ಲ, ಆದರಲ್ಲಿ ಏನೋ ಮೋಸವಿರಬೇಕು, ಇವಳು ಜಾರಿಣಿಯೆ ಸರಿ ! ಗಂಡನಿಲ್ಲದವಳು ಜಾರತ್ವವನ್ನು ಮಾಡದೆ ಹೇಗೆ ಗರ್ಭಿಣಿಯಾದಳು ಎಂದು ನಿಂದಿಸಿದರು. ಕೂಡಲೆ ಅವರ ನಾಲಿಗೆಗಳು ಸೀಳಿ ಭೂಮಿಗೆ ಬೀಳಲು ಸಭಿಕರೆಲ್ಲರೂ ಆಶ್ಚರ್ಯಮಗ್ನರಾಗಿ ಶಾರದೆಯನ್ನು ಹೊಗಳಿದರು. ಪತಿವ್ರತೆಯರು ಮೆಚ್ಚಿಕೊಂಡು ಅವಳನ್ನು ಆಲಿಂಗಿಸಿಕೊಂಡರು ಸ್ತ್ರೀಯರೆಲ್ಲರೂ ಅತ್ಯಾನಂದ ಭರಿತರಾದರು. ಎಲ್ಲರಿಗೂ ಆನಂದ ಉಂಟಾ

ಯಿತು. ಆದರೂ ಆ ಸಭೆಯಲ್ಲಿದ್ದವರಲ್ಲಿ ಕೆಲವರು ಶಿವ! ಶಿವ! ಇದೇನು ಆಶ್ಚರ್ಯ ದೇವರು ಎಂದಿಗೂ ಸುಳ್ಳಾಡುವುದಿಲ್ಲ, ಅಶರೀರವಾಣಿಯು ಸತ್ಯ ವಾದುದೇ ಸರಿ! ಅಂದರೆ ಗಂಡನಿಲ್ಲದವಳಾದ ಈ ಶಾರದೆಯು ಸದಾಚಾರ ಸಂಪನ್ನೆಯಾಗಿದ್ದುಕೊಂಡು ಹೇಗೆ ಗರ್ಭವನ್ನು ಧರಿಸಿದಳು. ಎಂದು ವಿಚಾರ ಗ್ರಸ್ತರಾಗಿ ಸಂಶಯಪಡುತ್ತಿರಲು ಆ ಸಭೆಯಲ್ಲಿ ಕುಳಿತಿದ್ದ ಪ್ರಾಜ್ಞನಾದ ಒಬ್ಬಾನೊಬ್ಬ ಬ್ರಾಹ್ಮಣನು ಆ ಸಭಿಕರನ್ನು ಕುರಿತು ಇಂತೆಂದನು.

ಎಲೈ ಮಹಾಜನಗಳಿರಾ! ಕೇಳಿ ಶಾಸ್ತ್ರವನ್ನರಿಯದೆ ಸದ್ಭಕ್ತಿಯೂ ಇಲ್ಲದೆ ಪಾಮರರಂತೆ ಮನಸ್ಸಿಗೆ ಬಂದ ಯೋಚನೆಗಳನ್ನೆಲ್ಲ ಯೋಚಿಸಿಕೊಂಡು ಕೊರಗಿದರೆ ಫಲವೇನು? ನನಗೆ ತಿಳಿದ ವಿಚಾರವನ್ನು ಹೇಳಿ ನಿಮ್ಮ ಸಂಶಯ ವನ್ನು ಹೋಗಲಾಡಿಸಬೇಕೆಂದಿದೇನೆ. ಸಾವಧಾನಚಿತ್ತದಿಂದ ನನ್ನ ಬಿನ್ನಹ ವನ್ನು ಕೇಳಿ, ಆ ಒಳಿಕ ನಿಮ್ಮ ಮಾತುಗಳನ್ನು ಸ್ಥಿರಪಡಿಸಿಕೊಂಡರೆ ಯಾವ ಅಪರಾಧವೂ ಇಲ್ಲ. ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚವು ಮಾಯೆ ಯಿಂದ ಕಲ್ಪಿತವಾದುದಲ್ಲದೆ ಸತ್ಯವಾದುದಲ್ಲ. ಇಂಥ ಮಾಯಾ ನಿರ್ಮಿತವಾದ ಜಗತ್ತಿನಲ್ಲಿ ಆಗಬಾರದ ಕೆಲಸಗಳಾವುವು? ಸಂಭವವಾಗಿ ಕಂಡು ಕೇಳದೆ ಇದ್ದ ಆಶ್ಚರ್ಯಗಳೆಲ್ಲ ಈ ಮಾಯೆಯಿಂದ ಹೊಸಹೊಸದಾಗಿ ಹುಟ್ಟುತ್ತಿರುವುವು. ಇಂಥ ಮಾಯೆಯು ಈಶ್ವರಾಧೀನವಾಗಿದೆ. ಆ ಪರಮೇಶ್ವರನ ಸೂತ್ರಸಂಧಾ ನದಿಂದ ಮಾಯಾಜಾಲವೆಲ್ಲವೂ ಮಹಾವಿಲಾಸದಿಂದ ಪ್ರಕಾಶಿಸುತ್ತಿರುವುದು. ಆದಕಾರಣ ಸರ್ವ ಸ್ವತಂತ್ರನಾದ ಈಶ್ವರನ ಮಹಿಮೆಯನ್ನು ಯಾರು ಬಲ್ಲರು? ಹರಿಹರ ಬ್ರಹ್ಮಾದಿಗಳು ತಿಳಿಯಲಾಗದ ಈಶ್ವರನ ಮಹಿಮೆಯನ್ನು ಮನುಷ್ಯ ಮಾತ್ರದವರಾದ ನಾವುಗಳು ತಿಳಿಯಬಲ್ಲವೆ? ಮತ್ತೇನೆಂದರೆ ಇದಕ್ಕೆ ತಕ್ಕ ನಿದರ್ಶನಗಳನ್ನು ನಿಮಗೋಸ್ಕರವಾಗಿ ವಿವರಿಸುತ್ತಿದೇನೆ ಕೇಳಿ. ಪೂರ್ವದಲ್ಲಿ ಯೂಪಕೇತನನೆಂಬ ರಾಜರ್ಷಿಯ ವೀರ್ಯವು ನೀರಿನಲ್ಲಿ ಬಿದ್ದಿರಲು ಅದನ್ನು ಕುಡಿದು ಒಬ್ಬಾನೊಬ್ಬ ವೇಶ್ಯಾಸ್ತ್ರೀಯು ಗರ್ಭವನ್ನು ಧರಿಸಿರಲಿಲ್ಲವೆ? ವಿಭಾಂ ಡಕಮುನಿಯು ನದಿಯಲ್ಲಿ ಬಿಟ್ಟ ವೀರ್ಯವನ್ನು ಜಲಸಹಿತವಾಗಿ ಪಾನಮಾಡಿದ ಹೆಣ್ಣು ಹುಲ್ಲೆಯು ಗರ್ಭವನ್ನು ಧರಿಸಿ ಋಷ್ಯಶೃಂಗನೆಂಬ ಪುತ್ರನನ್ನು ಹಡೆಯ ಲಿಲ್ಲವೆ? ಇನ್ನೂ ರೇತಸ್ಸಂಪರ್ಕವಿಲ್ಲದೆ ಒಂದು ಹುಲ್ಲೆಯು ಸುರಾಷ್ಟ್ರನೆಂಬ ರಾಜರ್ಷಿಯ ಮೈಯನ್ನು ನೋಂಕಿದ ಮಾತ್ರದಿಂದಲೆ ಗರ್ಭವನ್ನು ಧರಿಸಿ ತಾಮಸನೆಂಬ ಪುತ್ರನನ್ನು ಪಡೆಯಲಿಲ್ಲವೆ? ತೃಣಬಿಂದುರಾಯನ ಮಗಳು ಬ್ರಹ್ಮಮಾನಸ ಪುತ್ರನಾದ ಪುಲಸ್ತ್ಯನನ್ನು ಕಣ್ಣಿನಿಂದ ನೋಡಿದ ಮಾತ್ರದಿಂ ದಲೆ ಬಸುರಿಯಾಗಿ ವಿಶ್ರವಸ್ಸೆಂಬ ಮಗನನ್ನು ಹೆರಲಿಲ್ಲವೆ? ವಸುದೇವನ ಸಂಪರ್ಕವನ್ನು ಮಾಡದೆ ರೋಹಿಣಿಯು ಗರ್ಭವನ್ನು ಧರಿಸಿ ಬಲರಾಮನನ್ನು

ಹಡೆಯಲಿಲ್ಲವೆ ? ಒಂದಾನೊಂದು ನದಿಯಲ್ಲಿ ವಿಹರಿಸುತ್ತಿದ್ದ ಮತ್ಸ್ಯದ ಹೊಟ್ಟೆಯಲ್ಲಿ ಸತ್ಯವತಿಯೆಂಬ ಕನ್ಯೆಯು ಹುಟ್ಟಲಿಲ್ಲವೆ? ಇದರಂತೆ ಮಹಿಷದ ಗರ್ಭವನ್ನು ಹೊಕ್ಕು ಮಹಿಷಾಸುರನೆಂಬ ರಕ್ಕಸನು ಜನಿಸಲಿಲ್ಲವೆ? ಮತ್ತು ಯಾದವ ಕುಲದಲ್ಲಿ ಹುಟ್ಟಿದ ಸಾಂಬನೆಂಬವನು ಮಹರ್ಷಿಗಳ ಶಾಪಕ್ಕೊಳಗಾಗಿ ಗರ್ಭವನ್ನು ಧರಿಸಿ ಕುಲಪಾತಕವಾದ ಮುಸಲ (ಒನಕೆ) ವನ್ನು ಹಡೆಯಲಿಲ್ಲವೆ? ಒಬ್ಬಾನೊಬ್ಬ ಋಷಿಯು ಮಂತ್ರಪ್ರಭಾವದಿಂದ ಯೌವನನಾಶ್ವನೆಂಬ ರಾಜನು ಗರ್ಭಿಣಿಯಾಗಲಿಲ್ಲವೆ? ದೇವಲೋಕ ವಾಸಿಗಳಾದ ದೇವತೆಗಳಿಗೂ ಸಹ ಋಷಿಗಳ ಶಾಪದಿಂದ ಬಗೆಬಗೆಯ ವಿಕಾರಗಳೂ, ಅವರ ಅನುಗ್ರಹದಿಂದ ನಾನಾವಿಧವಾದ ಅನುಕೂಲಗಳೂ ಒದಗಲಿಲ್ಲವೆ? ಆದಕಾರಣ ಪೂರ್ವಕಾಲದಲ್ಲಿ ಬಹುಮಂದಿ ಸ್ತ್ರೀಯರು ಪುರುಷಸಂಪರ್ಕವಿಲ್ಲದೆ ಗರ್ಭಿಣಿಯರಾಗಿದ್ದಾರೆ. ಅದರಂತೆ ಈ ಶಾರದೆಯೂ ಸಹ ನೈಧೃವಮುನಿಯ ಅನುಗ್ರಹದಿಂದಲೂ, ಉಮಾಮಹೇಶ್ವರವ್ರತದ ಪ್ರಭಾವದಿಂದಲೂ, ಗರ್ಭಿಣಿಯಾಗಿದ್ದಾಳೆ, ಇದು ಸತ್ಯವೇ ಹೊರತು ಎಂದಿಗೂ ಸುಳ್ಳಲ್ಲ ಎಂದು ಹೇಳಿದನು.

ಈ ಪ್ರಕಾರವಾಗಿ ಹೇಳಿದ ಬ್ರಾಹ್ಮಣನ ವಾಕ್ಯವನ್ನು ಕೇಳಿದಕೂಡಲೆ ಸಭಿಕರಿಗೆಲ್ಲ ಅಜ್ಞಾನ ನಿವೃತ್ತಿಯಾಗಿ ಸುಜ್ಞಾನವು ನೆಲೆಗೊಂಡಿತು. ಆಗ ಅವರು ತಮ್ಮಿಂದಾದ ಅಪಚಾರಕ್ಕಾಗಿ ಶಾರದೆಯ ಕ್ಷಮಾಪಣೆಯನ್ನು ಬೇಡುತ್ತ ಸಂತೋಷತತ್ಪರರಾಗಿ ಅವಳನ್ನು ಹೊಗಳಿ ತಮ್ಮನ್ನು ತಾವೇ ನಿಂದಿಸಿಕೊಂಡು ತಮಗೆ ವಿವೇಕವನ್ನು ಹೇಳಿದ ಬ್ರಾಹ್ಮಣನ ಬುದ್ಧಿ ಬಲವನ್ನು ಕೊಂಡಾಡುತ್ತ ವೃದ್ಧರಾಗಿಯೂ, ಸದಾಚಾರ ಸಂಪನ್ನೆಯರಾಗಿಯೂ ಇರುವ ಸುವಾಸಿನಿಯರನ್ನು ಶಾರದೆಯ ಬಳಿಗೆ ಕಳುಹಿಸಿ ಅವಳ ಮೂಲಕ ನಿಜಸ್ಥಿತಿಯನ್ನೂ ನಡೆದಿರತಕ್ಕ ರಹಸ್ಯ ವಿಷಯವನ್ನೂ ವಿಚಾರಿಸಿ ತಿಳಿದುಕೊಂಡು ತಮ್ಮ ಮನಸ್ಸಿನ ಸಂಶಯವನ್ನು ಬಿಟ್ಟು ಶಾರದೆಯ ಪ್ರಭಾವವನ್ನೂ ಉಮಾಮಹೇಶ್ವರರ ಮಹಿಮೆಯನ್ನೂ ನೈಧೃವನ ನಿಷ್ಠೆಯನ್ನು ನೆನೆನೆನೆದು ಆನಂದಪಡುತ್ತ ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು. ಇದಾದ ಕೆಲವು ದಿನಗಳಮೇಲೆ ಗರ್ಭಿಣಿಯಾಗಿದ್ದ ಶಾರದೆಯು ಒಂದಾನೊಂದು ಶುಭಮುಹೂರ್ತದಲ್ಲಿ ಸರ್ವ ಲಕ್ಷಣ ಸಂಪನ್ನನಾದ, ಸರ್ವಾಂಗ ಸೌಂದರ್ಯಯುಕ್ತನಾದ ಬಾಲಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ ಬುದ್ಧಿಬಲಕೋವಿದನಾದ ಒಬ್ಬ ಗಂಡು ಮಗನನ್ನು ಹಡೆದಳು. ಹೀಗೆ ಶಾರದೆಯ ಗರ್ಭದಲ್ಲಿ ಹುಟ್ಟಿದ ಈ ಮಗನು ಲೋಕದಲ್ಲಿ ಶಾರದೇಯನೆಂಬ ಹೆಸರಿನಿಂದ ಪ್ರಖ್ಯಾತನಾಗಿ ಗರ್ಭಾಷ್ಟಮದಲ್ಲಿ ಉಪನೀತನಾಗಿ ತನ್ನ ಎಂಟನೆಯ ವಯಸ್ಸಿನಲ್ಲಿ ಋಗ್ವೇದವನ್ನೂ, ಒಂಭತ್ತನೆ ವರ್ಷದಲ್ಲಿ ಸಾಮವೇದವನ್ನೂ, ಸಾಂಗವಾಗಿ ಓದಿದನು.

ಹೀಗಿರುವಲ್ಲಿ ಮಹಾಶಿವರಾತ್ರಿಯ ಉತ್ಸವಕ್ಕಾಗಿ ಗೋಕರ್ಣಕ್ಕೆ ಹೋಗ
ಬೇಕೆಂದು ಪ್ರಯಾಣ ಹೊರಡುತ್ತಿದ್ದ ಆ ದೇಶದ ಪ್ರಜೆಗಳೊಡನೆ ಶಾರದೆಯೂ
ಸಹ ತನ್ನ ಮಗನನ್ನು ಕರೆದುಕೊಂಡು ತನ್ನ ತಂದೆತಾಯಿಗಳೊಡನೆ ಹೊರಟು
ಗೋಕರ್ಣಕ್ಕೆ ಬಂದು ಶಿವದೇವಾಲಯದ ಬಳಿಯಲ್ಲಿ ನಿಂತಿದ್ದರು.

ಹೀಗೆ ಗೋಕರ್ಣ ಕ್ಷೇತ್ರದಲ್ಲಿ ಶಿವದರ್ಶನಾರ್ಥವಾಗಿ ಸಂಚರಿಸುತ್ತಿದ್ದ
ಶಾರದೆಯು ಪ್ರತಿದಿನವೂ ಸ್ವಪ್ನದಲ್ಲಿ ತನ್ನೊಡನೆ ಕ್ರೀಡಿಸುತ್ತಿದ್ದ ಪತಿಯ ನಿಜ
ರೂಪವನ್ನು ಪ್ರತ್ಯಕ್ಷವಾಗಿ ಕಂಡು ಅವನ ದರ್ಶನಮಾತ್ರದಿಂದಲೇ ಪುಳಿಕೋದ್ಗ
ತವಾದ ಶರೀರವುಳ್ಳವಳಾಗಿ ಆನಂದಾತಿಶಯದಿಂದ ಉಕ್ಕಿಬರುವ ಪ್ರೀತಿವಿಶ್ವಾಸ
ಗಳಿಂದ ಹಸನ್ಮುಖಿಯಾಗಿ ಅವನನ್ನೆ ದೃಷ್ಟಿಸಿ ನೋಡುತ್ತಿದ್ದಳು. ಅದನ್ನು ಕಂಡು
ಆ ಬ್ರಾಹ್ಮಣನು ಪ್ರತಿದಿನವೂ ರಾತ್ರಿಯ ಕಾಲದಲ್ಲಿ ಸ್ವಪ್ನಾವಸ್ಥೆಯಲ್ಲಿ ತನ್ನೊ
ಡನೆ ಸೇರಿ ಹಾವಭಾವ ವಿಲಾಸಗಳಿಂದ ಕ್ರೀಡಿಸುತ್ತಿದ್ದ ಸುಂದರೀಮಣಿಯಾದ
ಶಾರದೆಯನ್ನೂ, ಬಾಲಲೀಲೆಗಳಿಂದ ತನ್ನನ್ನು ಮೆಚ್ಚಿಸುತ್ತಿದ್ದ ಮಗನನ್ನೂ
ಪ್ರತ್ಯಕ್ಷವಾಗಿ ನೋಡಿ ಸಂತೋಷಭರಿತನಾಗಿ, ಆ ಪತ್ನಿಪುತ್ರರ ಬಳಿಗೆ ಬಂದು
ಎಲೌ ವನಿತಾರತ್ನವೆ ನಿನ್ನಿಂದ ಒಂದು ವಿಷಯವನ್ನು ಕೇಳಿ ತಿಳಿದುಕೊಳ್ಳಬೇಕಾ
ಗಿದೆ ಎಂದು ಹೇಳಿ ಅವಳನ್ನು ರಹಸ್ಯಸ್ಥಾನಕ್ಕೆ ಕರೆದುಕೊಂಡು ಹೋಗಿ, ನೀನು
ಯಾರು ? ನಿನ್ನ ಹೆಸರೇನು ? ಎಲ್ಲಿಂದ ಇಲ್ಲಿಗೆ ಬಂದೆ ? ಯಾರಿಗೆ ಮಗಳಾಗ
ಬೇಕು ? ಯಾರ ಹೆಂಡತಿ ? ನಿನ್ನ ಬಳಿಯಲ್ಲಿ ನಿಂತಿರುವ ಈಬಾಲಕನು ಯಾರು?
ಎಂದು ಕೇಳಿದನು. ಆಗ ಶಾರದೆಯು ದುಃಖಾಶ್ಚರ್ಯಗಳಿಂದ ಕೂಡಿ ಕಂಬನಿ
ಯನ್ನು ಸುರಿಸುತ್ತ ಆ ಬ್ರಾಹ್ಮಣನನ್ನು ಕುರಿತು ತಾನು ವಿಧವೆಯಾದುದು
ಮೊದಲಾಗಿ ಅದುವರೆಗೂ ನಡೆದ ಕಥೆಯನ್ನೆಲ್ಲ ಅವನಿಗೆ ಹೇಳಿದಳು. ಬಳಿಕ
ಬ್ರಾಹ್ಮಣನು ಹಸನ್ಮುಖಿಯಾಗಿ ನಗುತ್ತ ಆಶ್ಚರ್ಯಯುಕ್ತನಾಗಿ ನೀನು ಬಾಲ್ಯದಲ್ಲಿ
ವಿಧವೆಯಾದೆನೆಂದು ಹೇಳಿದೆಯಲ್ಲ. ಹಾಗಾದರೆ ಈಮಗನು ಹೇಗೆ ಹುಟ್ಟಿದನು
ಎಂದು ಪ್ರಶ್ನೆಮಾಡಿದನು. ಅದನ್ನು ಕೇಳಿ ಶಾರದೆಯು ನಾಚಿಕೆಯಿಂದ ಕ್ಷಣಕಾಲ
ತಲೆಯನ್ನು ಬಗ್ಗಿಸಿಕೊಂಡು ಆಮೇಲೆ ಧೈರ್ಯವನ್ನು ತಂದುಕೊಂಡು ಕೇಳೈ
ಬ್ರಾಹ್ಮಣೋತ್ತಮನೆ ! ಇವನು ನನ್ನ ಮಗನು, ಇವನಿಗೆ ಶಾರದೇಯನೆಂದು
ಹೆಸರು, ಇವನು ಸಕಲ ವಿದ್ಯಾಪಾರಂಗತನಾಗಿರುವನು, ನನ್ನ ಹೆಸರು ಶಾರದೆ
ನಾನು ದೇವರಥನ ಮಗಳು, ನಮ್ಮ ದೇಶದಿಂದ ಹೊರಟು ಶಿವರಾತ್ರಿಯ
ಉತ್ಸವವನ್ನು ನೋಡುವದಕ್ಕಾಗಿ ಇಲ್ಲಿಗೆ ಬಂದೆನು. ಉಳಿದ ವಿಷಯಗಳನ್ನು
ನಾನು ಹೇಳಬೇಕಾಗಿಲ್ಲ, ನನ್ನನ್ನು ಪರಿಹಾಸ್ಯಮಾಡುವ ತೆರದಿಂದ ಮಾತಾಡ
ಬೇಡ ನಾನು ನಿನ್ನನ್ನು ಚೆನ್ನಾಗಿ ಬಲ್ಲೆ ನೀನೂ ನನ್ನನ್ನು ಚೆನ್ನಾಗಿ ಬಲ್ಲೆ ಇದಕ್ಕೆ
ಸೂರ್ಯಚಂದ್ರರ ಹಾಗಿರುವ ನಿನ್ನ ಮನಸ್ಸೇ ಸಾಕ್ಷಿ ನನ್ನ ಹೃದಯವೆ ಸಂಬಂಧ

ಇನ್ನು ಹೇಳತಕ್ಕದ್ದೇನಿದೆ ಎಂದು ನುಡಿದು ತಾನು ಹುಟ್ಟಿದುದು ಮೊದಲು ಕಡೆಯುವರೆಗೂ ನಡೆದ ತನ್ನ ವೃತ್ತಾಂತವನ್ನು ಹೇಳಿ ಉಮಾಮಹೇಶ್ವರ ವ್ರತ ಪ್ರಭಾವದಿಂದ ಹುಟ್ಟಿದ ಮಗನೆ ! ಇವನು ನೀನು ನನ್ನೊಡನೆ ಸ್ವಪ್ನಾವಸ್ಥೆಯಲ್ಲಿ ಕ್ರೀಡಿಸಿದುದರಿಂದ ಇವನು ಹುಟ್ಟಿದನು. ಈಗ ಪ್ರತ್ಯಕ್ಷವಾಗಿ ನಿನ್ನನ್ನು ಕಂಡೆನಾದ ಕಾರಣ ಈ ಮಗನನ್ನು ನಿನಗೆ ಒಪ್ಪಿಸಿರುವೆನೆಂದು ಶಾರದೇಯನನ್ನು ಆ ಬ್ರಾಹ್ಮಣನ ವಶಕ್ಕೆ ಒಪ್ಪಿಸಿದಳು. ಬಳಿಕ ಆ ಬ್ರಾಹ್ಮಣನು ಸಂತೋಷಯುಕ್ತನಾಗಿ ಶಿವರಾತ್ರಿಯ ಉತ್ಸವವನ್ನು ನೋಡಿಕೊಂಡು ಉಮಾಮಹೇಶ್ವರ ಪ್ರಸಾದವನ್ನು ಸ್ವೀಕರಿಸಿ ಶಾರದೆಯ ತಂದೆತಾಯಿಗಳ ಸಮ್ಮತಿಯಂತೆ ಅವಳನ್ನೂ ಅವಳ ಮಗನಾದ ಶಾರದೇಯನನ್ನೂ ಕರೆದುಕೊಂಡು ತನ್ನ ಊರಿಗೆ ಬಂದನು, ಹೀಗೆ ಕೆಲವು ಕಾಲ ಶಾರದೆಯು ಅವಳ ಗಂಡನು ಸುಖವಾಗಿದ್ದು ಕಾಲವಶದಿಂದ ಗಂಡನು ಸತ್ತುಹೋದಕಾರಣ ಶಾರದೆಯು ನಿಯಮನಿಷ್ಠೆಯಾಗಿ ಅಗ್ನಿಪ್ರವೇಶ ಮಾಡಿದಳು. ಬಳಿಕ ಅವರಿಬ್ಬರಿಗೂ ಕೈಲಾಸದಿಂದ ಬಂದ ವಿಮಾನವು ಕಾಣಿಸಿತು. ಅವರು ಅದರಲ್ಲಿ ದೇವಯೋಗ್ಯವಾದ ವೈಭವದಿಂದ ಕುಳಿತು ಸರ್ವರೂ ನೋಡುತ್ತಿರುವಲ್ಲಿ ಕೈಲಾಸವನ್ನು ಸೇರಿದರು. ಆದಕಾರಣ ಸರ್ವ ಪಾಪ ಪರಿಹಾರಕವಾಗಿ ಬಹು ಶ್ರೇಷ್ಠವಾಗಿರುವ ಈ ಕಥೆಯು ಕೇಳಿದವರಿಗೂ, ಹೇಳಿದವರಿಗೂ, ಬರೆದವರಿಗೂ, ಓದಿದವರಿಗೂ, ಭಕ್ತಿಯಿಂದ ಪೂಜಿಸಿದವರಿಗೂ ಮುಕ್ತಿಯನ್ನು ಕೊಡುವಂಥಾದ್ದು ಇದನ್ನು ಆದರದಿಂದ ಕೇಳಿ ಉಮಾಮಹೇಶ್ವರನನ್ನು ಮನಸ್ಸಿನಲ್ಲಿಯಾದರೂ ಧ್ಯಾನ ಮಾಡುತ್ತ ಈ ಉಮಾಮಹೇಶ್ವರ ಪ್ರಹಮಹಿಮೆಯನ್ನು ಪಾರಾಯಣ ಮಾಡತಕ್ಕವರು ಸಕಲ ಭೋಗಗಳನ್ನೂ ಅನುಭವಿಸಿ, ಕಡೆಗೆ ಶಿವಸಾಯುಜ್ಯವನ್ನು ಪಡೆಯುವರೆಂದು ಸೂತಪುರಾಣಿಕನು ಶೌನಕಾದಿ ಮಹರ್ಷಿಗಳಿಗೆ ನಿರೂಪಿಸಿದನು.

ಇದು ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರ ನರಪತಿ ಬಿರುದೆಂತೆಂಬರಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡಾದಿ ನಾನಾ ಬಿರುದಾಂಕಿತ ಯಾದವಕುಲತಿಲಕ ಆತ್ರೇಯಸಗೋತ್ರ ಅಶ್ವಲಾಯನ ಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರ ರಾಜ ಒಡೆಯರ ಪೌತ್ರ ನರಸಭೂಪಾಲಕರ ಪುತ್ರ ಚಾಮರಾಜ ಒಡೆಯರವರು ಕರ್ಣಾಟಕ ಭಾಷೆಯಲ್ಲಿ ವಿರಚಿಸಿದ ಸ್ಕಂದಪುರಾಣೋಕ್ತ ಬ್ರಹ್ಮೋತ್ತರ ಖಂಡದಲ್ಲಿ ಉಮಾಮಹೇಶ್ವರ ವ್ರತ ಪ್ರಭಾವದಿಂದ ಶಾರದೆಗೆ ಪಾರ್ವತಿ ಪ್ರಸಾದದಿಂದ ವೈಧವ್ಯ ವಿಮೋಚನೆಯಾಗಿ ಸ್ವಪ್ನಾವಸ್ಥೆಯಲ್ಲಿ ಪತಿಯೊಡನೆ ಸೌಖ್ಯವನ್ನನುಭವಿಸಿ ಪುತ್ರನಂ ಪಡೆದು ಅಂತ್ಯದಲ್ಲಿ ಪತಿಸಹಿತವಾಗಿ ಶಿವಸಾಯುಜ್ಯವನ್ನೈದಿದಳೆಂಬಿಲ್ಲಿಗೆ ೨೧ನೆಯ ಅಧ್ಯಾಯಕ್ಕೆ ಮಂಗಳಮಸ್ತು.

# ಪುರಾಣ ಶ್ರವಣ ಮಹಾತ್ಮೆ.

## ಇಪ್ಪತ್ತೆರಡನೆಯ ಅಧ್ಯಾಯ.

ಈ ಪ್ರಕಾರವಾಗಿ ಹಿಂದೆ ಹೇಳಿದ ಇಪ್ಪತ್ತೊಂದು ಅಧ್ಯಾಯಗಳಿಂದ ಕೂಡಿ ಶಿವರಹಸ್ಯಾರ್ಥಪ್ರದವಾದ ಬ್ರಹ್ಮೋತ್ತರಖಂಡದ ಸಾರವನ್ನು ಕಥಾರೂಪದಿಂದ ಶಿಷ್ಯಮಂಡಳಿಗೆ ಪಾನಮಾಡಿಸಿ ತಾನೂ ಪುಣ್ಯಭಾಗಿಯಾಗಿ ಶಿವಕಥಾ ಶ್ರವಣದಿಂದ ಪವಿತ್ರರಾದ ಶೌನಕಾದಿ ಮಹಾಮುನಿಗಳನ್ನು ಕುರಿತು ಆಚಾರ್ಯನಾದ ಸೂತಪುರಾಣಿಕನು ಮರಳಿ ಶೌನಕಾದಿಗಳನ್ನು ಎಚ್ಚರಿಸಿ ಪುರಾಣಶ್ರವಣ ಮಹಾತ್ಮ್ಯೆಯನ್ನು ನಿರೂಪಿಸತೊಡಗಿದನು ಹೇಗೆಂದರೆ:—

ಎಲೈ ಋಷಿಗಳಿರಾ! ಶರೀರಧಾರಿಗಳಾದ ದೇವತೆಗಳಿಗೂ ಮನುಷ್ಯರಿಗೂ, ಬಂಧರೂಪವಾಗಿರುವ ಸಂಸಾರ ಸ್ರೃಂಖಲೆಯನ್ನು ಸುಲಭೋಪಾಯದಿಂದ ಬಿಡಿಸಿ ಮುಕ್ತಿಯನ್ನು ಕೊಡುವಂಥ ಬಹು ಪವಿತ್ರವಾದ ಕೆಲವು ಧರ್ಮನಳನ್ನು ನಿಮಗೋಸ್ಕರವಾಗಿ ಹೇಳುತ್ತಿದ್ದೇನೆ ಕೇಳಿ. ಈ ಪ್ರಪಂಚದಲ್ಲಿ ವೇದಾಧಿಕಾರ ಸಂಪನ್ನರಾದರೂ ವೇದಾಧಮರಾಗಿರುವ ಬ್ರಾಹ್ಮಣರಿಗೂ ವೇಧಾಧಿಕಾರಿಗಳಲ್ಲದ ಸ್ತ್ರೀ ಶೂದ್ರ ಮೊದಲಾದವರಿಗೂ, ವೇದಾರ್ಥವನ್ನು ತಿಳಿಯದಿರುವ ದ್ವಿಜವರ್ಗದವರಿಗೂ ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣೋತ್ತಮರಿಗೆ ಸಾಧಾರಣವಾಗಿ ಸುಲಭೋಪಾಯದಿಂದ ಮುಕ್ತಿಯನ್ನು ಕೊಡುವಂಥ ಬಹು ಶ್ರೇಷ್ಠವಾದ ಧರ್ಮವು ಯಾವುದೆಂದರೆ ಶಿವಕಥಾಶ್ರವಣವಲ್ಲದೆ ಮತ್ತೊಂದಿಲ್ಲ. ಈ ಧರ್ಮವು ದೇವತೆಗಳಿಂದಲೂ, ಋಷಿಗಳಿಂದಲೂ, ಮುಮುಕ್ಷುಜನರಿಂದಲೂ ಸದಾ ಸೇವಿಸಲ್ಪಡುತ್ತಿದೆ. ಕಗ್ಗತ್ತಲೆಯಲ್ಲಿ ಕಾಣಿಸದೆ ಇರುವ ವಸ್ತುವನ್ನು ದೀಪವು ಹೇಗೆ ತೋರಿಸುವುದೋ ಹಾಗೆ ಈ ಪುರಾಣಶ್ರವಣವು ಅಜ್ಞಾನವೆಂಬ ಅಂಧಕಾರವನ್ನು ಹೋಗಲಾಡಿಸಿ ಸುಜ್ಞಾನವೆಂಬ ವಿವೇಕವನ್ನು ಹೆಚ್ಚಿಸುವುದು. ನಿಯತವಾದ ಬುದ್ಧಿಯನ್ನು ನಿರ್ಮಲವಾಗಿಟ್ಟು ಪ್ರಕಾಶಪಡಿಸುವುದು. ಭವರೋಗದಿಂದ ಪೀಡಿಸಲ್ಪಟ್ಟವರಿಗೆ ದಿವ್ಯೌಷಧ ರೂಪವಾಗಿರುವುದು. ಮಹಾಪಾತಕಗಳೆಂಬ ಪರ್ವತಗಳಿಗೆ ವಜ್ರಾಯುಧದೋಪಾದಿಯಲ್ಲಿ ಬಹು ಭಯಂಕರವಾಗಿರುವುದು. ಆದಕಾರಣ ಹೀಗೆ ಪರಮ ಪವಿತ್ರವಾದ ಈ ಶಿವಕಥಾ ಶ್ರವಣವನ್ನು ಯಾರು ಮಾಡುತ್ತಿರುವರೊ! ಅವರು ರುದ್ರರೂಪದಿಂದ ಅವತರಿಸಿದವರಲ್ಲದೆ ಮನುಷ್ಯಮಾತ್ರದವರಲ್ಲ. ಅಂಥವರ ಚರಣರೇಣುಗಳೆಂಬ ಪಾದಧೂಳಿಯಲ್ಲಿ ಸಕಲ ತೀರ್ಥಗಳು ಇರುತ್ತಿರುವುವು. ಇದರಲ್ಲಿ ಲೇಶಮಾತ್ರವೂ ಸಂಶಯವಿಲ್ಲ. ಆದಕಾರಣ ಲೋಕದಲ್ಲಿ ಶ್ರೇಯಸ್ಸನ್ನು ಬಯ

ಸತಕ್ಕವರೆಲ್ಲರು ಅನುದಿನವೂ ಶಿವಕಥಾ ಶ್ರವಣವನ್ನು ಮಾಡಬೇಕು. ಅಷ್ಟಕ್ಕೆ ಶಕ್ತಿಯಿಲ್ಲವಾದರೆ ದಿನಕ್ಕೆ ಎರಡು ಘಳಿಗೆ ಹೊತ್ತಾದರೂ ಪುರಾಣವನ್ನು ಓದ ಬೇಕು. ಅದಕ್ಕೂ ಅಶಕ್ತನಾದರೆ ಪುಣ್ಯಕಾಲದಲ್ಲಿಯೂ, ಪುಣ್ಯದಿನಗಳಲ್ಲಿಯೂ, ಪುಣ್ಯಮಾಸಗಳಲ್ಲಿಯೂ, ಪುಣ್ಯಕ್ಷೇತ್ರದೆಡೆಗಳಲ್ಲಿಯೂ, ಪುಣ್ಯತೀರ್ಥಗಳಲ್ಲಿಯೂ, ಪುಣ್ಯಕರವಾದ ಗೃಹಾಲಯಗಳಲ್ಲಿಯೂ, ಒಂದು ಬಾರಿಯಾದರೂ ಪುರಾಣ ವನ್ನು ಪಠಿಸಿ ಶ್ರವಣಮಾಡಬೇಕು. ಹೀಗೆ ಮಾಡಿದರೆ ಸಕಲ ತೀರ್ಥಗಳಲ್ಲಿ ಸ್ನಾನಮಾಡಿಧ ಫಲವುಂಟಾಗುವುದು. ಸಕಲ ವಿಧವಾದ ದಾನಗಳನ್ನೂ ಮಾಡಿದ ಫಲವು ಲಭಿಸುವುದು. ಈ ಅರ್ಥದಲ್ಲಿ ಲೇಶಮಾತ್ರವಾದರೂ ಸಂಶ ಯವಿಲ್ಲ. ಸೃಷ್ಟಿಕರ್ತನಾದ ಬ್ರಹ್ಮನು ಈ ಕಲಿಯುಗದ ಮನುಷ್ಯರು ತಮಗೆ ಹಿತಕರವಾದ ಸನ್ಮಾರ್ಗವನ್ನು ಬಿಟ್ಟು ದುರಾಚಾರ ತತ್ಪರರಾಗಿ ದುಷ್ಕರ್ಮಗ ಳನ್ನೆ ಮಾಡುತ್ತ ದುರ್ಬುದ್ಧಿಗೆ ಒಳಗಾಗಿ ಅನೇಕ ರೋಗಗಳಿಂದ ನರಳುತ್ತ ಅಲ್ಪಾಯುಗಳಾಗಿ ಹುಟ್ಟುವರೆಂದು ತಿಳಿದು ಅವರ ಹಿತ್ಕಾಗಿ ಲೋಕೋಪ ಕಾರ ಬುದ್ಧಿಯಿಂದ ಪುರಾಣವೆಂಬ ಅಮೃತವನ್ನು ನಿರ್ಮಿಸಿದನು. ಲೋಕದಲ್ಲಿ ಅಮೃತಪಾನವನ್ನು ಮಾಡಿದವನು ಮಾತ್ರ ಜರಾಮರಣಗಳಿಲ್ಲದವನಾಗುವನು ಆದರೆ ಈ ಪುರಾಣವೆಂಬ ಅಮೃತವನ್ನು ಶ್ರವಣ ಮುಖಗಳಿಂದ ಪಾನಮಾಡಿದ ವನು ತಾನೂ ಅಲ್ಲದೆ ತನ್ನ ಇಪ್ಪತ್ತೊಂದು ತಲೆಸಹಿತ ಜರಾಮರಣ ರಹಿತನಾ ಗುವನು. ಇಂಥ ಪುರಾಣವನ್ನು ಓದಿಹೇಳುವ ಪುರಾಣಿಕನು ಬಾಲಕನಾದರೂ ಪ್ರಾಯದವನಾದರೂ, ವೃದ್ಧನಾದರೂ, ಸುಕೃತಿಯಾದರೂ, ದುಷ್ಕೃತಿಯಾ ದರೂ, ದರಿದ್ರನಾದರೂ, ದುಷ್ಟನಾದರೂ, ದುರಾಚಾರಿಯಾದರೂ ನಮಸ್ಕಾ ರಕ್ಕೆ ಯೋಗ್ಯನು. ವಯೋವೃದ್ಧರಿಗಿಂತಲೂ, ಕುಲಶ್ರೇಷ್ಠರಿಗಿಂತಲೂ, ಪುರಾ ಣಿಕನೇ ಪರಮಪವಿತ್ರವಾದವನು, ಸಭಾಪೂಜ್ಯನು. ಆದಕಾರಣ ಪುರಾಣಿಕ ನಲ್ಲಿ ದೂಷಣೆ, ದುರ್ಬುದ್ಧಿ, ದುಶ್ಚೇಷ್ಟೆಗಳನ್ನು ಎಂದಿಗೂ ಮಾಡಬಾರದು. ಪುರಾಣ ಹೇಳತಕ್ಕವನು ಶಮಾದಿಗುಣಸಹಿತನಾಗಿ ಮದಮಾತ್ಸರ್ಯಗಳಿಲ್ಲದೆ ನಿರ್ಮಲವಾದ ಮನಸ್ಸುಳ್ಳವನಾಗಿ ತನ್ನ ಇಷ್ಟ ದೇವತೆಯನ್ನು ಭಜಿಸಿ ಆರಾಧಿ ಸುತ್ತ ಬ್ರಾಹ್ಮಣರ ಸಭೆಯಲ್ಲಾಗಲಿ, ಪುಣ್ಯಕ್ಷೇತ್ರಗಳಲ್ಲಿಯಾಗಲಿ, ನದೀತೀರ ದಲ್ಲಾಗಲಿ ಅಥವ ದೇವಾಲಯದಲ್ಲಾಗಲಿ, ಕುಳಿತು ಪುರಾಣವನ್ನು ಶ್ರವಣಮಾ ಡಿಸಬೇಕು. ಹಾಗೆ ಪುರಾಣ ಹೇಳುತ್ತಿರುವಾಗ ಪುರಾಣಿಕನಾದವನು ಯಾರಿಗೂ ಎಂದಿಗೂ ನಮಸ್ಕಾರ ಮಾಡಬಾರದು. ಧೂರ್ತರಾದವರ ಬಳಿಯಲ್ಲಿ ದುರಾ ಚಾರಿಗಳಿರುವ ಕಡೆಯಲ್ಲಿ ದುರಾಕ್ಷೇಪಣೆ ಮಾಡುವವರ ಎದುರಿನಲ್ಲಿ ಕಪಟಿಗರ ಹತ್ತಿರ ನೀಚಜಾತಿಯವರಿರುವ ಕಡೆಯಲ್ಲಿ, ಜೂಜುಗಾರರ ನೆರೆಯಲ್ಲಿ ಅಪವಿತ್ರ ವಾದ ಸ್ಥಳದಲ್ಲಿ ಎಂದಿಗೂ ಪುರಾಣವನ್ನು ಹೇಳಬಾರದು. ಪುರಾಣಿಕನನ್ನು

ಫಲ ಪುಷ್ಪ ತಾಂಬೂಲಾದಿಗಳಿಂದ ಸತ್ಕರಿಸಿ ಆ ಬಳಿಕ ಕಥಾಶ್ರವಣಮಾಡುವ ಪುಣ್ಯಾತ್ಮರಿಗೆ ಎಂದಿಗೂ ದರಿದ್ರವಿಲ್ಲದಂತಾಗುವುದು.

ಇನ್ನು ಪುರಾಣಶ್ರವಣ ವಿಧಾನವನ್ನು ಹೇಳುವೆನು ಕೇಳಿ, ಪುರಾಣಶ್ರವಣ ಮಾಡುತ್ತ ಕುಳಿತಿದ್ದು ಅನ್ಯಕಾರ್ಯವ್ಯಾಸಂಗವನ್ನು ನೆನೆದು ಅರ್ಧಾಂತದಲ್ಲಿ ಪುರಾಣವನ್ನು ಬಿಟ್ಟು ಹೋಗುವವರಿಗೆ ಭೋಗಕಾಲದಲ್ಲಿ ಸತಿ ಸುತ ಧನ ಕನಕಾದಿಗಳೂ ಸಂಪತ್ತು ಸೌಭಾಗ್ಯಗಳೂ ನಷ್ಟವಾಗುವವು. ತಲೆಗೆ ಸಾಗುಸುತ್ತಿಕೊಂಡು ಪುರಾಣಶ್ರವಣವನ್ನು ಕೇಳಿದವರು ಕೊಕ್ಕರೆಯಾಗಿ ಹುಟ್ಟುವರು. ತಾಂಬೂಲವನ್ನು ಸವಿಯುತ್ತ ಪುರಾಶ್ರವಣ ಮಾಡಿದವನು ನರಕದಲ್ಲಿದ್ದು ನಾಯ ಅಮೇಧ್ಯವನ್ನು ಸವಿಯುವರು. ಡಂಭಯುಕ್ತರಾಗಿ ಉನ್ನತಾಸನದಲ್ಲಿ ಕೂತುಕೊಂಡು ಪುರಾಣವನ್ನು ಕೇಳಿದವರು ನರಕವಾಸಿಗಳಾಗಿ ನಾನಾ ಕಷ್ಟಗಳನ್ನು ಅನುಭವಿಸಿ ಕಡೆಗೆ ಕಾಗೆಗಳಾಗಿ ಹುಟ್ಟುವರು. ವೀರಾಸನದಲ್ಲಿಯೂ ಶ್ರೇಷ್ಠಾಸನಗಳಲ್ಲಿಯೂ, ಕುಳಿತು ಪುರಾಣಶ್ರವಣ ಮಾಡಿದವರು ಅರಣ್ಯದಲ್ಲಿ ಅಗಾಧವಾಗಿ ಬೆಳೆಯುವ ಮತ್ತಿಮರಗಳಾಗಿ ಹುಟ್ಟುವರು. ಪುರಾಣಿಕನನ್ನು ಕಂಡರೂ ಅವನಿಗೆ ಭಕ್ತಿಯಿಂದ ನಮಸ್ಕಾರ ಮಾಡದೆ ಪುರಾಣವನ್ನು ಕೇಳಿದವರು ವಿಷವೃಕ್ಷಗಳಾಗಿ ಹುಟ್ಟುವರು. ಮಲಗಿಕೊಂಡು ಪುರಾಣಶ್ರವಣ ಮಾಡಿದವರು ಮಹಾಲಸ್ಯರೂಪವಾದ ಹೆಬ್ಬಾವಾಗಿ ಹುಟ್ಟುವರು. ಪುರಾಣಿಕನೊಡನೆ ಏಕಾಸನದಲ್ಲಿ ಕುಳಿತುಕೊಂಡು ಪುರಾಣವನ್ನು ಕೇಳಿದವರು ಗುರುತಲ್ಪಗಮನ ಮಾಡಿದ ಪಾಪಕ್ಕೆ ಗುರಿಯಾಗುವರು. ಪುರಾಣಪುಣ್ಯಕಥೆಗಳನ್ನು ದೂಷಿಸಿ ನಿಂದಿಸತಕ್ಕವರು ನೂರುಜನ್ಮಗಳವರೆಗೆ ನಾಯಿಯಾಗಿ ಹುಟ್ಟುವರು. ಪುರಾಣ ನಡೆಯುತ್ತಿರುವಾಗ ಶ್ರವಣ ಮಧ್ಯದಲ್ಲಿ ದುರಾಕ್ಷೇಪಣೆ ಮಾಡಿ ಕಥೆಗೆ ವಿಘ್ನವನ್ನುಂಟು ಮಾಡಿದವರು, ನೂರು ಜನ್ಮಗಳವರೆಗೆ ಕತ್ತೆಯ ಜನ್ಮವನ್ನು ವಹಿಸಿ ಅನಂತರ ತೊಣ್ಣೆಕೇತನಾಗಿ ಹುಟ್ಟುವರು. ಪುರಾಣ ಶ್ರವಣಮಾಡುವುದದಕ್ಕೆ ಅನುಕೂಲವಿದ್ದು ಅವಕಾಶವುಂಟಾಗಿದ್ದರೂ, ಒಂದು ಸಾರಿಯಾದರೂ ಪುರಾಣವನ್ನು ಕೇಳದೆ ಇರುವವರು, ನರಕವಾಸಿಗಳಾಗಿ ನಾನಾಕಷ್ಟಗಳನ್ನು ಅನುಭವಿಸಿ ಅನಂತರದಲ್ಲಿ ಅರಣ್ಯವರಾಹವೆಂಬ ಕಾಡುಹಂದಿಯಾಗಿ ಹುಟ್ಟುವರು. ತಾವು ಪುರಾಣವನ್ನು ಕೇಳದಿದ್ದರೂ ಪುರಾಣವನ್ನು ಕೇಳಿ ಬಂದವರನ್ನು ಭಕ್ತಿಯಿಂದ ಹೊಗಳಿ ಸ್ತುತಿಸಿದವರಿಗೆ ಸಂಪೂರ್ಣವಾದ ಪುರಾಣ ಶ್ರವಣ ಫಲವು ಲಭಿಸುವುದು. ಪುರಾಣ ಪಠನಕ್ಕಾಗಲಿ, ಪುರಾಣ ಶ್ರವಣಕ್ಕಾಗಲಿ ವಿಘ್ನವನ್ನುಂಟು ಮಾಡಿದವರು ಕೋಟಿ ಜನ್ಮಗಳವರೆಗೂ ನರಕದಲ್ಲಿ ಬಿದ್ದು ನಾನಾ ಕೋಟಲೆಗೆ ಸಿಕ್ಕಿ ಕಡೆಗೆ ಊರುಹಂದಿಗಳಾಗಿ ಹುಟ್ಟುವರು. ಪುರಾಣ ಶ್ರವಣವನ್ನು ಮಾಡುವುದಕ್ಕೆ ಅನುಕೂಲಪಡಿಸಿಕೊಟ್ಟ ಆಚಾರ್ಯನ ಮುಖದಿಂದ ಪುರಾಣವನ್ನು

ಹೇಳಿಸುವ ಪುಣ್ಯಾತ್ಮರು ಕೋಟಿ ಜನ್ಮ ಪರ್ಯಂತರ ಬ್ರಹ್ಮಲೋಕದಲ್ಲಿ ವಾಸ ಮಾಡುವರು. ಆಚಾರ್ಯನಾದ ಪುರಾಣಿಕನು ಕುಳಿತುಕೊಂಡು ಪುರಾಣ ಹೇಳುವುದಕ್ಕಾಗಿ ಮಂಚಿಗೆಯನ್ನಾಗಲಿ! ರತ್ನಕಂಬಳಿಯನ್ನಾಗಲಿ ! ಮಣೆಯನ್ನಾಗಲಿ! ವ್ಯಾಘ್ರಾಜಿನವನ್ನಾಗಲಿ! ಕೃಷ್ಣಾಜಿನವನ್ನಾಗಲಿ! ಕಡೆಗೆ ಮಡಿಯಾದ ಶುಭ್ರವಸ್ತ್ರವನ್ನಾಗಲಿ ! ಆಸನವಾಗಿ ಹಾಕಿಕೊಟ್ಟವರು ! ಇಹದಲ್ಲಿ ಸತ್ಕೀರ್ತಿಯೊಡನೆ ಕೂಡಿದ ಸಕಲಸೌಖ್ಯಗಳನ್ನೂ ಅನುಭವಿಸಿ ಪರದಲ್ಲಿ ಸ್ವರ್ಗಲೋಕವನ್ನು ಸೇರಿ ದೇವಯೋಗ್ಯವಾದ ಭೋಗಭಾಗ್ಯಗಳನ್ನು ಭೋಗಿಸಿದನಂತರ ಕೈಲಾಸಪದವಿಯನ್ನು ಪಡೆದು ಮುಕ್ತರಾಗುವರು. ಲೋಕದಲ್ಲಿ ಪ್ರಾಯಶ್ಚಿತ್ತ ಪರಿಹಾರಗಳಿಲ್ಲದ ಮಹಾಪಾತಕ ಉಪಪಾತಕಗಳನ್ನು ಮಾಡಿದವರ ಪಾಪಗಳೆಲ್ಲ ಈ ಪುರಾಣ ಶ್ರವಣದಿಂದಲೇ ನಾಶವಾಗುವುವು. ಆದಕಾರಣ ಪುರಾಣ ಶ್ರವಣಮಾತ್ರದಿಂದ ಸರ್ವರೂ ಪರಿಶುದ್ಧರಾಗುವರು. ಈ ಅರ್ಥಕ್ಕೆ ಸಂದೇಹವಿಲ್ಲ. ಇದೇ ಅರ್ಥವನ್ನು ಸ್ಪಷ್ಟಗೊಳಿಸುವ ದಿವ್ಯವಾದ ಒಂದು ಇತಿಹಾಸ ಉಂಟು. ಅದನ್ನು ನಿಮಗೋಸ್ಕರವಾಗಿ ಹೇಳುತ್ತಿದೇನೆಂದು ಸೂತಮಹಾಮುನಿಯು ಶೌನಕಾದಿಗಳಿಗೆ ನಿರೂಪಿಸಿದನೆಂಬಿಲ್ಲಿಗೆ,

ಶ್ರೀಮತ್ಸಾಮ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮವೀರ
ನರಪತಿ ಬಿರುದೆಂತೆಂಬರ ಗಂಡ ಶಂಖಚಕ್ರ ಮಕರ ಮತ್ಸ್ಯ ಶರಭ ಸಾಳ್ವ
ಗಂಡಭೇರುಂಡಾದಿ ನಾನಾ ಬಿರುದಾಂಕಿತ ಯಾದವಕುಲತಿಲಕ ಆತ್ರೇಯ
ಸಗೋತ್ರ ಅಶ್ವಲಾಯನಸೂತ್ರವರ್ತಿ ಋಕ್ಶಾಖಾಧ್ಯಾಯಿ ಮಹಿಶೂರ
ರಾಜಒಡೆಯರ ಪೌತ್ರ ನರಸರಾಜಒಡೆಯರ ಪುತ್ರರಾದ ಶ್ರೀಇಮ್ಮಡಿ
ಚಾಮರಾಜ ಒಡೆಯರವರು ಕರ್ಣಾಟಕ ಭಾಷೆಯಲ್ಲಿ ವಿರಚಿಸಿದ
ಸ್ಕಾಂದಪುರಾಣೋಕ್ತಮಾದ ಬ್ರಹ್ಮೋತ್ತರಖಂಡದಲ್ಲಿ,
ಪುರಾಣ ಶ್ರವಣ ಮಹಿಮೆಯೆಂಬಿಲ್ಲಿಗೆ
೨೨ನೆಯ ಅಧ್ಯಾಯಕ್ಕೆ ಮಂಗಳಮಸ್ತು.



## ಪುರಾಣ ಶ್ರವಣ ಫಲಪ್ರಯೋಜನ.

### ಇಪ್ಪತ್ತಮೂರನೆಯ ಅಧ್ಯಾಯ.

ಅನಂತರದಲ್ಲಿ ಸೂತಪುರಾಣಿಕನು ಶೌನಕಾದಿ ಮಹರ್ಷಿಗಳನ್ನು ಕುರಿತು ಎಲೈ ಋಷಿಗಳಿರಾ ! ಪುರಾಣಾಂಗಭೂತವಾದ ಸಮಸ್ತ ಅವಯವ ಕಥಾಸಾರವನ್ನೂ ಸಂಗ್ರಹಮಾಡಿ ಇಪ್ಪತ್ತೆರಡು ಅಧ್ಯಾಯಗಳಿಂದ ವಿರಚಿತವಾದ ಈ ಬ್ರಹ್ಮೋತ್ತರಖಂಡವನ್ನು ನಿಮಗೋಸ್ಕರ ನಿಮ್ಮ ಭಕ್ತಿಗೆ ಮೆಚ್ಚಿ ಉಲ್ಲಾಸಯುಕ್ತನಾಗಿ ವಿವರಿಸಿ ಹೇಳಿದೆನು. ಇಂಥ ಪರಮ ಪವಿತ್ರವಾದ ಪುರಾಣ

ವನ್ನು ಶ್ರವಣ ಮಾಡಿದುದರಿಂದ ಉಂಟಾಗುವ ಸದ್ಗತಿ ಸತ್ಫಲಗಳನ್ನು ವಿವರಿಸುವ "ಪುರಾಣಶ್ರವಣ ಫಲಪ್ರಯೋಜನವೆಂಬ" ಕಡೆಯ ಅಧ್ಯಾಯವನ್ನು ಹೇಳುವೆನು ಕೇಳಿ ಈ ಪುರಾಣವನ್ನು ಕೇಳಿದುದರಿಂದ ದುರಾಚಾರ ತತ್ಪರರಾಗಿದ್ದ ದಂಪತಿಗಳು ದುರ್ಗತಿಗೆ ಬದಲಾಗಿ ಸದ್ಗತಿಯನ್ನು ಪಡೆದರು ಎಂಬುದನ್ನು ಕರತಳಾಮಲಕವಂತೆ ತೋರಿಸುವ ಒಂದಾನೊಂದು ಇತಿಹಾಸವುಂಟು ಅದು ಬಹು ರಮ್ಯವಾದುದು ಭಕ್ತಿಪ್ರದವಾದುದು. ಮೋಕ್ಷಸಾಧನೆಗೆ ಮೂಲವಾದದ್ದು ಪುರಾತನವಾಗಿಯೂ ಸನಾತನವಾಗಿಯೂ ಇರುವುದಲ್ಲದೆ ಬಹು ಪವಿತ್ರಕರಗಳಾದ ಆಶ್ಚರ್ಯಗಳಿಂದ ಧರ್ಮಸೂಕ್ಷ್ಮಗಳನ್ನು ತಿಳಿಸುತ್ತಿರುವುದು. ಅದು ಹೇಗೆನ್ನುವಿರೋ ? ಕೇಳಿ.

ಬಹು ಪೂರ್ವಕಾಲದಲ್ಲಿ ದಕ್ಷಿಣ ಸಮುದ್ರ ತೀರದಲ್ಲಿ ಭಾಷ್ಕಳವೆಂಬ ಒಂದು ಹಳ್ಳಿಯಿದ್ದಿತು. ಅಲ್ಲಿದ್ದ ಜನರೆಲ್ಲರೂ ಬಹು ಮೂಢರಾಗಿ ಧರ್ಮಾಧರ್ಮಗಳನ್ನು ತಿಳಿಯದವರಾಗಿಯೂ ಶಠರಾಗಿಯೂ ಇದ್ದರು. ಆ ಹಳ್ಳಿಯಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣರೆಲ್ಲರೂ ವೇದಶಾಸ್ತ್ರಗಳನ್ನು ಉಪೇಕ್ಷೆಮಾಡಿ ಸ್ನಾನ ಸಂಧ್ಯಾವಂದನೆಗಳನ್ನು ಬಿಟ್ಟು, ಬ್ರಹ್ಮಯಜ್ಞಾದಿಗಳನ್ನು ಮಾಡದೆ ಶೂದ್ರವೇಷಧಾರಣೆಯಿಂದಲೂ ಕೃಷಿಯಿಂದಲೂ ಜೀವಿಸುತ್ತ ಪರಸ್ತ್ರೀಗಮನಾಸಕ್ತಿಯುಳ್ಳವರಾಗಿ ಪರಮಪಾಪಿಷ್ಠರಾಗಿದ್ದರು. ಪುರುಷರ ಸ್ಥಿತಿಯೇ ಹೀಗಾದಮೇಲೆ ಸ್ತ್ರೀಯರ ವಿಷಯದಲ್ಲಿ ಹೇಳಬೇಕಾದುದೇನಿದೆ ? ಸ್ತ್ರೀಯರೆಲ್ಲರೂ ಸದಾಚಾರದಲ್ಲಿ ಆಸಕ್ತಿಯಿಲ್ಲದೆ ಪಾತಿವ್ರತ್ಯವನ್ನು ಉಪೇಕ್ಷೆಮಾಡಿ ಜಾರಿಣಿಯರಾಗಿ ಸದಾ ಪಾಪಾತ್ಮರೊಡನೆ ಕಲೆತು ಕ್ರೀಡಿಸುತ್ತಿದ್ದರು. ಇಂಥ ಗ್ರಾಮದಲ್ಲಿ ವಾಸಿಸುತ್ತಿದ್ದ ವಿದುರನೆಂಬ ಒಬ್ಬಾನೊಬ್ಬ ಬ್ರಾಹ್ಮಣನು ಆಚಾರಹೀನನಾಗಿ ಶ್ವಪಚನಾಗಿ, ಶುದ್ಧಿ ಕರ್ಮಗಳನ್ನು ತೊರೆದು ಸದಾಚಾರವನ್ನು ಸ್ವಪ್ನದಲ್ಲಿಯೂ ಸ್ಮರಿಸಿಕೊಳ್ಳದೆ, ಸದಾ ವೇಶ್ಯಾಲಂಪಟನಾಗಿ, ಅವಳ ಮನೆಯಲ್ಲಿ ಬಿದ್ದು ಹೊರಳುತ್ತಿದ್ದನು. ಇದನ್ನು ಕಂಡು ಆಗ್ರಹಗೊಂಡವಳಾಗಿ ಅವನ ಹೆಂಡತಿಯು ತನ್ನ ವಯೋಧರ್ಮದ ಕಾಮಬಾಧೆಯನ್ನು ಸಹಿಸಲಾರದೆ ತಾನೂ ಜಾರಪುರುಷರೊಂದಿಗೆ ಕ್ರೀಡಿಸುತ್ತಿದ್ದಳು. ಒಂದು ದಿನ ವಿದುರನು ಹೆಂಡತಿಯ ಜಾರತ್ವವನ್ನು ಕಂಡು ಕುಪಿತನಾಗಿ ಜಾರಪುರುಷನನ್ನು ಹೊಡೆಯಬೇಕೆಂದು ಓಡಿಸಿಕೊಂಡು ಹೋಗಿ ಅವನು ತನಗೆ ಸಿಕ್ಕದೆ ಓಡಿಹೋದಕಾರಣ ಹಿಂದಿರುಗಿ ತನ್ನ ಮನೆಗೆ ಬಂದು ಹೆಂಡತಿಯನ್ನು ಹಿಡಿದು ಹಗ್ಗದಿಂದ ಕಟ್ಟಿ ಕೋಪದಿಂದ ಕಠಿನವಾಗಿ ಹೊಡೆಯುತ್ತಿದ್ದನು. ಆ ಏಟುಗಳನ್ನು ತಡೆಯಲಾರದೆ ಹೆಂಡತಿಯು ಕೋಪಾಕ್ರಾಂತಳಾಗಿ ಕೂಗಿಕೊಳ್ಳುತ್ತ ತನ್ನ ಗಂಡನನ್ನು ಕುರಿತು ಇಂತೆಂದಳು.

ಎಲೈ ಪುರುಷಾಧಮನೆ! ನೀನು ನನಗೆ ಮದುವೆಯಾದ ಗಂಡನಾಗಿದ್ದರೂ ನನ್ನ ಪ್ರಾಣಗಳಿಗೆ ಗಂಡಪ್ರಾಯನಾಗಿರುವೆಯಲ್ಲ ನಿನ್ನ ದುರ್ನಡತೆಯಿಂದ ನಾನು ಹೀಗಾದೆನು. ಯವ್ವನವತಿಯಾಗಿ ಕಾಮಪೀಡಿತಳಾದ ಪತ್ನಿಯನ್ನು ಕಣ್ಣಿಂದಲಾದರು ನೋಡದೆ ವೇಶ್ಯಾಲಂಪಟನಾಗಿ ನೀನು ಪ್ರತಿ ರಾತ್ರಿಯಲ್ಲಿಯೂ, ಸೂಳೆಯ ಮನೆಯಲ್ಲಿ ಬಿದ್ದಿದ್ದರೆ ನನ್ನ ಗತಿಯೇನಾಗಬೇಕು, ನೀನು ಹೇಗೆ ಸ್ತ್ರೀ ಸಂಭೋಗದಿಂದ ಆನಂದಪಡುವೆಯೊ! ಹೆಂಡತಿಯಾದ ನನಗೂ ಗಂಡನ ಸಂಪರ್ಕ ಬೇಡವೆ! ನೀನು ನನ್ನನ್ನು ಉಪೇಕ್ಷೆಮಾಡಿ ನನಗೆ ಸಂಭೋಗ ಸಂಭಾಷಣೆಗಳ ಸುಖವೇ ಇಲ್ಲದಂತೆ ಮಾಡಿದೆಯಲ್ಲ ನಿನ್ನಂಥ ಪಾಪಾತ್ಮನನ್ನು ಮದುವೆಯಾದ ನನ್ನ ಗತಿಯೇನು? ನನ್ನ ಕಾಮಾತುರವನ್ನು ಹೇಗೆ ನಿವಾರಣೆ ಮಾಡಿಕೊಳ್ಳಲಿ ಹೆಂಡತಿಯನ್ನು ಹೊಡೆದು ಬಡಿದು ನೋಯಿಸುವುದಕ್ಕಾಗಿ ನಮ್ಮ ತಂದೆತಾಯಿಗಳು ನಿನಗೆ ನನ್ನನ್ನು ಕೊಟ್ಟು ಮದುವೆಮಾಡಲಿಲ್ಲ. ಮಕ್ಕಳನ್ನು ಹಡೆದು ಮನೆಯನ್ನು ಬೆಳಸುವುದಕ್ಕಾಗಿ ನನ್ನನ್ನು ನಿನಗೆ ಕೊಟ್ಟು ಮದುವೆಮಾಡಿದರು. ಆ ಕಾಲದಲ್ಲಿ ಅಗ್ನಿಸಾಕ್ಷಿಕವಾಗಿ ಧರ್ಮದಲ್ಲಿಯೂ, ಅರ್ಥದಲ್ಲಿಯೂ, ಕಾಮದಲ್ಲಿಯೂ, ನಿನಗೆ ನಾನು ಅನ್ಯಾಯ ಮಾಡುವುದಿಲ್ಲವೆಂದು ನಿನ್ನಿಂದ ಮೂರು ಸಾರಿ ಪ್ರಮಾಣವನ್ನು ಮಾಡಿಸಲಿಲ್ಲವೆ? ಇದೆಲ್ಲವನ್ನೂ ಮರೆತು ಧರ್ಮಹೀನನಾಗಿ ನನ್ನನ್ನು ಉಪೇಕ್ಷೆಮಾಡಿ ಗೋಳುಗುಟ್ಟಿಸುತ್ತಿರುವೆಯ! ಇದು ನಿನಗೆ ಸರಿಯೆ! ಪುರುಷರಿಗೆ ಹೆಂಡತಿಯರು ಹೇಗೆ ಬೇಕೋ ಹಾಗೆಯೆ ಸ್ತ್ರೀಯರಿಗೆ ಗಂಡಂದಿರು ಬೇಡವೆ! ಗಂಡನಾದವನೆ! ಹೆಂಡತಿಗೆ ದ್ರೋಹಮಾಡಿದಮೇಲೆ ಹೆಂಡತಿ ಕೆಡುವುದರಲ್ಲಿ ತಪ್ಪೇನಿದೆ ವ್ಯರ್ಥವಾಗಿ ನನ್ನನ್ನು ಹೊಡೆದು ನೋಯಿಸಬೇಡ ನಾನು ಕೇಳಿದ ಪ್ರಶ್ನೆಗಳಿಗೆ ತಕ್ಕ ಉತ್ತರವನ್ನು ಹೇಳು ಎಂದು ಗದರಿಸಿದಳು. ಆಗ ಅವಳ ಮಾತನ್ನು ಕೇಳಿ ಭಯಭ್ರಾಂತನಾದ ವಿದುರನು ಪ್ರತ್ಯುತ್ತರ ಕೊಡುವುದಕ್ಕೆ ಶಕ್ತಿಸಾಲದೆ ಹಾಗಾದರೆ ನಿನಗೆ ಒಂದು ಉಪಾಯವನ್ನು ಹೇಳುವೆನು ಕೇಳು, ನೀನು ನಿನ್ನ ಇಷ್ಟಾನುಸಾರ ನಿನಗೆ ಬೇಕಾದ ವಿಟಪುರುಷರನ್ನು ಹುಡುಕಿಕೊಂಡು ಹೋಗಿ ದಿವಾರಾತ್ರಿಯಲ್ಲಿ ಅವರ ಜೊತೆಯಲ್ಲಿದ್ದು ಅವರಿಂದ ಹೆಚ್ಚಾದ ಹಣವನ್ನು ಕಸಿದುಕೊಂಡು ಬಂದು ನನಗೆ ಕೊಡು ನಾನು ಆ ಹಣವನ್ನು ತೆಗೆದುಕೊಂಡುಹೋಗಿ ವೇಶ್ಯೆಗೆ ಕೊಟ್ಟು ಅವಳೊಡನೆ ಸಂಭೋಗಿಸುತ್ತೇನೆ ಇದರಿಂದ ಇಬ್ಬರಿಗೂ ಸುಖವಾಗುವುದು ಎಂದು ಹೇಳಿದನು.

ಬಳಿಕ ತನ್ನ ಪತಿಯ ವಾಕ್ಯವನ್ನು ಕೇಳಿ ಆ ಸ್ತ್ರೀಯು ಗಂಡನ ಅಪ್ಪಣೆಯನ್ನುಅಂಗೀಕರಿಸಿ, ನಿರ್ಭಯದಿಂದ ನಿತ್ಯವೂ ಜಾರಪುರುಷರನ್ನು ಹುಡುಕಿಕೊಂಡು ಹೋಗಿ ಕ್ರೀಡಿಸುತ್ತಾ ಬಂದ ಹಣವನ್ನು ತನ್ನಗಂಡನಿಗೆ ಕೊಡುತ್ತಿದ್ದಳು. ಆ ಹಣ

ವನ್ನು ತೆಗೆದುಕೊಂಡು ಅದನ್ನು ವೇಶ್ಯಾಗೃಹದ ಭಂಡಾರಕ್ಕೆ ಮುಡುಪಾಗಿ ಕೊಟ್ಟು ಅವಳ ಗುಲಾಮನಾಗಿ ಸೇವಿಸಿಕೊಂಡಿದ್ದನು. ಹೀಗೆ ಸತಿಪತಿಗಳಿಬ್ಬರೂ ದುರಾಚಾರ ಸಂಪನ್ನರಾಗಿ ಹಲವು ಕಾಲವನ್ನು ಕಳೆದು ದಿನೇ ದಿನೇ! ಹೆಚ್ಚುತ್ತಿರುವ ದುರಾಚಾರದಲ್ಲಿಯೆ ಮಗ್ನರಾಗಿ ಜೀವಿಸುತ್ತಿದ್ದರು. ಇನ್ನೂ ಕೆಲವು ವರ್ಷಗಳು ಕಳೆದನಂತರ ಕಾಲವಶನಾಗಿ ಆ ಬ್ರಾಹ್ಮಣನು ಸತ್ತು ಹೋದನು. ಬಳಿಕ ಆ ಬ್ರಾಹ್ಮಣನ ಹೆಂಡತಿಗೆ ಪ್ರಾಯವು ತಗ್ಗಿ ಇಂದ್ರಿಯಗಳು ಕುಗ್ಗಿ ನಡುವು ಬಗ್ಗಿಹೋಗಿ ರೂಪವು ವಿಕಾರವಾಗಲು ಬಲಿತಿರುವಾಗ ಹುಳಿಯಾಗಿರುವ ಹಣ್ಣು ಕಳಿತಮೇಲೆ ಸಿಹಿಯಾಗುವಂತೆ ಶಾಂತಚಿತ್ತಳಾಗಿ ಜಾರಪುರುಷರಿಂದ ಹುಟ್ಟಿದ ತನ್ನ ಮಕ್ಕಳೊಡನೆ ಸುಖವಾಗಿ ಬಾಳಿಕೊಂಡು ತನ್ನ ಮನೆಯಲ್ಲಿಯೆ ಇರುತ್ತ ದೇವರ ಧ್ಯಾನದಲ್ಲಿ ಕಾಲವನ್ನು ಕಳೆಯುತ್ತಿದ್ದಳು.

ಹೀಗಿರುತ್ತಿರುವಾಗ ದೈವಯೋಗದಿಂದ ಒಂದಾನೊಂದು ಪುಣ್ಯಕಾಲದಲ್ಲಿ ನಡೆಯುವ ಸೇವೆ ಸತ್ಕಾರಗಳಿಗೆ ಅವಳ ಬಂಧುಗಳು ಗೋಕರ್ಣಕ್ಕೆ ಹೋಗಬೇಕೆಂದು ಹೊರಟು ಬಂದು ದಾರಿಯಲ್ಲಿ ಸಿಕ್ಕಿದ ಆ ಬ್ರಾಹ್ಮಣಸ್ತ್ರೀಯ ಮನೆಯಲ್ಲಿ ಇಳಿದುಕೊಂಡರು. ಈ ವಿಚಾರವನ್ನು ತಿಳಿದು ಮಾರನೆಯ ದಿನ ಅವಳು ತಾನೂ ತನ್ನ ಬಂಧುಗಳ ಜೊತೆಯಲ್ಲಿ ಪ್ರಯಾಣಮಾಡಿ ಪುಣ್ಯಕ್ಷೇತ್ರವಾದ ಗೋಕರ್ಣಕ್ಕೆ ಬಂದು ಅಲ್ಲಿನ ಪುಣ್ಯತೀರ್ಥದಲ್ಲಿ ಮಿಂದು ಶುಚಿರ್ಭೂತಳಾಗಿ ಮಹಾಮಹಿಮನಾದ ಮಹಾಬಲೇಶ್ವರನ ದೇವಸ್ಥಾನಕ್ಕೆ ಹೋಗಿ ದೇವರ ದರ್ಶನಮಾಡಿ ತೀರ್ಥಪ್ರಸಾದವನ್ನು ತೆಗೆದುಕೊಂಡು ಪ್ರದಕ್ಷಿಣೆಮಾಡುವ ನೆವದಿಂದ ದೇವಾಲಯವನ್ನು ಬಳಸಿಕೊಂಡು ಬರುತ್ತ ಅನೇಕ ಜನ ಬ್ರಾಹ್ಮಣ ಸುವಾಸಿನಿಯರ ಮಧ್ಯದಲ್ಲಿ ಕುಳಿತು ಘಂಟಾಘೋಷವಾಗಿ ಬಹು ರಮ್ಯವಾದ ಸ್ವರದಿಂದ ಪುರಾಣವನ್ನು ಹೇಳುತ್ತಿದ್ದ ಆಚಾರ್ಯನು ಹೇಳುತ್ತಿದ್ದ ಕಥಾಸಂದರ್ಭವನ್ನು ಅನುಸರಿಸಿ ದುರಾಚಾರವಿಡಂಬನಾರ್ಥವಾದ ವಾಕ್ಯಗಳಿಂದ ಸ್ತ್ರೀಯರಿಗೆ ನೀತಿಬೋಧೆಯಾಗುವಂತೆ ಲೋಕದಲ್ಲಿ ಸ್ವಭಾವಶೂನ್ಯರಾಗಿ ಕಾಮಾತುರದಿಂದ ಪರಪುರುಷನನ್ನು ಕೂಡಿ ಕ್ರೀಡಿಸುತ್ತಿದ್ದ ಜಾರಿಣಿಯರಾದ ಸ್ತ್ರೀಯರು ಸತ್ತಮೇಲೆ ಯಮನು ಅವರನ್ನು ನರಕದಲ್ಲಿ ಹಾಕಿ ಕಾದ ಕಬ್ಬಿಣದ ಸಲಾಕೆಗಳನ್ನು ತಬ್ಬಿಸುವನು. ಇದು ಸತ್ಯವಾದ ಅರ್ಥ ಸುಳ್ಳಲ್ಲವೆಂದು ಹೇಳುತ್ತಿದ್ದ ಮಾತನ್ನು ಕೇಳಿ ಮನಸ್ಸಿನಲ್ಲಿ ಭಯಪಟ್ಟು ಗಡಗಡನೆ ನಡುಗುತ್ತ ತನ್ನಲ್ಲಿ ತಾನು ಬಹಳ ಹೊತ್ತು ವಿಚಾರ ಮಾಡುತ್ತಿದ್ದಳು.

ಆಹಾ ಪುರಾಣಗಳು ಎಂದಿಗೂ ಸುಳ್ಳಾಗಲಾರವು. ವೇದಕ್ಕೆ ಸಮಾನವಾಗಿ ವೇದಾರ್ಥಗಳನ್ನು ಪ್ರತಿಪಾದಿಸತಕ್ಕ ಈ ಪುರಾಣಗಳನ್ನು ಪರಮಪಾವ

ನರೂ, ದಿವ್ಯಜ್ಞಾನಿಗಳೂ, ಆದ ಮಹರ್ಷಿಗಳು ತಮ್ಮ ಅನುಭವಕ್ಕೆ ತಕ್ಕಂತೆ ಹೊಂದಿಸಿ ಬರೆದಿರುವರು. ಇದರಿಂದ ಲೋಕದಲ್ಲಿ ಪಾಪಕಾರ್ಯಾಸಕ್ತರಾಗಿ ಪಾಮರರಾಗಿರುವ ಪ್ರಾಣಿಗಳಿಗೆ ಹಿತವುಂಟಾಗುವುದೆಂಬ ಭಾವನೆಯಿಂದ ಈ ಪುರಾಣಗಳು ಬರೆಯಲ್ಪಟ್ಟಿವೆ. ಅದರಲ್ಲಿ ಹೇಳಿರುವ ಅರ್ಥವನ್ನೇ ಆಚಾರ್ಯನು ವಿವರಿಸಿ ಹೇಳಿದನು. ನಾನಾದರೋ ನನ್ನ ಪ್ರಾಯಕಾಲದಲ್ಲಿ ಪೂರ್ವಧರ್ಮ ಗಳನ್ನು ತಿಳಿಯದೆ ಅಂಧಕನಂತೆ ಕುರುಡಿಯಾಗಿ ಕ್ಷಣಿಕ ಸುಖಕ್ಕೆ ಆಸೆಪಟ್ಟು ಕಾಮಬಾಧೆಯನ್ನು ಸಹಿಸಲಾರದೆ ! ಮಾಡಬಾರದ ಕೆಲಸವನ್ನು ಮಾಡಿ ಮಹಾ ಪಾಪಿಷ್ಠೆಯಾಗಿರುವೆನು. ಇಹಲೋಕದ ಕಷ್ಟಸುಖಗಳನ್ನೆ ಸಹಿಸಲಾ ರದ ಈ ದೇಹವು ಬಿದ್ದುಹೋದಮೇಲೆ ಯಮಕಿಂಕರರು ಯಾತನಾದೇಹಕ್ಕೆ ಕೊಡುವ ಬಾಧೆಯನ್ನು ಹೇಗೆ ಸಹಿಸಲಿ ! ಅಯ್ಯೋ ! ದೇವರೆ ಎಂದಿಗೂ ನಾನು ಸಹಿಸಲಾರೆ ನರಕಬಾಧೆಯು ನನಗಲ್ಲದೆ ನನ್ನ ಹಗೆಗಳಿಗೂ ಬೇಡ. ಆದಕಾರಣ ಈಗಲೆ ಈ ಪುರಾಣಿಕನ ಬಳಿಗೆ ಹೋಗಿ ಅವನನ್ನು ಕಂಡು ನನ್ನ ವೃತ್ತಾಂತವನ್ನೆಲ್ಲ ಅವನಿಗೆ ಹೇಳಿ ಪಾಪನಿವಾರಣೆಗಾಗಿ ತಕ್ಕ ಉಪಾಯಗಳೇ ನಾದರೂ ಇದ್ದರೆ ಅವರಿಂದ ನನ್ನ ಪಾಪವನ್ನು ಪರಿಹರಿಸಿಕೊಂಡು ಪರಲೋಕ ದಲ್ಲಿ ಉಂಟಾಗುವ ನರಕಬಾಧೆಯನ್ನು ತಪ್ಪಿಸಿಕೊಳ್ಳಬೇಕೆಂದು ಯೋಚಿಸಿ, ಪುರಾಣ ಮುಗಿಯುವವರೆಗೂ ಕಾದುಕೊಂಡಿದ್ದು ಎಲ್ಲರೂ ಹೊರಟುಹೋದ ಮೇಲೆ ತಾನೊಬ್ಬಳೆ ರಹಸ್ಯವಾಗಿ ಪುರಾಣಿಕನ ಬಳಿಗೆ ಹೋಗಿ ಸ್ವಾಮಿ ! ನಾನು ಬಾಲ್ಯದಲ್ಲಿ ಇಂದ್ರಿಯ ನಿಗ್ರಹವನ್ನು ಮಾಡಲಾರದೆ ಸ್ವೇಚ್ಛಾವಿಹಾರಿ ಯಾಗಿ ಮಾಡಬಾರದ ಮಹಾಪಾಪಗಳನ್ನು ಮಾಡಿದೆನು. ಅದರಿಂದ ಪಾಪ ಸಂಘಟನೆಯಾಗಿದೆ. ಇಂಥ ಪಾಪಾತ್ಮಕವಾದ ಈ ಜನ್ಮವು ಇನ್ನೇತಕ್ಕೆ ಅಯ್ಯಾ ! ದಯಾಳುವೆ ಮಹಾಭಯಂಕರರಾದ ಯಮಕಿಂಕರರನ್ನು ಮರಣ ಕಾಲದಲ್ಲಿ ಹೇಗೆ ನೋಡಲಿ ! ಅವರು ನನ್ನನ್ನು ಕಟ್ಟಿ ಕುಟ್ಟಿ, ಹೊಡೆದು ಬಡಿದು ನರಕದಲ್ಲಿ ಕೆಡಹುತ್ತಿದ್ದರೆ ಏನುಮಾಡಲಿ ! ಕುದಿಯುತ್ತಿರುವ ನೀರಿನಿಂದ ತುಂಬಿರುವ ಕ್ಷಾರಕರ್ದಮವೆಂಬ ನರಕದಲ್ಲಿ ಹೇಗೆ ಬೀಳಲಿ ! ಅಪರಿಮಿತ ವಾದ ಜನ್ಮಗಳನ್ನು ಧರಿಸಿ ಕ್ರಿಮಿಕೀಟಾದಿ ನಾನಾ ಯೋನಿಗಳಲ್ಲಿ ಹೇಗೆ ಹುಟ್ಟಲಿ! ಇಂದು ಮೊದಲಾಗಿ ನನಗೆ ಊಟವೂ ಬೇಡ, ನಿದ್ರೆಯೂ ಬೇಡ, ಶಿವಶಿವ ! ವ್ಯರ್ಥವಾಗಿ ನನ್ನ ಜನ್ಮವು ಕೆಟ್ಟುಹೋಯಿತಲ್ಲ ! ಎಲೈ ದುರ್ದೈವವೆ ! ನೀನು ನನಗೆ ಇಂಥ ದುರ್ಬುದ್ಧಿಯನ್ನು ಹುಟ್ಟಿಸಿ, ನನ್ನನ್ನು ಈ ಗತಿಗೆ ತಂದೆಯಾ ! ಈಗ ನಾನೇನು ಮಾಡಲಿ ! ಪರ್ವತಾಗ್ರವನ್ನು ಹತ್ತಿ ಶೂಲದಮೇಲೆ ಬೀಳುವ ದುಃಖಕ್ಕೆ ಗುರಿಯಾದೆನು. ಶತವರ್ಷ ಪರ್ಯಂತರ ಪ್ರತಿದಿಸವೂ ತಪ್ಪದೆ ಗಂಗಾ ಸ್ನಾನವನ್ನು ಮಾಡಿದರೂ, ಶತಾಶ್ವಮೇಧಯಾಗಗಳನ್ನು ಮಾಡಿದರೂ ನನ್ನ

ಪಾಪವು ಪರಿಹಾರವಾಗುವುದಿಲ್ಲ. ಏನು ಮಾಡಲಿ ! ಎಲ್ಲಿಗೆ ಹೋಗಲಿ ! ಯಾರನ್ನು ಮರೆಹೊಗಲಿ ! ನರಕದಲ್ಲಿ ಬೀಳುವ ನನ್ನ ಕಷ್ಟವನ್ನು ತಪ್ಪಿಸುವರು ಯಾರು ! ಎಲೈ ಪುರಾಣಿಕೋತ್ತಮನೆ ನನಗೆ ಯಾರೂ ದಿಕ್ಕಿಲ್ಲದ ಕಾರಣ ನಾನು ನಿನ್ನನ್ನು ಮರೆಹೊಕ್ಕಿರುವೆನು, ನನಗೆ ನೀನೆ ತಾಯಿ, ನೀನೆ ತಂದೆ, ನೀನೆ ಗುರು, ನೀನೇ ದೇವರು, ಹೇಗಾದರೂ ಮಾಡಿ ಯಾವ ವಿಧದಿಂದಲಾದರೂ ನನ್ನನ್ನು ಈ ಪಾಪದಿಂದ ವಿಮುಕ್ತಳಾಗುವಂತೆ ಮಾಡು ! ಎಂದು ಕಾಲ್ಗೆರಗಿ ಬೇಡಿಕೊಂಡಳು.

ಆಗ ಆ ಪುರಾಣಿಕನಿಗೆ ಕರುಣ ಹುಟ್ಟಿ ಅವಳನ್ನು ಹಿಡಿದು ಎತ್ತಿ ಕುಳ್ಳಿರಿಸಿ ! ಅಮ್ಮಾ ಮಗಳೇ! ಹೆದರಬೇಡ ಧೈರ್ಯವಾಗಿರು ನೀನು ಬುದ್ಧಿವಂತೆಯಾದ ಕಾರಣ ನರಕ ಪ್ರಾಪ್ತಿಯಾಗುವದಕ್ಕೆ ಮೊದಲೆ ನೀನು ಎಚ್ಚತ್ತುಕೊಂಡೆ ಇದರಿಂದ ನಿನಗೆ ಉತ್ತರೋತ್ತರ ಸುಖವುಂಟಾಗುವದು. ಈ ಕಥಾಶ್ರವಣಮಾತ್ರದಿಂದಲೆ ನಿನಗೆ ಪಶ್ಚಾತ್ತಾಪವೂ, ಪಾಪಭೀತಿಯೂ, ಭೌತಿಕ ಸೌಖ್ಯದಲ್ಲಿ ವೈರಾಗ್ಯವೂ ಉಂಟಾಯಿತಲ್ಲ ! ಅದೇ ಒಂದು ಶ್ರೇಯಸ್ಸು ಪಶ್ಚಾತ್ತಾಪವು ಸಕಲ ಪಾಪಗಳನ್ನು ಪರಿಹರಿಸುವ ಪ್ರಾಯಶ್ಚಿತ್ತವಾಗಿದೆ. ಪಶ್ಚಾತ್ತಾಪವುಳ್ಳವರಿಗೆ ಪರಮೇಶ್ವರನ ಅನುಗ್ರಹವುಂಟಾಗುವದು. ಪರಮೇಶ್ವರನ ಕೃಪೆಯಿಂದ ಪಾಪರಾಶಿಯು ಧ್ವಂಸವಾಗುವದು. ಪಶ್ಚಾತ್ತಾಪವಿಲ್ಲದವರಿಗೆ ಪ್ರಾಯಶ್ಚಿತ್ತವೇ ಇಲ್ಲ. ಪಶ್ಚಾತ್ತಾಪವಿಲ್ಲದವನು ವಿಧಿವತ್ತಾಗಿ ಸಕಲ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡರೂ ಅವನ ಪಾಪರಾಶಿಯು ನಾಶವಾಗುವುದಿಲ್ಲ. ಇನ್ನೂ ಮುಂದಕ್ಕೆ ಸಹಾಯಭೂತವಾದ ಇತರ ಕಾರ್ಯಗಳನ್ನು ವಿವರಿಸಿ ಹೇಳುವೆನು ಕೇಳು, ಸತ್ಕಥಾಶ್ರವಣದಿಂದಲೂ, ಸತ್ಪುರುಷರ ಸೇವೆ ಸತ್ಕಾರಗಳಿಂದಲೂ, ಪುಣ್ಯಕ್ಷೇತ್ರವಾಸದಿಂದಲೂ, ಪುಣ್ಯತೀರ್ಥಗಳ ಸೇವನೆಯಿಂದಲೂ, ಪುಣ್ಯಕಾರ್ಯ ಪ್ರಸಕ್ತಿಯಿಂದಲೂ ಮನುಷ್ಯರಿಗೆ ಚಿತ್ತಶುದ್ಧಿಯುಂಟಾಗುವದು, ಸತ್ಕಥಾಶ್ರವಣದಿಂದ ಆಗುವ ಚಿತ್ತ ಶುದ್ಧಿಯು ಶ್ರೇಷ್ಠವಾದ ವ್ರತಾಚರಣೆಗಳಿಂದಲೂ, ಆಗಲಾರದು ಅನುದಿನವೂ ತಪ್ಪದೆ ಒಪ್ಪವಿಕ್ಕಿದರೆ ಕನ್ನಡಿಗೆ ಹೇಗೆ ಕಾಂತಿಹೆಚ್ಚುವದೊ ! ಹಾಗೆ ಸತ್ಕಥಾಶ್ರವಣದಿಂದ ಮನಸ್ಸು ಪರಿಶುದ್ಧವಾಗುವುದು. ಮನಸ್ಸು ಶುದ್ಧಿಯಾದಮೇಲೆ ಮನಸ್ಸಿನಿಂದಲೂ, ಮಾತಿನಿಂದಲೂ, ಶರೀರದಿಂದಲೂ, ಮಾಡಿದ ಪಾಪಗಳೆಲ್ಲವೂ ಪರಿಹಾರವಾಗುವದು. ಪಾಪ ಪರಿಹಾರವಾದಮೇಲೆ ಸದಾಚಾರವು ಅಳವಡುವುದು, ಸದಾಚಾರದಿಂದ ಸದ್ಗತಿಯುಂಟಾಗುವದು. ಇಹ ಜನ್ಮದಲ್ಲಿ ದುರ್ವಾಸನೆಯಿಂದ ಧ್ಯಾನವು ದೊರೆಯದೆ ಹೋದರೂ, ಸತ್ಕಥಾ ಶ್ರವಣವನ್ನು ಮಾಡಿದವರಿಗೆ ಮುಂದಿನ ಜನ್ಮದಲ್ಲಿಯಾದರೂ ಧ್ಯಾನಯೋಗವುಂಟಾಗುವುದು. ಆದಕಾರಣ ಶ್ರೇಯಸ್ಕಾಮಿಗ

ಳಾದವರು ತಮ್ಮ ಹಿತವನ್ನೇಕೋರುವ ನಿಮಿತ್ತವಾಗಿ ಧ್ಯಾನಸಾಧನವಾದ ಪುರಾಣಶ್ರವಣವನ್ನು ಮಾಡಬೇಕು. ಹಾಗಿಲ್ಲವಾದರೆ ನಾಮಸ್ಮರಣೆಯನ್ನಾದರೂ ಮಾಡಬೇಕು. ಹಾಗೆ ನಾಮಸ್ಮರಣೆಯನ್ನು ಮಾಡುವುದರಿಂದ ಪ್ರಾಣಿಕೋಟಿಗಳಿಗೆ ಬಹಳ ಪ್ರಯೋಜನವುಂಟು. ಅಜಮಿಳನೆಂಬುವನು ನಾಮಸ್ಮರಣೆಯಿಂದಲೆ ಧನ್ಯನಾದನು ಅದರಿಂದಲೆ ಅವನಿಗೆ ಸದ್ಗತಿಯುಂಟಾಯಿತು. ಸತ್ಕಥಾಶ್ರವಣವನ್ನು ಕೇಳದೆ ನಾಮಸ್ಮರಣೆಯನ್ನು ಮಾಡದೆ ಇರುವ ಮನುಷ್ಯನು ಪಶುವಿಗೆ ಸಮಾನನಾದವನು. ಅಂಥವನಿಗೆ ಎಂದಿಗೂ ಸದ್ಗತಿಯಾಗುವುದಿಲ್ಲ. ಆದಕಾರಣ ನೀನು ಸಕಲ ವಿಷಯಗಳನ್ನೂ ತೊರೆದು ಶ್ರೇಯಸ್ಸಿಗೆ ಸಾಧನಭೂತವಾದ ಪುರಾಣಶ್ರವಣವನ್ನು ಮಾಡು, ಹಾಗೆ ಮಾಡಿದರೆ ಪುರಾಣಶ್ರವಣದಿಂದ ಚಿತ್ತಶುದ್ಧಿಯಾಗಿ ಚಿತ್ತಶುದ್ಧಿಯಿಂದ ಶಿವಧ್ಯಾನವು ದೊರೆದು ಶಿವಧ್ಯಾನದಿಂದಲೆ ನಿನಗೆ ಸದ್ಗತಿಯುಂಟಾಗುವುದೆಂದು ಹೇಳಿ ಆ ಬ್ರಾಹ್ಮಣ ಸ್ತ್ರೀಯನ್ನು ಸಮಾಧಾನಮಾಡಿದನು.

ಆ ಬಳಿಕ ಆ ಬ್ರಾಹ್ಮಣ ಸ್ತ್ರೀಯು ಸಂತೋಷಪಟ್ಟು ಪುರಾಣಿಕನ ಪಾದಗಳಿಗೆ ನಮಸ್ಕರಿಸಿ ನಿನ್ನಿಂದ ನಾನು ಧನ್ಯಳಾದಕಾರಣ ನನಗೆ ನೀನೇ ಪುಣ್ಯಕಥೆಗಳನ್ನು ಹೇಳಬೇಕು. ಅದನ್ನು ಕೇಳಿ ನಾನು ಪವಿತ್ರತೆಯನ್ನು ಪಡೆಯಬೇಕು. ಎಂದು ಭಯಭಕ್ತಿಗಳಿಂದ ಬೇಡಿಕೊಂಡಳು. ಆಗ ಆ ಪುರಾಣಿಕನಿಗೆ ಅವಳ ಮೇಲೆ ಕರುಣ ಹುಟ್ಟಿತು. ಅದಕ್ಕೆ ತಕ್ಕಂತೆ ಆತನು ಈಕೆಯನ್ನು ಹತ್ತಿರದಲ್ಲಿ ಇಳ್ಳಿರಿಸಿಕೊಂಡು. ಅವಳ ಪೂರ್ವ ಕೃತ್ಯಗಳ ವಾಸನೆಯೂ, ಇಹಲೋಕದ ಭೋಗಾಭಿಲಾಷೆಯೂ ಹೇಗೆ ನಾಶವಾಗಬೇಕೊ ಹಾಗೆ, ದೈವಭಕ್ತಿಯೂ ವೈರಾಗ್ಯವೂ ಹೇಗೆ ಹುಟ್ಟಬೇಕೊ ಹಾಗೆ, ಮತ್ತು ಹೇಗೆ ಚಿತ್ತಶುದ್ಧಿಯುಂಟಾಗಬೇಕೊ ಹಾಗೆ ಶಿವಕಥಾ ಶ್ರವಣವನ್ನು ಮಾಡಿಸಿದನು. ಹೀಗೆ ಪುರಾಣಿಕನು ಪ್ರತಿದಿನವೂ ತಪ್ಪದೆ ಮಾಡುತ್ತಿದ್ದ ಪುರಾಣ ಪುಣ್ಯಕಥೆಗಳ ಉಪದೇಶದಿಂದ ಆ ಬ್ರಾಹ್ಮಣ ಸ್ತ್ರೀಯು ಚಿತ್ತವು ದಿನದಿನಕ್ಕೆ ಪರಿಶುದ್ಧವಾಗಿ ಒಪ್ಪವಿಕ್ಕಿದ ಚಿನ್ನದಂತೆ ನಿರ್ಮಲವಾಗಿ ಕಳೆಯೇರಿತು. ಆ ಬಳಿಕ ಅವಳಿಗೆ ವಿಷಯಸುಖದಲ್ಲಿದ್ದ ಆಸೆಯೂ ರಜೋಗುಣ ತಮೋಗುಣಗಳೂ ಕಣ್ಣಿಗೆ ಕಾಣಿಸದಂತೆ ಮಾಯವಾದುವು. ಅನಂತರ ಸತ್ವಗುಣವೇ ಪ್ರದಾನವಾಗಿ ಮನಸ್ಸನ್ನು ನಿರ್ಮಲಗೊಳಿಸಿ ದೇಹವನ್ನು ಪರಿಶುದ್ಧವಾಗಿ ಮಾಡಿತು. ಆಬಳಿಕ ಆಬಾಹ್ಮಣ ಸ್ತ್ರೀಯು ಸಂತೋಷಭರಿತಳಾಗಿ ಪ್ರಾಪಂಚಿಕ ವ್ಯವಹಾರವನ್ನು ತೊರೆದು ಪುತ್ರಮಿತ್ರಾದಿಗಳಲ್ಲಿ ಅಭಿಮಾನವಿಲ್ಲದವಳಾಗಿ ಶಾಂತಚಿತ್ತದಿಂದ ಸದಾ ಗುರು ಸೇವೆಯನ್ನು ಮಾಡಬೇಕೆಂಬ ಅಭಿಲಾಷೆಯುಳ್ಳವಳಾಗಿ, ಪ್ರತಿದಿನವೂ ಕಾಲಕಾಲಕ್ಕೆ ತಪ್ಪದೆ ತೀರ್ಥಸ್ನಾನವನ್ನು ಮಾಡಿ, ಜಡೆಯನ್ನು ಕಟ್ಟಿ ನಾರುಮಡಿಯನ್ನುಟ್ಟು ಮಿತಾ

ಹಾರತತ್ಪರಳಾಗಿ ಸದಾ ಶಿವಪೂಜೆಯನ್ನು ಮಾಡಿ ಶಿವಮಂತ್ರವನ್ನು ಜಪಿಸಿ, ಶಿವಕಥೆಯನ್ನು ಕೇಳುತ್ತ ಶಿವಧ್ಯಾನ ಪಾರಾಯಣಳಾಗಿ ಉಕ್ಕಿ ಬರುವ ಭಕ್ತಿರಸ ದಿಂದ ಹೊನಲಿಡುವ ಹೊಳೆಯಂತೆ ತನ್ನಲ್ಲಿ ತಾನು ಶಿವಧ್ಯಾನವನ್ನು ಮಾಡು ತ್ತಿದ್ದಳು. ಹೇಗೆಂದರೆ;—

ಶ್ಲೋ॥ ವಿಶ್ವೇಶ ವಿಶ್ವವಿಲಯ ಸ್ಥಿತಿಜನ್ಮ ಹೇತೋಃ ।
ವಿಶ್ವೈಕವಂದ್ಯ ಶಿವಶಾಶ್ವತ ವಿಶ್ವರೂಪ ॥
ವಿಧ್ವಸ್ತಕಾಲ ಭವಭೀತಿ ಗುಣಾವಭಾಸ ।
ಶ್ರೀಮನ್ಮಹೇಶ ಮಯಿ ವಿದೇಹಿ ಕೃಪಾಕಟಾಕ್ಷಂ ॥೧॥

ಶ್ರೀ ವಿಶ್ವನಾಥ ಕರುಣಾಕರ ಶೂಲಪಾಣೇ ।
ಭೂತೇಶ ಭರ್ಗ ಭವತ್ರಯ ಗೀತ ಕೀರ್ತೇ ॥
ಶ್ರೀನೀಲಕಂಠ ಮದನಾಂತಕ ವಿಶ್ವಮೂರ್ತೇ ।
ಗೌರೀಪತೇ ಮಯಿ ವಿದೇಹಿ ಕೃಪಾಕಟಾಕ್ಷಂ ॥೨॥

ಶಂಭೋ ಶಶಾಂಕ ಕೃತಶೇಖರ ಶಾಂತಮೂರ್ತೇ ।
ಗಂಗಾಧರಾ ಮರವರಾರ್ಚಿತ ಪಾದಪೀಠ ॥
ನಾಗೇಂದ್ರ ಭೂಷಣ ನಗೇಂದ್ರ ನಿಕೇತನೇಶ ।
ಭಕ್ತಾರ್ತಿಹೃನ್ಮಯಿ ವಿದೇಹಿ ಕೃಪಾಕಟಾಕ್ಷಂ ॥೩॥

ಈ ಪ್ರಕಾರವಾಗಿ ಆಬ್ರಾಹ್ಮಣಸ್ತ್ರೀಯು ಪ್ರತಿದಿನವೂ ಶಿವವ್ರತವನ್ನುಮಾ ಡುತ್ತ ಕಡೆಗೆ ತನ್ನ ಕರ್ಮಬಂಧವನ್ನು ಕಳೆದು ಮುಕ್ತಳಾಗಿ ದಿವ್ಯ ಶರೀರವನ್ನು ಪಡೆದು ಶಿವದೂತರು ತೆಗೆದುಕೊಂಡು ಬಂದ ದಿವ್ಯವಿಮಾನವನ್ನೇರಿ ಕೈಲಾಸವನ್ನು ಸೇರಿದಳು. ಅಲ್ಲಿ ಸಿದ್ಧ ಕಿನ್ನರ ಗಂಧರ್ವರಿಂದಲೂ, ದೇವರ್ಷಿ ಬ್ರಹ್ಮರ್ಷಿ ಗಳಿಂದಲೂ, ಇಂದ್ರಾದಿಲೋಕಪಾಲಕರಿಂದಲೂ ಕೂಡಿದ ಸಭೆಯಲ್ಲಿ ನಂದೀಶ ಭೃಂಗೀಶಾದಿ ಭಕ್ತರಿಂದಲೂ, ವಿಘ್ನೇಶ್ವರಾದಿ ಗಣಗಳಿಂದಲೂ, ಇಂದ್ರಾದಿ ಗಳಿಂದಲೂ ಸೇವಿಸಲ್ಪಡುತ್ತ ಕೋಟಿಸೂರ್ಯ ಸದೃಶನಾಗಿ ಪಂಚಮುಖನಾಗಿ ತ್ರಿನೇತ್ರಗಳುಳ್ಳವನಾಗಿ ನೀಲಕಂಠನಾಗಿ ರಾಜಿಸುತ್ತ ಸಿಂಹಾಸನದಲ್ಲಿ ಕುಳಿತಿದ್ದ ಪರಶಿವನನ್ನೂ ಅವನ ಎಡಗಡೆಯಲ್ಲಿ ಅವನನ್ನೆ ಆಶ್ರಯಿಸಿಕೊಂಡು ಕುಳಿತಿರುವ ಮಿಂಚಿನಂತೆ ಹೊಳೆಯುತ್ತಿದ್ದ ಪಾರ್ವತಿಯನ್ನೂ ಕಂಡು ಬಾಷ್ಪಗಳಿಂದ ನೆನೆದುಹೋದ ಹೃದಯವುಳ್ಳವಳಾಗಿ ಸಂತೋಷದಿಂದ ಉಬ್ಬಿದ ಮೈಯಿಂದ ಪಾರ್ವತೀಪರಮೇಶ್ವರರಿಗೆ ಸಮಸ್ಕಾರ ಮಾಡಿ ಅವರ ಅಪ್ಪಣೆಯಂತೆ ಬಹು ಕಲ್ಪಾಂತದವರೆಗೂ ಅಲ್ಲಿಯೆ ವಾಸಮಾಡುತ್ತಿದ್ದಳು.

## ೧೭೪ ಪುರಾಣ ಶ್ರವಣ ಫಲಪ್ರಯೋಜನ ೨೩ನೆ ಅಧ್ಯಾಯ.

ಹೀಗೆ ಶಿವಲೋಕವಾಸಿಯಾದ ಆ ಬ್ರಾಹ್ಮಣ ಸ್ತ್ರೀಯು ಹಿಂದಾನೊಂದು ದಿನ ಸಭಾಮಧ್ಯದಲ್ಲಿ ಸಿಂಹಾಸನಾರೋಹಣ ಮಾಡಿ ಕುಳಿತಿದ್ದ ಪಾರ್ವತೀ ದೇವಿಗೆ ನಮಸ್ಕರಿಸಿ ಎಲೌ ಜಗನ್ಮಾತೆಯೆ! ಕರುಣಾಕರನಾದ ಪರಮೇಶ್ವರನ ಕೃಪಾಕಟಾಕ್ಷದಿಂದ ನಾನು ಇಲ್ಲಿಗೆ ಬಂದೆನು. ಆದರೆ ನನ್ನನ್ನು ಕೈ ಹಿಡಿದ ಪತಿಯು ಯಾವ ಲೋಕದಲ್ಲಿರುವನೊ? ಯಾವ ಜನ್ಮವನ್ನು ಪಡೆದಿರುವನೊ? ಯಾವ ಸ್ಥಿತಿಯಲ್ಲಿಗುವನೊ ಕಾಣೆ! ಅವನನ್ನು ಹೇಗಾದರೂ ಇಲ್ಲಿಗೆ ಬರುವಂತೆ ಮಾಡಿಕೊಡಬೇಕು. ಇದು ನಿನ್ನ ಹೊರತು ಇನ್ನು ಯಾರಿಂದಲೂ ಆಗ ತಕ್ಕದಲ್ಲವೆಂದು ಪ್ರಾರ್ಥಿಸಿಕೊಂಡಳು. ಅದನ್ನು ಕೇಳಿ ಪಾರ್ವತಿಗೆ ಮರುಕ ಹುಟ್ಟಿ ಅಮ್ಮಾ ಮಗಳೇ! ನಾನೇನು ಹೇಳಲಿ! ನಿನ್ನ ಗಂಡನು ಹಿಂದಿನ ಜನ್ಮದಲ್ಲಿ ನಿಜವಾದ ಭಕ್ತಿಯಿಲ್ಲದವನಾಗಿ ಡಾಂಭಿಕದಿಂದ ಪುರಾಣಶ್ರವಣವನ್ನು ಶಿವ ಪೂಜೆಯನ್ನು ಮಾಡುತ್ತಿದ್ದನು. ಅವರೂ ಒಂದು ದಿನವಾದರೂ ಪುರಾಣಿಕನನು ಫಲಪುಷ್ಪಗಳಿಂದಲಾಗಲಿ ವಸ್ತ್ರ ಉಡುಗೊರೆಗಳಿಂದಲಾಗಲಿ! ಸತ್ಕರಿಸದೆ ಇದ್ದ ಪಾಪದಿಂದ ಬಹುಜನ್ಮ ಪರಿಯಂತರ ನರಕವಾಸಿಯಾಗಿದ್ದು ಡಾಂಭಿಕದಿಂದ ಲಾದರೂ ಶಿವಪೂಜೆಯನ್ನು ಮಾಡಿದಕಾರಣ ಬ್ರಾಹ್ಮಣನಾಗಿ ಹುಟ್ಟಿ ನಿನಗೆ ಪತಿಯಾದನು. ಅಗಲೂ ಜಾರತ್ವದಿಂದ ಹಣವನ್ನು ತಂದುಕೊಡುವಂತೆ ನಿನಗೆ ಹೇಳಿದನು. ನೀನು ತಂದುಕೊಟ್ಟ ಹಣದಿಂದ ವೇಶ್ಯಾ ಸಂಪರ್ಕವನ್ನು ಮಾಡುತ್ತ ಮಲಿನನಾಗಿದ್ದಕಾರಣ ಈ ಜನ್ಮದಲ್ಲಿ ಪಿಶಾಚಿಯಾಗಿ ಹುಟ್ಟಿ ವಿಂಧ್ಯ ಪರ್ವತಗಳ ಅರಣ್ಯಪ್ರದೇಶದಲ್ಲಿ ಅಲೆಯುತ್ತಿರುವನು ಅವನು ಇಲ್ಲಿಗೆ ಬರುವುದಕ್ಕೆ ತಕ್ಕವನಲ್ಲ ಅವನಿಗುಂಟಾಗಿರುವ ಪಿಶಾಚತ್ವಕ್ಕೆ ಶಿವಕಥಾಶ್ರವಣವೇ ದಿವ್ಯೌಷಧವಾಗಿದೆ. ಎಂದು ಹೇಳಿ ತನ್ನ ಬಳಿಯಲ್ಲಿ ಸೇವೆಮಾಡುತ್ತಿದ್ದ ತುಂಬುರನೆಂಬ ಗಂಧರ್ವನನ್ನು ಕುರಿತು ಎಲೈ ಗಂಧರ್ವನೆ! ನೀನು ಈ ಬ್ರಾಹ್ಮಣಸ್ತ್ರೀ ಸಮೇತನಾಗಿ ವಿಮಾನದಲ್ಲಿ ಕುಳಿತು ವಿಂಧ್ಯಾರಣ್ಯಕ್ಕೆ ಹೋಗಿ ಅಲ್ಲಿ ಪಿಶಾಚರೂಪದಿಂದಿರುವ ಇವಳ ಗಂಡನಿಗೆ ಶಿವಕಥಾಶ್ರವಣವನ್ನು ಮಾಡಿಸಿ ಆ ಸತ್ಕಥಾಶ್ರವಣದಿಂದ ಅವನು ಧನ್ಯನಾದಮೇಲೆ ಅವನನ್ನು ಇಲ್ಲಿಗೆ ಕರೆದು ಕೊಂಡು ಬಾ! ಎಂದು ಆಜ್ಞಾಪಿಸಿದಳು.

ಬಳಿಕ ಆ ಗಂಧರ್ವನು ಮಹಾದೇವಿಯ ಅನುಜ್ಞೆಯಂತೆ ವಿಮಾನವನ್ನು ಹತ್ತಿ ಆ ಬ್ರಾಹ್ಮಣಸ್ತ್ರೀ ಸಮೇತನಾಗಿ ವಿಂದ್ಯಾರಣ್ಯಕ್ಕೆ ಬಂದು ಅಲ್ಲಿ ಪಿಶಾಚತ್ವದಿಂದ ನರಳುತ್ತಿದ್ದ ಬ್ರಾಹ್ಮಣನಿಗೆ ಪ್ರತಿದಿನವೂ ಶಿವಕಥಾಶ್ರವಣವಾಗುವಂತೆ ವಲ್ಲಕಿಯೆಂಬ ತನ್ನ ವೀಣೆಯಿಂದ ನಿತ್ಯವೂ ಶಿವಕಥೆಗಳನ್ನು ಹಾಡುತ್ತಿದ್ದನು. ಆದರಿಂದ ಆ ಬ್ರಾಹ್ಮಣನ ಪಿಶಾಚತ್ವವು ಪರಿಹಾರವಾಗಿ ಅವನಿಗೆ ದಿವ್ಯ ಸುಂದರವಾದ ಶರೀರವುಂಟಾಯಿತು. ಬಳಿಕ ಆ ಗಂಧರ್ವನು ಆ

ಪತಿಗಳನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ಪಾರ್ವತೀಪರಮೇ
ಗೆ ಹೊರಟುಹೋದನು. ಎಲೈ ಋಷಿಗಳಿರಾ! ಈ ಅಧ್ಯಾಯವು
ದಿವ್ಯೌಷಧವಾದುದು, ಶಿವಭಕ್ತಿಯನ್ನು ಹೆಚ್ಚಿಸುವುದು, ಸಕಲ
ಪಾಪಹರಿಸುವುದು, ಆದಕಾರಣ ಜ್ಞಾನಕ್ಕೆ ಸಾಧನವಾಗಿ ಪರ
ತಿಗೆ ಕಾರಣವಾಗಿರುವ ಈ ಕಥೆಯನ್ನು ಯಾರು ಹೇಳುವರೊ!
ಕೇಳುವರೊ! ಯಾರು ಪೂಜಿಸುವರೋ! ಯಾರು ಪಠಿಸುವರೊ!
[illegible]ಗೆ ಉಪದೇಶಿಸುವರೊ! ಅವರೆಲ್ಲರು ಧನ್ಯರಾಗಿ ಸುಖದಿಂದ
ಇಹಲೋಕದಲ್ಲಿ ಅನುಭವಿಸಬೇಕಾದ ಭೋಗಭಾಗ್ಯಗಳನ್ನು ಅನುಭವಿಸಿದ
ತರ ಕಡೆಗೆ ಶಿವಸಾಯುಜ್ಯವನ್ನು ಪಡೆಯುವರೆಂದು ಸೂತಪುರಾಣಿಕನು
ಶೌನಕಾದಿ ಮಹರ್ಷಿಗಳಿಗೆ ಹೇಳುತ್ತಿದ್ದನೆಂಬಲ್ಲಿಗೆ ಕಲ್ಯಾಣಪುರೀನಿಲಯ ಕವಿ
ನಾಗಶರ್ಮ ಪರಿಷ್ಕೃತ ಬ್ರಹ್ಮೋತ್ತರಖಂಡದಲ್ಲಿ ಮಂಗಳ ಮಯವಾದ
ಇಪ್ಪತ್ತು ಮೂರನೆಯ ಅಧ್ಯಾಯಕ್ಕೆ ಮಂಗಳಮಸ್ತು.

## ನಮಸ್ಕೃತಿ ಪ್ರಶಂಸೆ.

ನಮಶ್ಶಿವಾಭ್ಯಾಂ ನವಯೌವನಾಭ್ಯಾಂ ಪರಸ್ಪರಾಶ್ಲಿಷ್ಟವಪುರ್ಧರಾಭ್ಯಾಂ |
ನಗೇಂದ್ರಕನ್ಯಾ ವೃಷಕೇತನಾಭ್ಯಾಂ ನಮೋನಮಶ್ಶಂಕರಪಾರ್ವತೀಭ್ಯಾಂ || ೧ ||

ನಮಶ್ಶಿವಾಭ್ಯಾಂ ನಯನೋತ್ಸವಕಾಭ್ಯಾಂ ನಮಸ್ಕೃತಾಭೀಷ್ಟವರಪ್ರದಾಭ್ಯಾಂ |
ನಾರಾಯಣೇನಾರ್ಚಿತಪಾದುಕಾಭ್ಯಾಂ ನಮೋನಮಶ್ಶಂಕರಪಾರ್ವತೀಭ್ಯಾಂ || ೨ ||

ನಮಶ್ಶಿವಾಭ್ಯಾಂ ವೃಷವಾಹನಾಭ್ಯಾಂ ವಿರಿಂಚಿವಿಷ್ಣ್ವಿಂದ್ರಸುಪೂಜಿತಾಭ್ಯಾಂ |
ವಿಭೂತಿಪಾಟೀರವಿಲೇಪನಾಭ್ಯಾಂ ನಮೋನಮಶ್ಶಂಕರಪಾರ್ವತೀಭ್ಯಾಂ || ೩ ||

ನಮಶ್ಶಿವಾಭ್ಯಾಂ ಪರಮೌಷಧಾಭ್ಯಾಂ ಪಂಚಾಕ್ಷರೀಪಂಜರ ರಂಜಿತಾಭ್ಯಾಂ |
ಪ್ರಪಂಚಸೃಷ್ಟಿಸ್ಥಿತಿಸಂಹೃತಿಭ್ಯಾಂ ನಮೋನಮಶ್ಶಂಕರಪಾರ್ವತೀಭ್ಯಾಂ || ೪ ||

ನಮಶ್ಶಿವಾಭ್ಯಾಂ ಕಲಿನಾಶಕಾಭ್ಯಾಂ ಕಂಕಾಲಕಲ್ಯಾಣವಪುರ್ಧರಾಭ್ಯಾಂ |
ಕೈಲಾಸಶೈಲಸ್ಥಿತದೇವತಾಭ್ಯಾಂ ನಮೋನಮಶ್ಶಂಕರಪಾರ್ವತೀಭ್ಯಾಂ || ೫ ||

ನಮಶ್ಶಿವಾಭ್ಯಾಂ ವಿಷಮೇಕ್ಷಣಾಭ್ಯಾಂ ಬಿಲ್ವಚ್ಛದಾಮಲ್ಲಿಕದಾಮಭೃದ್ಭ್ಯಾಂ |
ಶೋಭಾವತೀಶಾಂತವತೀಶ್ವರಾಭ್ಯಾಂ ನಮೋನಮಶ್ಶಂಕರಪಾರ್ವತೀಭ್ಯಾಂ || ೬ ||

ನಮಶ್ಶಿವಾಭ್ಯಾಂ ಜಗದ್ವಿಗ್ರಹಾಭ್ಯಾಂ ಜಂಭಾರಿಮುಖ್ಯಾಮರವಂದಿತಾಭ್ಯಾಂ |
ಅಶೇಷಲೋಕೈಕಹಿತಂಕರಾಭ್ಯಾಂ ನಮೋನಮಶ್ಶಂಕರಪಾರ್ವತೀಭ್ಯಾಂ || ೭ ||

ನಮಶ್ಶಿವಾಭ್ಯಾಂ ಶಶಿಶೇಖರಾಭ್ಯಾಂ ಸಮಸ್ತಸಂಪದ್ಧೃತಿಮುದ್ರಿಕಾಭ್ಯಾಂ |
ಸಮಸ್ತವಿದ್ಯಾಭಿರುಪಾಸಿತಾಭ್ಯಾಂ ನಮೋನಮಶ್ಶಂಕರಪಾರ್ವತೀಭ್ಯಾಂ || ೮ ||

ನಮಶ್ಶಿವಾಭ್ಯಾಂ ನರವಾಹನಾಭ್ಯಾಂ ರವೀಂದುವೈಶ್ವಾನರಲೋಚನಾಭ್ಯಾಂ |
ರಾಕೇಂದುಸಂಕಾಶಮುಖಾಂಬುಜಾಭ್ಯಾಂ ನಮೋನಮಶ್ಶಂಕರಪಾರ್ವತೀಭ್ಯಾಂ || ೯ ||

ನಮಶ್ಶಿವಾಭ್ಯಾಂ ಪರದೇವತಾಭ್ಯಾಂ ವಧೂವರಾಭ್ಯಾಂ ವರಚಕ್ಷುಷಾಭ್ಯಾಂ |
ವರಪ್ರದಾಭ್ಯಾಂ ವರದಕ್ಷಿಣಾಭ್ಯಾಂ ನಮೋನಮಶ್ಶಂಕರಪಾರ್ವತೀಭ್ಯಾಂ || ೧೦ ||

ಜಗತ್ಪಿತೃಭ್ಯಾಂ ಜಗದೀಶ್ವರಾಭ್ಯಾಂ ಜರಾರ್ತಿದುಃಖಾರ್ಣವಶೋಷ-
ಣಯಗ್ರಥಾಭ್ಯಾಂ ಜಿತಮಾರುತಾಭ್ಯಾಂ ನಮೋನಮಶ್ಶಂಕರಪಾರ್ವತೀಭ್ಯಾಂ
ಅನಂತಕಲ್ಯಾಣಗುಣಾಶ್ರಿತಾಭ್ಯಾಂ ವಿಚಾಸವೈವಾಹವಿಚಕ್ಷಣಾಭ್ಯಾಂ
ವಿಧೀಂದ್ರಲೋಕಾದಿಭಿಸೇವಿತಾಭ್ಯಾಂ ನಮೋನಮಶ್ಶಂಕರಪಾರ್ವತೀಭ್ಯಾಂ
ಸುಗಂಧಿಸಂರೂಪಿತಸುಂದರಾಭ್ಯಾಂ ಸುಪುಷ್ಪಹಾರೈಸ್ಸಮಲಂಕೃತಾಭ್ಯಾಂ
ಮಹಾರ್ಘಭೂಷೈಶ್ಚವಿಭೂಷಿತಾಭ್ಯಾಂ ನಮೋನಮಶ್ಶಂಕರಪಾರ್ವತೀಭ್ಯಾಂ
ರತೀಮನೋಜಾತನಿಷೇವಿತಾಭ್ಯಾಂ ರಮಾಹರಿಭ್ಯಾಮಹಿಪೂಜಿತಾಭ್ಯಾಂ ।
ವಿರಿಂಚಿವಾಣೀಸ್ತುತಿವಂದಿತಾಭ್ಯಾಂ ನಮೋನಮಶ್ಶಂಕರಪಾರ್ವತೀಭ್ಯಾಂ
ಶುಚಿಸ್ಮಿತಾಭ್ಯಾಂ ಶುಭಸಂಸ್ಥಿತಾಭ್ಯಾಂ ಶುಕ್ಲೇಂದುಖಂಡೇನವಿಭೂಷಿತಾಭ್ಯಾಂ
ಸುಖಪ್ರದಾಭ್ಯಾಂ ಸುರರಕ್ಷಕಾಭ್ಯಾಂ ನಮೋನಮಶ್ಶಂಕರಪಾರ್ವತೀಭ್ಯಾಂ ॥ ೧

ಕಂ॥ ಸಂತತಿ ಸುಖಸೌಭಾಗ್ಯವ ।
ನಂತೆಯೆ ಸದ್ಭಾವಭಕ್ತಿ ಶಕ್ತಿಯ ನೆಲೆಯಂ ।
ಚಿಂತೆಯನುಳಿದಾಯುಷ್ಯವ ।
ಕಂತುಹರಂ ಕುಡುಗೆ ನಮಗೆ ಸಕಲಾರ್ಥಗಳಂ ॥೧॥

ಸ್ಕಾಂದದೆ ವ್ಯಾಸಂ ರಚಿಸಿಹ ।
ಬಂಧುರಬಮ್ಹೋತ್ತರಖಂಡದರ್ಥವನನುವಿಂ ॥
ಇಂದು ಕಲಾಧರ ನೊಲಿವಂ ।
ತಂದಂಮಿಗೆ ತಿದ್ದಿ ಬರೆದನಿದ ಕವಿನಾಗಂ ॥೨॥

ಮೂಲಗ್ರಂಥದ ವಿವರವ ।
ನಾಲೋಕಿಸುತದಕೆ ತಕ್ಕ ಸಂದರ್ಭಗಳಂ ॥
ಮೇಲೆ ನಲನು ಗೊಳಿಸುತ್ತಂ ।
ಲೀಲೆಯ ಮಧುರೋಕ್ತಿಯಿಂದೆ ಬರೆದಿರ್ಪೆನಿದಂ ॥೩॥

ಮಂಗಳಮಕ್ಕೆ ಮಹೇಶಗೆ ।
ಮಂಗಳ ಮಯಿಮಕ್ಕೆ ಭಕ್ತಸಂಕತಿಗನಿಶಂ ॥
ಪಿಂಗದ ಧನಕನಕಮಯಂ ।
ಸಂಗತಮೆನಿಸಿರ್ಕೆ ಲೋಕಮಂಬಿಯ ಕೃಪೆಯಿಂ ॥೪॥

ಶ್ರೀ ಶಿವಾರ್ಪಣಮಸ್ತು. ಸ್ವಸ್ತ್ಯಸ್ತು.

ಬ್ರಹ್ಮೋತ್ತರಖಂಡಂ ಸಂಪೂರ್ಣಂ.

